# ಕನ್ನಡ ಭಾಷೆ: ಲಿಂಗಸಂಬಂಧಿ ಆಯಾಮಗಳು

(ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು
ಚಂದ್ರಕಲಾ.ಜಿ

ಮಾರ್ಗದರ್ಶಕರು
ಡಾ.ಡಿ.ಪಾಂಡುರಂಗಬಾಬು
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ





ಕನ್ನಡ ಭಾಷಾಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬
೨೦೧೬

# ಕನ್ನಡ ಭಾಷೆ: ಲಿಂಗಸಂಬಂಧಿ ಆಯಾಮಗಳು

(ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ., ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
ಚಂದ್ರಕಲಾ.ಜಿ



ಮಾರ್ಗದರ್ಶಕರು
ಪ್ರೊ.ಡಿ.ಪಾಂಡುರಂಗಬಾಬು
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಕನ್ನಡ ಭಾಷಾಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬
೨೦೧೭



## ಸಂಶೋಧಕರ ಪ್ರಮಾಣ ಪತ್ರ

**'ಕನ್ನಡ ಭಾಷೆ: ಲಿಂಗಸಂಬಂಧಿ ಆಯಾಮಗಳು'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಪ್ರೊ.ಡಿ.ಪಾಂಡುರಂಗಬಾಬು** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Chandrakala

**ಚಂದ್ರಕಲಾ.ಜಿ**
ಸಂಶೋಧಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ: ೦೪.೦೨.೨೦೧೭

# ಮಾರ್ಗದರ್ಶಕರ ಪ್ರಮಾಣ ಪತ್ರ

**ಚಂದ್ರಕಲಾ.ಜಿ** ಅವರು **'ಕನ್ನಡ ಭಾಷೆ: ಲಿಂಗಸಂಬಂಧಿ ಆಯಾಮಗಳು'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. **ಪಿಎಚ್.ಡಿ.,** ಪದವಿಗೆ ಕನ್ನಡ ವಿಶ್ವವಿದ್ಯಾಲಯದಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು


**ಪ್ರೊ.ಡಿ.ಪಾಂಡುರಂಗಬಾಬು**
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ


ಸ್ಥಳ: ವಿದ್ಯಾರಣ್ಯ
ದಿನಾಂಕ: ೦೪.೦೨.೨೦೧೭

# ಪರಿವಿಡಿ

## ಅಧ್ಯಾಯ–ಒಂದು

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಸಮುದಾಯ ಮತ್ತು ಭಾಷೆಯ ಅಂತರ್‌ಸಂಬಂಧವನ್ನು ಅರಿಯುವ ಪ್ರಯತ್ನದ ಹಿನ್ನೆಲೆಯಲ್ಲಿ ಸಮಾಜೋಭಾಷಿಕ ಅಧ್ಯಯನ ಎಂಬ ಅಧ್ಯಯನ ಶಾಖೆ ಪ್ರಾರಂಭವಾಯಿತು. ಇದು ಸಾಮಾಜಿಕವಾಗಿ ಭಾಷೆಯ ವೈವಿಧ್ಯತೆಗಳನ್ನು ಕುರಿತು ಅಧ್ಯಯನ ಮಾಡುವ ಅಧ್ಯಯನ ವಿಧಾನವೂ ಹೌದು. ಇಲ್ಲಿ ಜಾತಿ, ವರ್ಗ, ಲಿಂಗ, ವಯಸ್ಸು, ವಿದ್ಯಾಭ್ಯಾಸ ಮುಂತಾದವುಗಳ ಮುಖಾಂತರ ಭಾಷೆ ಮತ್ತು ಸಮುದಾಯಗಳ ನಡುವಿನ ಸಂಬಂಧದ ಸ್ವರೂಪವನ್ನು ತಿಳಿಯಲಾಗುತ್ತದೆ. ವರ್ಗ, ಜಾತಿ, ಶಿಕ್ಷಣ, ವಯೋಮಾನಕ್ಕೆ ಅನುಗುಣವಾಗಿ ಪುರುಷ ಮತ್ತು ಮಹಿಳೆಯರ ಭಾಷಾ ಬಳಕೆ ಭಿನ್ನವಾಗಿರುವುದು ಒಂದು ನೆಲೆಯಾದರೆ, ವ್ಯಕ್ತಿಯು ಗಂಡು ಅಥವಾ ಹೆಣ್ಣು ಎಂಬುದರಿಂದ ಉಂಟಾಗುವ ಭಾಷಾ ಬಳಕೆಯ ಭಿನ್ನತೆಗಳು ಮತ್ತೊಂದು ನೆಲೆಯವು. ಸಮುದಾಯಗಳಲ್ಲಿನ ಲಿಂಗಸಂಬಂಧಿ ಗ್ರಹಿಕೆಗಳೆಂದರೆ, ವೈರುಧ್ಯಗಳ ವ್ಯಾಖ್ಯಾನ ಎನ್ನುವ ಮಟ್ಟಿಗೆ ಅವುಗಳನ್ನು ವಿರೋಧೀ ನೆಲೆಗಳಲ್ಲಿ ಪರಿಭಾವಿಸಲಾಗುತ್ತಿದೆ.

ಸಮುದಾಯದಲ್ಲಿನ ತಾರತಮ್ಯದ ನೆಲೆಯ ಚರ್ಚೆಗಳು ಪ್ರಧಾನ–ಅಧೀನ, ಶ್ರೇಷ್ಠ–ಕನಿಷ್ಠ ಎಂಬ ಮೇಲು ಕೆಳಗಿನ ಸಂಬಂಧದ ಗ್ರಹಿಕೆಯಲ್ಲೇ ನಿರ್ವಚನಗೊಳ್ಳುತ್ತಿರುತ್ತವೆ. ಜಾತಿವಾದ, ಜನಾಂಗವಾದ, ವರ್ಗವಾದ, ಸ್ತ್ರೀವಾದದ ಪರಿಕಲ್ಪನೆಗಳನ್ನು ಈ ಹಿನ್ನೆಲೆಯಲ್ಲಿ ಗ್ರಹಿಸಬಹುದು. ಸಮುದಾಯವು ಪ್ರತಿಪಾದಿಸುವ ಯಾವುದೇ ನಿಲುವುಗಳನ್ನಾದರೂ ಆ ಸಮುದಾಯದ ಕೆಲವು ತಾತ್ವಿಕತೆಗಳು ನಿಯಂತ್ರಿಸುತ್ತಿರುತ್ತವೆ. ತಾತ್ವಿಕತೆ ಎಂದರೆ ಒಂದು ಸಮುದಾಯವು ತನ್ನ ಗ್ರಹಿಕೆ ಮತ್ತು ಧೋರಣೆಗಳಿಗೆ ಅನುಗುಣವಾಗಿ ನಿರ್ವಚಿಸಿಕೊಂಡಿರುವ ನಿಲುವುಗಳ ಮೊತ್ತ ಎನ್ನಬಹುದು. ಈ ತಾತ್ವಿಕತೆಗಳು ಅಪ್ರಜ್ಞಾಪೂರ್ವಕ ನೆಲೆಗಳಲ್ಲಿ ಆ ಸಮುದಾಯದ ಜೀವನ ವಿಧಾನಗಳನ್ನು ನಿಯಂತ್ರಿಸುತ್ತಿರುತ್ತವೆ. ಇಡೀ ಸಮುದಾಯಕ್ಕೆ ಅನ್ವಯವಾಗುವ ಒಂದು ತಾತ್ವಿಕತೆ ಎಂಬುದು ಇರುವುದಿಲ್ಲ. ಸಮುದಾಯ ಪ್ರತಿಪಾದಿಸುವ ನಿಲುವುಗಳಿಗೆ ಭಿನ್ನವಾದ ಉದಾಹರಣೆಗಳು, ಸದಾ ಪ್ರತಿರೋಧದ ನೆಲೆಯಲ್ಲಿ ಚಲಿಸುತ್ತಿರುತ್ತವೆ. ಇವುಗಳು ಹೆಚ್ಚಿನ ಸಂದರ್ಭಗಳಲ್ಲಿ ಸಮುದಾಯದಲ್ಲಿ ಮುಖ್ಯವಾಹಿನಿಗೆ ಬರುವುದಿಲ್ಲ. ಆದರೂ ಅಂಚಿನ ನೆಲೆಯಲ್ಲಿ ಅಸ್ತಿತ್ವವನ್ನು ಪಡೆದಿರುತ್ತವೆ.

ಈ ಹಿನ್ನೆಲೆಯಲ್ಲಿ ಸಮುದಾಯದಲ್ಲಿನ ಲಿಂಗಸಂಬಂಧಿ ಗ್ರಹಿಕೆಗಳನ್ನು ಪರಿಶೀಲಿಸಬೇಕಾಗುತ್ತದೆ. ಲಿಂಗಸಂಬಂಧಿ ಅಧ್ಯಯನಗಳು ಸಾಹಚರ್ಯದ ನೆಲೆಗಿಂತ, ವಿರೋಧದ ನೆಲೆಯಲ್ಲಿ ಹೆಚ್ಚಾಗಿ ತಮ್ಮ ನಿಲುವುಗಳನ್ನು ಮಂಡಿಸುತ್ತಿರುವುದು ಕಂಡುಬರುತ್ತಿದೆ. ಬಹುಮುಖಿ ಸಂಸ್ಕೃತಿಗಳಿರುವ ಭಾರತದಲ್ಲಿ ಗಂಡು ಮತ್ತು ಹೆಣ್ಣಿನ ತಾರತಮ್ಯದ ನೆಲೆಯನ್ನು ಏಕಮುಖವಾಗಿ ಗ್ರಹಿಸುವುದಕ್ಕಿಂತ ಬಹುಮುಖಿ ಆಯಾಮಗಳ ಮುಖಾಂತರ ಪರಿಶೀಲಿಸುವ ಅನಿವಾರ್ಯತೆ ಇಂದಿನ ಅಧ್ಯಯನಗಳಿಗಿದೆ. ಯಾಜಮಾನ್ಯ–ಅಧೀನ, ಶ್ರೇಷ್ಠ–ಕನಿಷ್ಠ ಎಂಬ ಚೌಕಟ್ಟಿನೊಳಗೆ ಲಿಂಗಸಂಬಂಧಗಳನ್ನು ತಂದು ಚರ್ಚಿಸುತ್ತಿರುವುದನ್ನು ಮರುಪರಿಶೀಲಿಸುವ ಅಗತ್ಯವಿದೆ. ಪ್ರಧಾನ ಮತ್ತು ಅಧೀನ ಕಲ್ಪನೆಯಲ್ಲಿ ಅಧಿಕಾರದ ಕೇಂದ್ರವಾಗಿ ಪುರುಷನನ್ನು, ಅಧೀನ ನೆಲೆಯಲ್ಲಿ ಸ್ತ್ರೀಯನ್ನು ಹಾಗೂ ಶ್ರೇಷ್ಠ–ಕನಿಷ್ಠದ ಕಲ್ಪನೆಯಲ್ಲಿ ಮೇಲ್ದರ್ಜೆಯ ಪ್ರತೀಕವಾಗಿ ಪುರುಷನನ್ನು, ಕೆಳದರ್ಜೆಯ ಪ್ರತೀಕವಾಗಿ ಸ್ತ್ರೀಯನ್ನು ನೋಡುತ್ತಿರುವ ಮಾನದಂಡಗಳನ್ನು ಪರಿಶೀಲಿಸಬೇಕಾಗಿದೆ.

ಸಾಮಾಜಿಕವಾಗಿ ಗಂಡು ಮತ್ತು ಹೆಣ್ಣಿನ ಪಾತ್ರ ನಿರ್ವಹಣೆ ಲಿಂಗ ಪ್ರತಿನಿಧಿಗಳಾಗಿರುವುದರ ಜೊತೆಗೆ ವರ್ಗ, ಜಾತಿ, ವಿದ್ಯಾಭ್ಯಾಸ, ಪ್ರಾದೇಶಿಕ, ವಯೋಮಾನಕ್ಕನುಗುಣವಾಗಿ ಈ ಪ್ರತಿನಿಧೀಕರಣ ಬದಲಾಗುತ್ತಿರುತ್ತದೆ. ಗಂಡು ಮತ್ತು ಹೆಣ್ಣಿನ ಪಾತ್ರನಿರ್ವಹಣೆಯನ್ನು ಏಕಮುಖವಾಗಿ ನೋಡುವುದಕ್ಕಿಂತ ಬಹುಮುಖಿ ಆಯಾಮಗಳಲ್ಲಿ ಪರಿಶೀಲಿಸುವುದು ಸೂಕ್ತವೆನಿಸುತ್ತದೆ. ಒಬ್ಬ ಹೆಣ್ಣು ಕೌಟುಂಬಿಕ ವಲಯದೊಳಗೆ ಲಿಂಗತಾರತಮ್ಯಕ್ಕೆ ಒಳಗಾಗಿದ್ದರೂ ಸಾಮಾಜಿಕ ನೆಲೆಯಲ್ಲಿ ಆಕೆ ಜಾತಿವಾದಿಯಾಗಿರಬಹುದು. ಕೆಳಜಾತಿಯ ಪುರುಷರನ್ನು ಒಳಗೊಂಡಂತೆ ಮೇಲ್ಜಾತಿಯ ಹೆಣ್ಣು ತಾರತಮ್ಯದ ನೆಲೆಯಲ್ಲಿಯೇ ವರ್ತಿಸುತ್ತಿರುತ್ತಾಳೆ. ಒಬ್ಬ ಪುರುಷ ಕೌಟುಂಬಿಕ ವಲಯದೊಳಗೆ ಅಧಿಕಾರ ಕೇಂದ್ರದಲ್ಲಿದ್ದರೂ ಕೆಲಸ ಮಾಡುವ ವಲಯದಲ್ಲಿ ಮಹಿಳಾ ಅಧಿಕಾರಿಯ ಬಳಿ ಅಧೀನ ನೆಲೆಯಲ್ಲಿರಬೇಕಾಗುತ್ತದೆ. ಕೌಟುಂಬಿಕ ವಲಯ ಹಾಗೂ ಸಾಮಾಜಿಕ ವಲಯಗಳಲ್ಲಿ ಗಂಡು ಮತ್ತು ಹೆಣ್ಣಿನ ಪಾತ್ರನಿರ್ವಹಣೆ ಯಾವಾಗಲೂ ಏಕಮುಖವಾಗಿರುವುದಿಲ್ಲ. ಅದು ಬಹುಮುಖಿ ನೆಲೆಗಳಲ್ಲಿ ಚಲಿಸುತ್ತಿರುತ್ತದೆ. ಈ ಹಿನ್ನೆಲೆಯಲ್ಲಿ ಇಂದು ನಾವು ಲಿಂಗಸಂಬಂಧಿ ಅಧ್ಯಯನಗಳನ್ನು ಕೈಗೊಳ್ಳಬೇಕಿದೆ.

ಮಹಿಳಾಪರ ಚಿಂತನೆಗಳು ಪ್ರಾರಂಭವಾದ ನಂತರ, ಸಮಾಜದ ವಿವಿಧ ಸ್ತರಗಳಲ್ಲಿನ ಲಿಂಗತಾರತಮ್ಯವನ್ನು ಕುರಿತ ಚರ್ಚೆಗಳು ಪ್ರಾರಂಭವಾದವು. ಸಮುದಾಯದಲ್ಲಿನ ಲಿಂಗತಾರತಮ್ಯದ ನೆಲೆಗಳನ್ನು ಪರಿಶೀಲಿಸಲು ತೊಡಗಿದ ಸ್ತ್ರೀವಾದಿಗಳು, ಸಾಮಾಜಿಕವಾಗಿ ಯಾವ ಯಾವ ವ್ಯವಸ್ಥೆಗಳು ಅಸಮಾನತೆಯನ್ನು ಪೋಷಿಸುವ ಕೆಲಸವನ್ನು ಮಾಡುತ್ತಿವೆ ಎಂಬುದನ್ನು ಗುರುತಿಸಲು ಮುಂದಾದರು. ಈ ಸಂದರ್ಭದಲ್ಲಿ ಸ್ತ್ರೀವಾದಿಗಳಿಗೆ ಭಾಷೆಯು ಒಂದು ಪ್ರಮುಖ ಆಕರವಾಗಿ ಗೋಚರವಾಯಿತು. ಹೆಣ್ಣಿನ ಅಭಿವ್ಯಕ್ತಿ ನೆಲೆ ಸಾಮಾಜಿಕವಾಗಿ ನಿಯಂತ್ರಿತವಾಗುತ್ತಿರುವುದನ್ನು ಗುರುತಿಸಿದ ಸ್ತ್ರೀವಾದಿಗಳು ಭಾಷೆ ಕೂಡ ಪಿತೃಪ್ರಧಾನತೆಯ ಛಾಯೆಯನ್ನು ಒಳಗೊಂಡಿರುವ ವ್ಯವಸ್ಥೆ ಎಂಬ ನಿಲುವಿಗೆ ಬಂದರು. ಭಾಷೆಯ ಆಡುಮಾತಿನ ನೆಲೆ ಮತ್ತು ಬರಹದ ಭಾಷೆ ಎರಡರಲ್ಲೂ ಲಿಂಗತಾರತಮ್ಯದ ನೆಲೆಗಳನ್ನು ಗುರುತಿಸಲು ಮುಂದಾದರು. ಈ ಹಿನ್ನೆಲೆಯಲ್ಲಿ ಲಿಂಗಸಂಬಂಧಿ ತಾರತಮ್ಯಗಳನ್ನು ಭಾಷೆಯು ಪ್ರೇರೇಪಿಸುತ್ತಿದೆ, ನಿರ್ವಹಿಸುತ್ತಿದೆ ಎಂಬ ನಿಲುವುಗಳನ್ನು ವ್ಯಕ್ತಪಡಿಸಿದರು.

ಸಮಾಜದಲ್ಲಿ ಈಗಾಗಲೇ ಲಿಂಗಸಂಬಂಧಗಳನ್ನು ಗ್ರಹಿಸುವ ಕೆಲವು ಸಿದ್ಧಮಾದರಿಗಳಿವೆ. ಇವುಗಳ ಮುಖಾಂತರ ಪರಿಶೀಲಿಸಲು ಮುಂದಾದಲ್ಲಿ, ಹೊರಟಲ್ಲಿಗೆ ಬಂದು ನಿಲ್ಲುವ ಸಾಧ್ಯತೆಗಳು ಹೆಚ್ಚಾಗಿರುತ್ತವೆ. ಈಗಿರುವ ಸಿದ್ಧಮಾದರಿಗಳೆಲ್ಲ ಸುಳ್ಳೆಂದಲ್ಲ. ಪ್ರಸ್ತುತ ಅವುಗಳನ್ನು ಪರೀಕ್ಷಿಸಲು ಅನುಸರಿಸುವ ಮಾನದಂಡಗಳನ್ನು ಎಚ್ಚರಿಕೆಯಿಂದ ಬಳಸಬೇಕಾಗುತ್ತದೆ. ತಾರತಮ್ಯದ ಪೋಷಕವಾಗಿ ಭಾಷೆ ಕಾರ್ಯನಿರ್ವಹಿಸುತ್ತಿದೆ ಎಂದು ಹೊರಟಾಗ, ತಾರತಮ್ಯದ ಪೋಷಣೆಗೆ ಪೂರಕ ಮಾಹಿತಿಗಳನ್ನು ಮಾತ್ರ ಆಕರಗಳಾಗಿ ಬಳಸುವ ತೊಡಕುಗಳು ಉಂಟಾಗುತ್ತವೆ. ಭಾಷೆಯ ಬಹುತ್ವದ ಬಳಕೆಯ ವೈವಿಧ್ಯತೆಗಳನ್ನು ಪರಿಶೀಲಿಸುವ ಕಡೆಗೆ ಅಧ್ಯಯನಗಳು ಸಾಗಬೇಕಿದೆ. ಒಂದು ಭಾಷೆಯ ಒಂದು ನೆಲೆಯನ್ನು ಮಾತ್ರ ಆ ಇಡೀ ಭಾಷಿಕ ಸಮುದಾಯದ ಪ್ರತಿನಿಧೀಕರಣ ಎಂಬಂತೆ ಮಂಡಿಸುತ್ತಿರುವ ಗ್ರಹಿಕೆಗಳನ್ನು ಪರಿಶೀಲಿಸಬೇಕಾಗುತ್ತದೆ. ಲಿಂಗತಾರತಮ್ಯದ ನೆಲೆಗಳನ್ನು ವಿವರಿಸಲು ಭಾಷಿಕ ಆಕರಗಳನ್ನು ಬಳಸುವ ಮತ್ತು ಆ ಬಳಸುವಿಕೆಯನ್ನು ಗ್ರಹಿಸುವ ನೆಲೆಗಳು ಹಾಗೂ ಆ ಗ್ರಹಿಸುವಿಕೆಯನ್ನು ನಿಯಂತ್ರಿಸುತ್ತಿರುವ ಮಾನದಂಡಗಳನ್ನು ಕುರಿತು ಪರಿಶೀಲಿಸುವ ಹಿನ್ನೆಲೆಯಲ್ಲಿ 'ಕನ್ನಡ ಭಾಷೆ: ಲಿಂಗ ಸಂಬಂಧಿ ಆಯಾಮಗಳು' ಎಂಬ ಶೀರ್ಷಿಕೆಯಡಿಯಲ್ಲಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಸ್ತ್ರೀವಾದಿಗಳು ಸಾಮಾಜಿಕವಾಗಿ ಗಂಡು ಮತ್ತು ಹೆಣ್ಣಿನ ಸಂಬಂಧವನ್ನು ಯಜಮಾನ ಮತ್ತು ಅಧೀನ ನೆಲೆಯಲ್ಲಿ ಗ್ರಹಿಸಿರುವಂತೆ, ಈ ಮಾನದಂಡಗಳನ್ನೇ ಭಾಷೆಗೆ ಅನ್ವಯಿಸಿ ಗಂಡಿನ ಭಾಷೆ ಅಧಿಕಾರದ ಭಾಷೆ ಮತ್ತು ಹೆಣ್ಣಿನ ಭಾಷೆ ಅಧೀನ ಭಾಷೆ ಎಂದು ನಿರ್ವಚಿಸುತ್ತಿದ್ದಾರೆ. ಹೆಣ್ಣಿನ ಭಾಷಾ ಬಳಕೆಯು ಸಾಮಾಜಿಕವಾಗಿ ನಿಯಂತ್ರಿತವಾಗುತ್ತಿರುವುದನ್ನು ಗುರುತಿಸಿ ಭಾಷೆಯ ಸ್ವರೂಪವನ್ನು ಚರ್ಚಿಸಲು ಪ್ರಯತ್ನಿಸುತ್ತಾರೆ. ಇವರ ಒಟ್ಟಾರೆ ಭಾಷಿಕ ಗ್ರಹಿಕೆಗಳನ್ನು ಎರಡು ಹಂತಗಳಲ್ಲಿ ಪರಿಶೀಲಿಸಬಹುದು.

೧. ಲಿಂಗತಾರತಮ್ಯದ ಪೋಷಕವಾಗಿ ಭಾಷೆಯನ್ನು ಗುರುತಿಸುವುದು.

೨. ಭಾಷೆಯಲ್ಲಿನ ಲಿಂಗತಾರತಮ್ಯವನ್ನು ನಿವಾರಿಸಲು ಅನುಸರಿಸಬೇಕಾದ ಮಾರ್ಗಗಳನ್ನು ಗುರುತಿಸುವುದು.

ಭಾಷೆಯ ಪುರುಷ ಪ್ರಾಧಾನ್ಯತೆಯನ್ನು ಅದರ ರಾಚನಿಕತೆಯಲ್ಲಿಯೇ ಗುರುತಿಸಬಹುದು ಎಂದು ವಾದಿಸುವವರ ಕೆಲವು ನಿಲುವುಗಳನ್ನು ಪರಿಶೀಲಿಸುವುದಾದರೆ, ಸಮುದಾಯವಾಚಕಗಳು ಯಾವಾಗಲು ಪುರುಷವಾಚಕಗಳಲ್ಲೇ ರಚನೆಯಾಗಿವೆ ಮತ್ತು ಬಳಕೆಯಾಗುತ್ತಿವೆ ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ. ಮಾನವ, ಮನುಷ್ಯ, ಭಾರತೀಯ ಮುಂತಾದ ಸಮುದಾಯ ಸೂಚಕ ಪದಗಳು ಪುರುಷವಾಚಕಗಳಾಗಿವೆ. ಮಹಿಳೆಯೂ ಆ ಸಮುದಾಯದ ಭಾಗವಾಗಿದ್ದರೂ ಅವಳು ನಿರ್ವಚನವಾಗುತ್ತಿರುವುದು ಪುರುಷವಾಚಕಗಳ ಮುಖಾಂತರ ಎಂಬುದು ಇವರ ನಿಲುವು. ಇದನ್ನು ಕೆಲವು ಉದಾಹರಣೆಗಳ ಮೂಲಕ ಪರಿಶೀಲಿಸಬಹುದು:

ಉದಾ: ೧. ಮಾನವನು ಪ್ರಾಣಿ ಜಾತಿಯ ಅವಸ್ಥೆಯಿಂದ ವಿಕಾಸ ಹೊಂದಿ ಮನುಷ್ಯನಾಗಿ ಜೀವಿಸಲು ಆರಂಭಿಸಿದ ಕಾಲದಿಂದ ಶಿಲಾಯುಗದ ಸಂಸ್ಕೃತಿ ಪ್ರಾರಂಭವಾಗುತ್ತದೆ.

೨. ಮನುಷ್ಯನ ಪಾಲಿಗೆ ಅವನು ಬೆಳೆದಂತೆ, ಅವನ ಅರಿವು ತೀಕ್ಷ್ಣವಾಗುತ್ತ ಬಂದಂತೆ ತನ್ನ ಜೀವನವನ್ನು ಆತ ಸಮಸ್ಯೆಯಾಗಿ ತಿಳಿಯುವುದು ಸಹಜ.

೩. ಋಗ್ವೇದ ಕಾಲದಲ್ಲಿ ಸ್ತ್ರೀಯರಿಗೆ ಸಮಾಜದಲ್ಲಿ ಗೌರವಾನ್ವಿತ ಸ್ಥಾನವಿತ್ತು. ಅನೇಕ ಸ್ತ್ರೀಯರು ಪಂಡಿತರು, ಕವಿಗಳು, ತತ್ವಜ್ಞಾನಿಗಳಾಗಿದ್ದರು.

೪. ಚಾಲುಕ್ಯರ ಕಾಲದ ಸಂಸ್ಕೃತ ವಿದ್ವಾಂಸರುಗಳೆಂದರೆ ರವಿಕೀರ್ತಿ, ವಿಜ್ಜಿಕ ಮತ್ತು ಅಕಳಂಕರು. ಎರಡನೇ ಪುಲಿಕೇಶಿಯ ಸೊಸೆಯಾದ ವಿಜ್ಜಿಕ ಎಂಬ ಕವಿಯತ್ರಿಯ ಕೌಮುದೀ ಮಹೋತ್ಸವ ಮುಖ್ಯವಾದ ಸಂಸ್ಕೃತ ನಾಟಕವಾಗಿದೆ.

ಮೇಲಿನ ಉದಾಹರಣೆಗಳಲ್ಲಿ ಮೊದಲ ಎರಡು ಉದಾಹರಣೆಗಳಲ್ಲಿ ಬಳಕೆಯಾಗಿರುವ ಮಾನವ, ಮನುಷ್ಯ ಪದಗಳು ಇಡೀ ಮಾನವರ ಕುಲಕ್ಕೆ ಅನ್ವಯವಾಗುವಂತೆ ಬಳಕೆಯಾಗಿವೆ. ಈ ಪದಗಳು ಪುರುಷಸೂಚಕಗಳಾಗಿ ಕಂಡರೂ, ಅದರೊಳಗೆ ಮಹಿಳೆಯೂ ಸೇರಿಕೊಂಡಿದ್ದಾಳೆಂಬುದು ಅರ್ಥಗ್ರಹಿಕೆ. ಇಲ್ಲಿ ಬಳಕೆಯಾಗಿರುವ ಸರ್ವನಾಮಗಳಾದ ಅವನು, ಆತ ಇವುಗಳು ಪುರುಷ ಸರ್ವನಾಮಗಳಾಗಿವೆ. ಉದಾಹರಣೆ ಮೂರರಲ್ಲಿ ಸ್ತ್ರೀಯರಿಗೆ ಪಂಡಿತರು, ಕವಿಗಳು, ತತ್ವಜ್ಞಾನಿಗಳು ಎಂದು ಬಳಸಲಾಗಿದೆ. ಪ್ರತ್ಯೇಕವಾಗಿ ಮಹಿಳೆಯನ್ನು ಕುರಿತು ಮಾತನಾಡುವಾಗ ಮಾತ್ರ, ಉದಾಹರಣೆ ನಾಲ್ಕರಲ್ಲಿ ಕವಿಯತ್ರಿ ಎಂಬ ಪದವನ್ನು ಬಳಸಲಾಗಿದೆ.

ಭಾಷಾ ಬಳಕೆಯಲ್ಲಿನ ಈ ರೀತಿಯ ಕೆಲವು ಉದಾಹರಣೆಗಳನ್ನು ಇಟ್ಟುಕೊಂಡು ಸ್ತ್ರೀವಾದಿಗಳು ಭಾಷೆಯು ಪುರುಷ ಪ್ರಾಧಾನ್ಯ ನೆಲೆಯನ್ನು ಒಳಗೊಂಡಿದೆ ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ. ಇಡೀ ಸಮುದಾಯಯಕ್ಕೆ ಅನ್ವಯವಾಗುವ ಪದರಚನೆಗಳೂ ಪುರುಷಮೂಲೀಯವಾಗಿಯೇ ಸೃಷ್ಟಿಯಾಗುತ್ತವೆಯೇ? ಅಥವಾ ಇಡೀ ಸಮುದಾಯಕ್ಕೆ ಅನ್ವಯವಾಗುವ, ನಿರ್ದಿಷ್ಟ ಲಿಂಗಸೂಚಕವಿಲ್ಲದ ಪದಗಳು ಸೃಷ್ಟಿಯಾಗಿಲ್ಲವೇ? ಎಂಬ ಪ್ರಶ್ನೆಗಳು ಇಲ್ಲಿ ಎದುರಾಗುತ್ತವೆ. ಕನ್ನಡ ಭಾಷಿಕ ಪರಿಸರದಲ್ಲಿ ಪುಲ್ಲಿಂಗ ವಾಚಕಗಳನ್ನು ಸಾಧಿಸಲು ಕೆಲವು ಸಂದರ್ಭಗಳಲ್ಲಿ 'ಅ' ಪ್ರತ್ಯಯವನ್ನು ಬಳಸಲಾಗುತ್ತದೆ. ಉದಾಹರಣೆಗೆ ಹುಡುಗ, ಕುಂಟ, ಕಿವುಡ, ಈ ಕಾರಣದಿಂದಾಗಿ ಮಾನವ, ಮನುಷ್ಯ ಪದಗಳು ಪುರುಷವಾಚಕಗಳು ಮಾತ್ರ ಎಂದು ತಿಳಿಯಲಾಗಿದೆಯೇ? ಎಂಬುದನ್ನು ಈ ಅಧ್ಯಯನದಲ್ಲಿ ಪರಿಶೀಲನೆಗೆ ಒಳಪಡಿಸಲಾಗಿದೆ.

ಸ್ತ್ರೀವಾದಿಗಳಿಗೆ ಎದುರಾದ ಮತ್ತೊಂದು ಪ್ರಶ್ನೆಯೆಂದರೆ, ಭಾಷೆಯಲ್ಲಿ ಮಹಿಳೆಯ ಅಸ್ಮಿತೆಯನ್ನು ಕುರಿತದ್ದು. ಸಾಮಾಜಿಕವಾಗಿ ಮಹಿಳೆಯು ತನ್ನನ್ನು ತಾನು ತಂದೆ ಅಥವಾ ಗಂಡನ ಮುಖಾಂತರ ಗುರುತಿಸಿಕೊಳ್ಳುವ ಅನಿವಾರ್ಯತೆಯಿದೆ. ಈ ರೀತಿಯ ಅನಿವಾರ್ಯತೆ, ಸಾಮಾಜಿಕ ಮಿತಿಗಳು ಪುರುಷನಿಗೆ ಇಲ್ಲ ಎನ್ನುವುದನ್ನು ಸ್ತ್ರೀವಾದಿಗಳು ಪ್ರಶ್ನಿಸುತ್ತಾರೆ. ಉದಾಹರಣೆಗೆ ಹೆಣ್ಣನ್ನು ಮದುವೆಯ ಮುಂಚೆ ಕುಮಾರಿ ಎಂದು, ಮದುವೆಯ ನಂತರ ಶ್ರೀಮತಿ ಎಂದು ಗುರುತಿಸುವ ಪರಿಪಾಠವಿದೆ. ಆದರೆ ಪುರುಷನಿಗೆ ಮದುವೆಗೆ ಮುನ್ನ ಮತ್ತು ನಂತರ ಅವನ ಸಾಮಾಜಿಕ ಸ್ಥಾನಮಾನಗಳು ಬದಲಾಗುವುದಿಲ್ಲ. ಅವನನ್ನು ಶ್ರೀ ಎಂದೇ ಗುರುತಿಸಲಾಗುತ್ತದೆ ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ. ಇದು ಭಾಷಿಕ ಸಂಗತಿಯೇ? ಅಥವಾ ಭಾಷಿಕೇತರ ಸಂಗತಿಯೇ? ಎಂಬುದನ್ನು ಮೊದಲು ಸ್ಪಷ್ಟಪಡಿಸಿಕೊಳ್ಳಬೇಕಾಗುತ್ತದೆ. ಹೆಣ್ಣು ಹೀಗೆಯೇ ಸಾಮಾಜಿಕವಾಗಿ ಗುರುತಿಸಿಕೊಳ್ಳಬೇಕೆಂಬ ಅನಿವಾರ್ಯತೆ ಸೃಷ್ಟಿಸಿರುವುದು ಸಮಾಜ. ಸಾಮಾಜಿಕವಾಗಿ ವ್ಯಕ್ತಿಗಳನ್ನು ವ್ಯಕ್ತಿಗತ ನೆಲೆಗಳಲ್ಲಿ ಗುರುತಿಸುವ ಪರಿಪಾಠವಿದ್ದಿದ್ದರೆ, ಈ ರೀತಿಯ ಭಿನ್ನತೆಗಳು ಭಾಷಿಕವಾಗಿ ಸೃಷ್ಟಿಯಾಗುತ್ತಿರಲಿಲ್ಲ

ಎಂಬುದನ್ನು ಗಮನಿಸಬೇಕಾಗುತ್ತದೆ. ಇಲ್ಲಿ ಸಾಮಾಜಿಕ ಸಮಸ್ಯೆಗಳನ್ನು ಭಾಷಿಕ ಸಮಸ್ಯೆಗಳಾಗಿ ಪರಿಗಣಿಸುತ್ತಿರುವಿಕೆಯನ್ನು ಕುರಿತು ಅಧ್ಯಯನ ಮಾಡುವ ಅಗತ್ಯವಿದೆ.

ಸ್ತ್ರೀವಾದಿಗಳು ಭಾಷೆ ಮತ್ತು ಸಮಾಜಗಳ ಅಂತರ್‌ಸಂಬಂಧವನ್ನು ಗ್ರಹಿಸುವಲ್ಲಿ ಇರುವ ತೊಡಕುಗಳನ್ನು ಈ ಅಧ್ಯಯನದಲ್ಲಿ ಪರಿಶೀಲಿಸಲಾಗಿದೆ. ಭಾಷೆ ಮತ್ತು ಸಮಾಜಗಳ ಸಂಬಂಧಗಳನ್ನು ಅರಿಯುವುದರಲ್ಲಿ ಸ್ತ್ರೀವಾದಿಗಳ ಗ್ರಹಿಕೆ ವಿರುದ್ಧ ದಿಕ್ಕಿನಲ್ಲಿ ಚಲಿಸುತ್ತಿದೆ.

ಸಮಾಜ ⟶ ಲಿಂಗತಾರತಮ್ಯ ⟶ ಭಾಷಿಕ ಪ್ರತಿಬಿಂಬ

ಭಾಷೆ ⟶ ಲಿಂಗತಾರತಮ್ಯ ⟶ ಸಾಮಾಜಿಕ ಪ್ರತಿಬಿಂಬ

ಸ್ತ್ರೀವಾದಿಗಳ ಗ್ರಹಿಕೆಗಳ ಪ್ರಕಾರ, ಭಾಷೆಯಿಂದ ಲಿಂಗತಾರತಮ್ಯ ಉಂಟಾಗಿ ಸಮಾಜದಲ್ಲಿ ಪ್ರತಿಬಿಂಬವಾಗುತ್ತಿದೆ. ಆದರೆ, ಸಮಾಜದಲ್ಲಿನ ಲಿಂಗತಾರತಮ್ಯದ ನೆಲೆಗಳು, ಧೋರಣೆಗಳು ಭಾಷೆಯಲ್ಲಿ ಪ್ರತಿಬಿಂಬವಾಗುತ್ತಿರುತ್ತವೆ ಎಂಬುದು ಸರಿಯಾದ ಮಾದರಿಯಾಗಿದೆ. ಭಾಷೆ ತಂತಾನೇ ಲಿಂಗತಾರತಮ್ಯವನ್ನು ಪ್ರಕಟಿಸುವುದಿಲ್ಲ. ಸಮಾಜದಲ್ಲಿನ ಲಿಂಗತಾರತಮ್ಯದ ನೆಲೆಗಳು ಹೇಗೆ ಬಳಕೆಯಲ್ಲಿ ಗೋಚರವಾಗುತ್ತಿರುತ್ತವೆ ಎಂಬ ನಿಟ್ಟಿನಲ್ಲಿ ಅಧ್ಯಯನಗಳು ನಡೆಯಬೇಕಿದೆ.

ಭಾಷೆ ಮತ್ತು ಲಿಂಗ ಸಂಬಂಧಗಳನ್ನು ಎರಡು ನೆಲೆಗಳಲ್ಲಿ ಗ್ರಹಿಸಲು ಅವಕಾಶವಿದೆ. ಅವುಗಳೆಂದರೆ;

೧. ಭಿನ್ನತೆ

೨. ತಾರತಮ್ಯ

ಗಂಡು ಮತ್ತು ಹೆಣ್ಣಿನ ಭಾಷೆಯಲ್ಲಿ ಭಿನ್ನತೆಗಳಿವೆ ಎಂದ ಮಾತ್ರಕ್ಕೆ ಅವು ತಾರತಮ್ಯದ ನೆಲೆಗೆ ಬಂದು ನಿಲ್ಲಬೇಕೆಂದಿಲ್ಲ ಹಾಗೂ ತಾರತಮ್ಯದ ನೆಲೆಗಳನ್ನು ಯಾವಾಗಲೂ ಭಿನ್ನತೆಯ ನೆಲೆಯಲ್ಲಿ ಗ್ರಹಿಸಲು ಸಾಧ್ಯವಾಗುವುದಿಲ್ಲ. ಎಲ್ಲಿ ಭಿನ್ನತೆಗಳಿವೆ, ಎಲ್ಲಿ ತಾರತಮ್ಯಗಳಿವೆ ಎಂಬುದನ್ನು ಸ್ಪಷ್ಟಪಡಿಸಿಕೊಳ್ಳಬೇಕು. ಭಿನ್ನತೆಯ ನೆಲೆಗಳು ಯಾವಾಗ ತಾರತಮ್ಯದ ನೆಲೆಗಳನ್ನು ಮುಟ್ಟುತ್ತವೆ ಎಂಬುದನ್ನು ಪರಿಶೀಲಿಸಬೇಕಾಗುತ್ತದೆ. ಭಾಷೆಯಲ್ಲಿರುವ ನಿಷೇಧಗಳನ್ನು ಎರಡು ರೀತಿಯಲ್ಲಿ ಗ್ರಹಿಸಬಹುದು.

೧. ಸಾಮಾನ್ಯ ನಿಷೇಧಗಳು

೨. ಲಿಂಗಸಂಬಂಧಿ ನಿಷೇಧಗಳು

ಇದನ್ನು ಕೆಲವು ಉದಾಹರಣೆಗಳ ಮುಖಾಂತರ ಪರಿಶೀಲಿಸಬಹುದು.

***ಉದಾಹರಣೆ:***

**ಅ) ಸಾಮಾನ್ಯ ನಿಷೇಧಗಳು**

೧. ಮಾತು ಮೀರಿ ನಡಿಬೇಡ

೨. ಮಾತಿಗೆ ಪ್ರತಿ ಮಾತಾಡಬೇಡ

೩. ಕೈ ತೋರ್ಸಿ ಮಾತಾಡಬೇಡ

೪. ಮಾತು ಮನೆ ಕೆಡಿಸ್ತು, ತೂತು ಒಲೆ ಕೆಡಿಸ್ತು

೫. ಮಾತೆಚ್ಚಾದ ಮನೆಯಾಳು, ತೂತೆಚ್ಚಾದ ಕೊಡ ಹಾಳು

ಆ) ಲಿಂಗಸಂಬಂಧಿ ನಿಷೇಧಗಳು

೧. ಹೆಂಗುಸ್ರು ಮಾತು ಪಡಸಾಲೆಗೆ ಕೇಳ್ಬಾರ್ದು

೨. ಗಂಡಸ್ರು ಮಾತಾಡ್ಬೇಕಾದ್ರೆ ಮಧ್ಯ ಬಾಯಾಕ್ಬಾರ್ದು

೩. ಹೆಂಗ್ಸರ ಮಾತ್ ಕಟ್ಕಂಡು ನಾವ್ ಗಂಡಸ್ರು ಹಾಳಾದ್ವಿ

೪. ನಿನಗೆ ಅರ್ಥ ಆಗಲ್ಲ ಸುಮ್ನಿರು

ಉದಾಹರಣೆ ಒಂದರ ಭಾಷಿಕ ನಿಷೇಧಗಳೆಲ್ಲವೂ ಗಂಡು ಮತ್ತು ಹೆಣ್ಣಿಗೆ ಸಮಾನ ನೆಲೆಯಲ್ಲಿ ಅನ್ವಯವಾಗುತ್ತವೆ. ಸಮಾಜದಲ್ಲಿ ಹಿರಿಯರ ಎದುರಿಗೆ ಹೆಚ್ಚು ಮಾತನಾಡುವುದು, ಮಾತಿಗೆ ಮಾತು ಬೆಳೆಸುವುದು ಮುಂತಾದವುಗಳು ಗಂಡು ಮತ್ತು ಹೆಣ್ಣು ಇಬ್ಬರಿಗೂ ನಿಷಿದ್ಧವಾಗಿರುತ್ತವೆ. ಉದಾಹರಣೆ ಎರಡರ ಭಾಷಿಕ ನಿಷೇಧಗಳು ಹೆಣ್ಣಿಗೆ ಮಾತ್ರ ಅನ್ವಯವಾಗುವಂತಹು. ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣಿನ ಅಭಿವ್ಯಕ್ತಿ ನೆಲೆಗಳನ್ನು ನಿಯಂತ್ರಿಸುವ ಪ್ರಯತ್ನಗಳು ನಡೆಯುತ್ತಿರುತ್ತವೆ. ಇವುಗಳು ಭಾಷೆಯ ಮಿತಿಗಳೇ? ಅಥವಾ ಭಾಷಾ ಬಳಕೆಯ ನೆಲೆಗಳನ್ನು ನಿಯಂತ್ರಿಸುತ್ತಿರುವ ಸಮುದಾಯದ ಮಿತಿಗಳೇ? ಎಂಬ ನಿಟ್ಟಿನಲ್ಲಿ ಇವುಗಳನ್ನು ಪರಿಶೀಲಿಸಬೇಕಾಗುತ್ತದೆ. ಈ ನಿಷೇಧಗಳು ಕೌಟುಂಬಿಕ ವಲಯಕ್ಕೆ ಮಾತ್ರ ಸೀಮಿತವಾಗಿರುತ್ತವೆ. ಸಾಮಾಜಿಕವಾಗಿ ಉನ್ನತ ಅಧಿಕಾರದಲ್ಲಿರುವ ಮಹಿಳೆಗೆ ಈ ರೀತಿಯ ನಿಷೇಧಗಳು ಅನ್ವಯವಾಗುತ್ತವೆಯೇ? ಇಲ್ಲಿ ಹೆಣ್ಣಾದ ಕಾರಣದಿಂದ ನಿಷೇಧಗಳು ಅವಳಿಗೆ ಅನ್ವಯವಾಗುವುದಿಲ್ಲ. ಅವಳ ಅಧೀನದಲ್ಲಿ ಕೆಲಸಮಾಡುವ ಪುರುಷರಿಗೆ ಅವಳು ಭಾಷಿಕ ನಿಷೇಧಗಳನ್ನು ವಿಧಿಸಬಹುದು. ಭಾಷೆ ಮತ್ತು ಲಿಂಗಸಂಬಂಧಗಳನ್ನು ಏಕಮುಖವಾಗಿ ಗ್ರಹಿಸಲು ಆಗುವುದಿಲ್ಲ.

ಅಧಿಕಾರ, ಹುದ್ದೆ, ವಿದ್ಯಾಭ್ಯಾಸ ಹೀಗೆ ಅನೇಕ ನೆಲೆಗಳಲ್ಲಿ ಗಂಡು ಮತ್ತು ಹೆಣ್ಣಿನ ಪಾತ್ರವಿಭಜನೆ ಮೇಲುಕೆಳಗಾಗುತ್ತಿರುತ್ತದೆ ಎಂಬುದನ್ನು ಪರಿಗಣಿಸಿ ಅಧ್ಯಯನಗಳು ಸಾಗಬೇಕಾಗುತ್ತದೆ. ಆಧುನಿಕ ಸಂದರ್ಭದಲ್ಲಿನ ಕೌಟುಂಬಿಕ ಪರಿಸರ ಭಿನ್ನವಾಗಿದೆ. ಇಲ್ಲಿ ಗಂಡು ಮತ್ತು ಹೆಣ್ಣು ಎಂಬ ಭೇದವಿಲ್ಲದೆ, ಸಮಾನವಾಗಿ ನಿರ್ಧಾರಗಳನ್ನು ತೆಗೆದುಕೊಳ್ಳುವ ಸ್ವಾತಂತ್ರ್ಯ ಇಬ್ಬರಿಗೂ ಇದೆ. ಸಮಾನ ಮನಃಸ್ಥಿತಿಯ ಗಂಡು ಮತ್ತು ಹೆಣ್ಣು ಪರಸ್ಪರ ಅಭಿಪ್ರಾಯಗಳನ್ನು ಹಂಚಿಕೊಳ್ಳುವ, ಸಮಾನ ನಿರ್ಧಾರ ತೆಗೆದುಕೊಳ್ಳುವ ನಿಟ್ಟಿನಲ್ಲಿ ಇಂದು ಕುಟುಂಬ ವ್ಯವಸ್ಥೆ ಸಾಗುತ್ತಿರುವುದನ್ನು ಪರಿಗಣಿಸಬೇಕಾಗುತ್ತದೆ.

ಭಾಷೆಯಲ್ಲಿರುವ ಲಿಂಗತಾರತಮ್ಯವನ್ನು ಸರಿಪಡಿಸಲು ಸ್ತ್ರೀವಾದಿಗಳು ಹೆಣ್ಣಿನದೇ ಹೊಸ ಭಾಷೆಯನ್ನು ಕಟ್ಟುವ ಅಥವಾ ಈಗಿರುವ ಭಾಷೆಯನ್ನು ಪುನರ್‌ರಚಿಸಬೇಕಾದ ಅನಿವಾರ್ಯತೆಯನ್ನು ವ್ಯಕ್ತಪಡಿಸುತ್ತಾರೆ. ಸಾಮಾಜಿಕ ಬದಲಾವಣೆಯ ಮುಖಾಂತರ ಭಾಷೆ ಬದಲಾಗುತ್ತಿರುತ್ತದೆಯೇ? ಭಾಷೆಯಲ್ಲಿ ಬದಲಾವಣೆಯನ್ನು ತರುವ ಮುಖಾಂತರ ಸಮಾಜದಲ್ಲಿನ ತಾರತಮ್ಯದ ನೆಲೆಗಳನ್ನು ಸರಿಪಡಿಸಲಾಗುತ್ತದೆಯೇ? ಬದಲಾದ ಕಾಲಘಟ್ಟದಲ್ಲಿ ಸಾಂಪ್ರದಾಯಿಕವಾಗಿ ವಿಂಗಡಿಸಿರುವ ಪುರುಷ

ಮತ್ತು ಮಹಿಳೆಯ ಪಾತ್ರವಿಭಜನೆ ಬದಲಾವಣೆ ಹೊಂದುತ್ತಿರುತ್ತವೆ. ಈ ಅಂಶಗಳನ್ನು ಕೂಡ ಅಧ್ಯಯನಗಳು ಪರಿಗಣಿಸಬೇಕಾಗುತ್ತದೆ.

ಸಮುದಾಯಗಳಲ್ಲಿ ಹೆಣ್ಣು ಮತ್ತು ಗಂಡಿನ ಬಗ್ಗೆ ಇರುವ ಧೋರಣೆಗಳು, ಅವರಿಗೆ ನೀಡುವ ನಿರ್ದೇಶನಗಳು, ನಿಷೇಧಗಳು, ನಿರ್ವಚನಗಳು ಭಾಷೆಯಲ್ಲಿ ಅವು ಹೇಗೆ ಪ್ರತಿಬಿಂಬಗೊಳ್ಳುತ್ತವೆ ಎಂಬ ನೆಲೆಯಲ್ಲಿ ಭಾಷೆ ಮತ್ತು ಲಿಂಗಸಂಬಂಧಗಳ ಅಧ್ಯಯನಗಳು ನಡೆಯಬೇಕಿದೆ. ಸಮುದಾಯಗಳಲ್ಲಿರುವ ಅಸಮಾನತೆಯ ಸ್ವರೂಪಗಳನ್ನು ಬಹುತ್ವದ ನೆಲೆಗಳಲ್ಲಿ ಗ್ರಹಿಸಬೇಕಾದ ಅನಿವಾರ್ಯತೆ ಇಂದಿನ ಅಧ್ಯಯನಗಳಿಗಿದೆ. ಈ ಹಿನ್ನೆಲೆಯಲ್ಲಿ 'ಕನ್ನಡ ಭಾಷೆ: ಲಿಂಗಸಂಬಂಧಿ ಆಯಾಮಗಳು' ಎಂಬ ಶೀರ್ಷಿಕೆಯಡಿಯಲ್ಲಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಮೇಲಿನ ವಿಚಾರಗಳ ಹಿನ್ನೆಲೆಯಲ್ಲಿ ಈ ಅಧ್ಯಯನವು ಕೆಲವು ಉದ್ದೇಶಗಳನ್ನು ಒಳಗೊಂಡಿದೆ. ಅವುಗಳೆಂದರೆ:

೧. ಲಿಂಗತಾರತಮ್ಯದ ನೆಲೆಗಳನ್ನು ನಿರ್ವಚಿಸುತ್ತಿರುವ ಅಧ್ಯಯನಗಳು ಸಾಮಾಜಿಕ ತಾರತಮ್ಯವನ್ನು ನಿರೂಪಿಸುವಲ್ಲಿ ಭಾಷಿಕ ಆಕರಗಳನ್ನು ಬಳಸಿಕೊಳ್ಳುತ್ತಿರುವ ಬಗೆಗಳು ಯಾವುವು? ಎಂಬುದನ್ನು ಪರಿಶೀಲಿಸುವುದು.

೨. ಸಮಾಜ, ಲಿಂಗ ಮತ್ತು ಭಾಷೆಯ ಅಂತರ್‌ಸಬಂಧಗಳನ್ನು ಸ್ತ್ರೀವಾದಿಗಳು ಗ್ರಹಿಸುತ್ತಿರುವ ಕ್ರಮಗಳು ಯಾವುವು? ಎಂಬುದನ್ನು ಪರಿಶೀಲಿಸುವುದು.

೩. ಲಿಂಗತಾರತಮ್ಯಕ್ಕೆ ಭಾಷೆಯೂ ಒಂದು ಕಾರಣವೇ? ಅಥವಾ ಸಾಮಾಜಿಕ, ಸಾಂಸ್ಕೃತಿಕ ನೆಲೆಯ ಲಿಂಗತಾರತಮ್ಯದ ನಂಬಿಕೆ ಮತ್ತು ನಿಲುವುಗಳನ್ನು ಭಾಷೆಗೂ ಆರೋಪಿಸಲಾಗುತ್ತಿದೆಯೇ? ಎಂಬುದನ್ನು ಪರಿಶೀಲಿಸುವುದು.

೪. ಭಾಷೆಗೂ ಅಧಿಕಾರ ಕೇಂದ್ರಗಳಿಗೂ ಇರುವ ಸಂಬಂಧದ ಸ್ವರೂಪ ಯಾವ ನೆಲೆಯದು? ಅದು ಏಕಮುಖಿ ನೆಲೆಯಲ್ಲಿರುತ್ತದೆಯೇ? ಅಥವಾ ಬಹುಮುಖಿ ನೆಲೆಗಳಲ್ಲಿ ಚಲಿಸುತ್ತಿರುತ್ತದೆಯೇ? ಎಂಬುದನ್ನು ಪರಿಶೀಲಿಸುವುದು.

೫. ಗಂಡಿನ ಭಾಷೆ ಮತ್ತು ಹೆಣ್ಣಿನ ಭಾಷೆ ಬೇರೆ ಬೇರೆ ಎಂದು ಹೇಳುವಲ್ಲಿ ಅನುಸರಿಸುತ್ತಿರುವ ಮಾನದಂಡಗಳು ಯಾವುವು? ಈ ಮಾನದಂಡಗಳು ತಾರತಮ್ಯದ ನೆಲೆಗಳನ್ನು ನಿಯಂತ್ರಿಸುತ್ತಿವೆಯೇ? ಅಥವಾ ತಾರತಮ್ಯದ ನೆಲೆಗಳನ್ನು ಮುಂದುವರಿಸುತ್ತಿವೆಯೇ? ಎಂಬುದನ್ನು ಪರಿಶೀಲಿಸುವುದು.

೬. ಸಮಾಜದಲ್ಲಿ ಈಗಾಗಲೇ ರೂಪಿತವಾಗಿರುವ ಸಿದ್ಧಾಂತಗಳನ್ನು ಭಾಷೆ ಮತ್ತು ಲಿಂಗತಾರತಮ್ಯದ ಚೌಕಟ್ಟಿಗೆ ಅನ್ವಯಿಸಿ ವಿವರಿಸುವಲ್ಲಿ ಎದುರಾಗುತ್ತಿರುವ ತೊಡಕಗಳು ಮತ್ತು ಸಮಸ್ಯೆಗಳು ಯಾವ ರೀತಿಯವು? ಎಂಬುದನ್ನು ಪರಿಶೀಲಿಸುವುದು.

೭. ಗಂಡು ಮತ್ತು ಹೆಣ್ಣಿನ ಅಭಿವ್ಯಕ್ತಿ ನೆಲೆಗಳನ್ನು ಜೈವಿಕ ಭಿನ್ನತೆಗಳೇನಾದರೂ ನಿಯಂತ್ರಿಸುತ್ತಿವೆಯೇ? ಎಂಬುದನ್ನು ಪರಿಶೀಲಿಸುವುದು.

೮. ಲಿಂಗವಿಭಜನೆಯನ್ನು ವ್ಯಾಕರಣಾತ್ಮಕವಾಗಿ ವಿಂಗಡಿಸುವಲ್ಲಿ ಅನುಸರಿಸುತ್ತಿರುವ ಮಾನದಂಡಗಳು ಯಾವುವು? ಎಂಬುದನ್ನು ಪರಿಶೀಲಿಸುವುದು.

೯. ನಿಘಂಟುಗಳು ಅನುಸರಿಸುವ ಅರ್ಥರಚನಾ ನಿಯಮಗಳಲ್ಲಿರುವ ಲಿಂಗಸಂಬಂಧಿ ಅರ್ಥಾನ್ವಯದ ನೆಲೆಗಳು ಯಾವುವು? ಎಂಬುದನ್ನು ಪರಿಶೀಲಿಸುವುದು.

೧೦. ಸಮೂಹ ಮಾಧ್ಯಮವಾದ ಪತ್ರಿಕೆಗಳಲ್ಲಿ ಬಳಕೆಯಾಗುತ್ತಿರುವ ಪುರುಷವಾಚಕಗಳು ಮತ್ತು ಸ್ತ್ರೀವಾಚಕಗಳ ರಚನೆ ಮತ್ತು ಬಳಕೆಯ ನೆಲೆಗಳು ಯಾವುವು? ಎಂಬುದನ್ನು ಪರಿಶೀಲಿಸುವುದು.

೧೧. ಭಾಷೆಯಲ್ಲಿ ಪುರುಷ ಮತ್ತು ಮಹಿಳೆ ಇಬ್ಬರಿಗೂ ಸಮಾನವಾಗಿ ಅನ್ವಯವಾಗುವ ತಟಸ್ಥ (ನ್ಯೂಟ್ರಲ್) ಪದಗಳನ್ನು ಆ ಸಮುದಾಯದ ಒಂದು ವಿದ್ಯಾವಂತ ಯುವವರ್ಗ ಹೇಗೆ ಗ್ರಹಿಸುತ್ತಿದೆ ಎಂಬುದು ಹಾಗೂ ಸಮುದಾಯದಲ್ಲಿನ ಕೆಲವು ಲಿಂಗ ಸಂಬಂಧಿ ಗ್ರಹಿಕೆಗಳು ಅಪ್ರಜ್ಞಾಪೂರ್ವಕ ನೆಲೆಲಯಲ್ಲಿ ಇವರನ್ನು ನಿಯಂತ್ರಿಸುತ್ತಿವೆಯೇ? ಎಂಬುದನ್ನು ಕೆಲವು ಪ್ರಾಯೋಗಿಕ ಅಧ್ಯಯನಗಳ ಮುಖಾಂತರ ಪರಿಶೀಲಿಸುವುದು. ಈ ಮುಂತಾದ ಉದ್ದೇಶಗಳನ್ನು ಈ ಅಧ್ಯಯನ ಒಳಗೊಂಡಿದೆ.

**ಅಧ್ಯಯನದ ವಿಧಾನ ಮತ್ತು ವ್ಯಾಪ್ತಿ**

ಈ ಅಧ್ಯಯನವು ಸಮಾಜೋಭಾಷಿಕ ಅಧ್ಯಯನ ವಿಧಾನವನ್ನು ಹೊಂದಿದೆ. ವಿಶ್ಲೇಷಣಾತ್ಮಕ ವಿಧಾನ ಹಾಗೂ ಪ್ರಾಯೋಗಿಕ ಅಧ್ಯಯನ ಮಾದರಿಯನ್ನು ಅಳವಡಿಸಿಕೊಳ್ಳಲಾಗಿದೆ. ಈ ಅಧ್ಯಯನದಲ್ಲಿ ಇಲ್ಲಿಯವರೆಗೆ ನಡೆದಿರುವ ಭಾಷೆ ಮತ್ತು ಲಿಂಗಸಂಬಧಗಳನ್ನು ಕುರಿತ ಪಾಶ್ಚಾತ್ಯ ಹಾಗೂ ಕನ್ನಡದಲ್ಲಿನ ಸ್ತ್ರೀವಾದಿಗಳ ಮತ್ತು ಭಾಷಾ ವಿಜ್ಞಾನಿಗಳ ಚರ್ಚೆಗಳು, ಪುಸ್ತಕಗಳು ಹಾಗೂ ಸಂಶೋಧನಾ ಬರಹಗಳನ್ನು ಮೂಲ ಆಕರಗಳಾಗಿ ಬಳಸಿಕೊಳ್ಳಲಾಗಿದೆ. ಪಾಶ್ಚಾತ್ಯರಲ್ಲಿ ಡೇಲ್ ಸ್ಪೆಂಡರ್, ಡೊಬೆರಾ ಕ್ಯಾಮರನ್, ಪೆನಲಪೆ ಎಕರ್ಟ್, ಡೊಬೆರಾ ಟೆನನ್, ಮಾಲ್ಟ್‌ಜ್, ಬೋರ್ಕರ್ ಮುಂತಾದವರ ಚರ್ಚೆಗಳನ್ನು ಹಾಗೂ ಕನ್ನಡದಲ್ಲಿ ನಾರಾಯಣ ಕೆ.ವಿ., ಶ್ರೀಮತಿ ಎಚ್.ಎಸ್., ಕೃಷ್ಣಪರಮೇಶ್ವರ ಭಟ್, ರಾಘವೇಂದ್ರರಾವ್ ಎಚ್.ಎಸ್., ಲಿಂಗದೇವರು ಹಳೆಮನೆ ಮುಂತಾದವರ ಚರ್ಚೆಗಳನ್ನು ಬಳಸಿಕೊಳ್ಳಲಾಗಿದೆ. ಚರ್ಚೆಗೆ ಪೂರಕವಾಗಿ ಅಗತ್ಯವಿದ್ದಲ್ಲಿ ಆಂಶಿಕ ಕ್ಷೇತ್ರಕಾರ್ಯವನ್ನು ಮಾಡಿ ಮಾಹಿತಿ ಸಂಗ್ರಹಿಸಲಾಗಿದೆ. ಯಾವುದೇ ನಿರ್ದಿಷ್ಟ ಪ್ರದೇಶವನ್ನು ಅಧ್ಯಯನದ ವ್ಯಾಪ್ತಿಯನ್ನಾಗಿಸಿಕೊಂಡಿಲ್ಲ.

ಭಾಷೆ ಮತ್ತು ಲಿಂಗ ಸಂಬಂಧದ ಸ್ವರೂಪವನ್ನು ವಿವರಿಸುವಲ್ಲಿ ಗಂಡು ಮತ್ತು ಹೆಣ್ಣಿನ ಭಾಷಿಕ ನೆಲೆಗಳನ್ನು ಮಾತ್ರ ಪ್ರಧಾನವಾಗಿ ಪರಿಗಣಿಸಲಾಗಿದೆ. ತೃತೀಯ ಲಿಂಗಿಗಳ ವಿಷಯಗಳನ್ನು ಚರ್ಚಿಸಿದರೂ ಅಧ್ಯಯನಕ್ಕೆ ಪೂರಕವಾಗಿ ಮಾತ್ರ ಬಳಸಿಕೊಳ್ಳಲಾಗಿದೆ. ಅಧ್ಯಯನದ ವ್ಯಾಪ್ತಿಯೊಳಗೆ ಅವರನ್ನು ಪರಿಗಣಿಸಿಲ್ಲ. ನಿಘಂಟುಗಳಲ್ಲಿನ ಲಿಂಗಸಂಬಂಧಿ ಅರ್ಥಗಳನ್ನು ಪರಿಶೀಲಿಸುವಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ 'ಸಂಕ್ಷಿಪ್ತ ಕನ್ನಡ ನಿಘಂಟು'ವನ್ನು ಮಾತ್ರ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಪತ್ರಿಕೆಗಳಲ್ಲಿ ಬಳಕೆಯಾಗುತ್ತಿರುವ ಪುರುಷವಾಚಕಗಳು ಮತ್ತು ಸ್ತ್ರೀವಾಚಕಗಳನ್ನು ಪರಿಶೀಲಿಸುವ ಭಾಗದಲ್ಲಿ ದಿನಪತ್ರಿಕೆಗಳಾದ ಪ್ರಜಾವಾಣಿ, ವಿಜಯಕರ್ನಾಟಕ, ಕನ್ನಡಪ್ರಭ ಪತ್ರಿಕೆಗಳು. ಲಂಕೇಶ್ ಪತ್ರಿಕೆ, ಅಗ್ನಿ, ಸುಧಾ, ಕರ್ಮವೀರ ವಾರಪತ್ರಿಕೆಗಳನ್ನು

ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ೨೦೧೪ ಜನವರಿಯಿಂದ ೨೦೧೬ ಜುಲೈ ತಿಂಗಳವರೆಗಿನ ಪತ್ರಿಕೆಗಳನ್ನು ಅಧ್ಯಯನದ ವ್ಯಾಪ್ತಿಯನ್ನಾಗಿಸಿಕೊಳ್ಳಲಾಗಿದೆ. ಮೂರು ನೆಲೆಗಳಲ್ಲಿ ಪ್ರಾಯೋಗಿಕ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಮೊದಲ ಅಧ್ಯಯನದಲ್ಲಿ ೨೦ ಜನ ಪುರುಷರು, ೨೦ ಜನ ಮಹಿಳೆಯರನ್ನು ಬಳಸಿಕೊಳ್ಳಲಾಗಿದೆ. ಎರಡನೇ ಅಧ್ಯಯನದಲ್ಲಿ ೧೦ ಜನ ಪುರುಷರು, ೧೦ ಜನ ಮಹಿಳೆಯರನ್ನು, ಮೂರನೇ ಅಧ್ಯಯನದಲ್ಲಿ ೧೦ ಜನ ಪುರುಷರು ಮತ್ತು ೧೦ ಜನ ಮಹಿಳೆಯರನ್ನು ಅಧ್ಯಯನಕ್ಕೆ ಒಳಗುಮಾಡಿಕೊಳ್ಳಲಾಗಿದೆ.

ಮೇಲಿನ ಉದ್ದೇಶಗಳನ್ನು ಪರಿಶೀಲಿಸಲು ಸಮಾಜೋಭಾಷಿಕ ಅಧ್ಯಯನ ವಿಧಾನದ ಮುಖಾಂತರ ಭಾಷೆ ಮತ್ತು ಲಿಂಗಸಂಬಂಧಗಳ ಸ್ವರೂಪವನ್ನು ವಿಶ್ಲೇಷಿಸಲು ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಒಟ್ಟು ಆರು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಅವುಗಳೆಂದರೆ;

ಅಧ್ಯಾಯ ಒಂದು: **ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ**

ಅಧ್ಯಾಯ ಎರಡು: **ಸ್ತ್ರೀವಾದದಲ್ಲಿ ಭಾಷೆಯ ಬಗೆಗಿನ ಚರ್ಚೆಗಳು**

ಅಧ್ಯಾಯ ಮೂರು: **ಕನ್ನಡ ಭಾಷೆಯ ರಚನೆ ಮತ್ತು ಬಳಕೆಯ ಲಿಂಗಸಂಬಂಧಿ ನೆಲೆಗಳು**

ಅಧ್ಯಾಯ ನಾಲ್ಕು: **ಕನ್ನಡ ಸಮುದಾಯದ ಭಾಷಿಕ ನೆಲೆಗಳು: ಗಂಡು ಮತ್ತು ಹೆಣ್ಣು**

ಅಧ್ಯಾಯ ಐದು: **ಪ್ರಾಯೋಗಿಕ ಅಧ್ಯಯನಗಳು**

ಅಧ್ಯಾಯ ಆರು: **ಸಮಾರೋಪ**

ಅಧ್ಯಾಯ ಎರಡರಲ್ಲಿ ಸ್ತ್ರೀವಾದದಲ್ಲಿ ಭಾಷೆಯ ಬಗೆಗಿನ ಚರ್ಚೆಗಳು ಎಂಬ ಶೀರ್ಷಿಕೆಯಡಿಯಲ್ಲಿ ಭಾಷೆ ಮತ್ತು ಲಿಂಗಸಂಬಂಧಗಳ ಕುರಿತ ಚರ್ಚೆಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಪಾಶ್ಚಾತ್ಯರಲ್ಲಿ ನಡೆದಿರುವ ಭಾಷೆ ಮತ್ತು ಲಿಂಗಸಂಬಂಧದ ಚರ್ಚೆಗಳು ಮತ್ತು ನಿಲುವುಗಳು ಹಾಗೂ ಕನ್ನಡ ಸಂದರ್ಭದಲ್ಲಿ ನಡೆದಿರುವ ಚರ್ಚೆಗಳು ಮತ್ತು ನಿಲುವುಗಳನ್ನು ಈ ಅಧ್ಯಾಯದಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ಲಿಂಗ ಮತ್ತು ಭಾಷೆಯ ಅಂತರ್‌ಸಂಬಂಧಗಳನ್ನು ಸ್ತ್ರೀವಾದಿಗಳು ಗ್ರಹಿಸುತ್ತಿರುವ ನೆಲೆಗಳು ಯಾವುವು ಎಂಬುದನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ದ್ವಿಮಾನ ಪರಿಕಲ್ಪನೆ ಮತ್ತು ಲಿಂಗಭೇದದ ಸ್ವರೂಪ, ಭಾಷೆ ಮತ್ತು ಅಧಿಕಾರದ ಸಂಬಂಧದ ಬಹುಮುಖಿ ಆಯಾಮಗಳ ಸ್ವರೂಪ, ಪೂರ್ವಸಿದ್ಧಾಂತಗಳನ್ನು ಅನ್ವಯಿಸಿಕೊಂಡು ಭಾಷೆ ಮತ್ತು ಲಿಂಗತಾರತಮ್ಯದ ಸಂಬಂಧವನ್ನು ವಿವರಿಸುವಲ್ಲಿ ಉಂಟಾಗುತ್ತಿರುವ ತೊಡಕುಗಳು, ಮನಃಶಾಸ್ತ್ರಜ್ಞರು ಮನಃಶಾಸ್ತ್ರೀಯ ಹಿನ್ನೆಲೆಯಲ್ಲಿ ಭಾಷೆ ಮತ್ತು ಲಿಂಗಸಂಬಂಧಗಳ ಸ್ವರೂಪವನ್ನು ಕುರಿತು ಚರ್ಚಿಸಿರುವ ನೆಲೆಗಳನ್ನು ಈ ಅಧ್ಯಾಯದಲ್ಲಿ ಪರಿಶೀಲಿಸಲಾಗಿದೆ. ಭಾಷೆ ಮತ್ತು ಲಿಂಗಸಂಬಂಧವನ್ನು ಭಿನ್ನತೆ ಮತ್ತು ತಾರತಮ್ಯದ ನೆಲೆಗಳಲ್ಲಿ ಚರ್ಚಿಸಿರುವ ಎರಡೂ ಮಾದರಿಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಅಧ್ಯಾಯ ಮೂರು: ಕನ್ನಡ ಭಾಷಾ ರಚನೆ ಮತ್ತು ಬಳಕೆಯ ಲಿಂಗಸಂಬಂಧಿ ನೆಲೆಗಳು – ಈ ಅಧ್ಯಾಯದಲ್ಲಿ ಭಾಷೆ ಮತ್ತು ಲಿಂಗಸಂಬಂಧದ ಸ್ವರೂಪವನ್ನು ಪರಿಶೀಲಿಸಲು ಭಾಷೆಯನ್ನು ಎರಡು

ಸ್ತರಗಳಲ್ಲಿ ಪರಿಶೀಲಿಸಲಾಗಿದೆ. ೧. ಭಾಷಾ ರಚನೆಯ ಸ್ತರ. ೨. ಭಾಷಾ ಬಳಕೆಯ ಸ್ತರ. ಭಾಷೆಯ ರಚನೆಯ ಸ್ತರದಲ್ಲಿ ಪದ ರಚನೆ ಮತ್ತು ಪದಗಳ ಅರ್ಥಗಳು ಪುರುಷ ಮತ್ತು ಸ್ತ್ರೀಯರಿಗೆ ಅನ್ವಯವಾಗುವ ವಿವಿಧ ನೆಲೆಗಳನ್ನು ಪರಿಶೀಲಿಸಲಾಗಿದೆ. ಬಳಕೆಯ ಸ್ತರದಲ್ಲಿ ಸಮಾಜದಲ್ಲಿನ ಲಿಂಗಸಂಬಂಧಿ ನಿಷೇಧಗಳು, ನಿರ್ಬಂಧಗಳು ಹೇಗೆ ಭಾಷಾ ಬಳಕೆಯನ್ನು ನಿಯಂತ್ರಿಸುತ್ತವೆ ಎಂಬುದನ್ನು ಪರಿಶೀಲಿಸಲಾಗಿದೆ. ವ್ಯಾಕರಣಕಾರರು ಅನುಸರಿಸುವ ಲಿಂಗ ವಿಭಜನೆಯ ಮಾನದಂಡಗಳು, ನಿಘಂಟುಕಾರರು ಅನುಸರಿಸುವ ಪುರುಷ ಪ್ರಾಧಾನ್ಯ ಅರ್ಥರಚನಾ ಮಾದರಿಗಳು ಹಾಗೂ ಪತ್ರಿಕೆಗಳಲ್ಲಿನ ಸ್ತ್ರೀವಾಚಕ ಮತ್ತು ಪುರುಷ ವಾಚಕಗಳ ಬಳಕೆಯ ವಿವಿಧ ನೆಲೆಗಳನ್ನು ಪರಿಶೀಲಿಸಲಾಗಿದೆ. ಗಂಡು ಮತ್ತು ಹೆಣ್ಣಿನ ಕೆಲವು ಜೈವಿಕ ಭಿನ್ನತೆಗಳು ಹೇಗೆ ಸಾಮಾಜಿಕ ಭಿನ್ನತೆಗಳಾಗಿ ರೂಪುಗೊಳ್ಳುತ್ತವೆ? ಕೆಲವು ಜೈವಿಕ ಭಿನ್ನತೆಗಳು ಗಂಡು ಮತ್ತು ಹೆಣ್ಣಿನ ಅಭಿವ್ಯಕ್ತಿ ಕ್ರಮಗಳನ್ನು ನಿಯಂತ್ರಿಸುತ್ತಿರುವುದನ್ನು ವೈಜ್ಞಾನಿಕ ಕಾರಣಗಳ ಮುಖಾಂತರ ಪರಿಶೀಲಿಸಲಾಗಿದೆ. ಬದಲಾದ ಕಾಲಘಟ್ಟಗಳಲ್ಲಿ ಸಮಾಜದಲ್ಲಿನ ಪೂರ್ವಕಲ್ಪಿತ ದೃಷ್ಟಿಕೋನಗಳು ಬದಲಾಗಬೇಕಾದ ಅನಿವಾರ್ಯತೆಯನ್ನು ದೃಷ್ಟಿಯಲ್ಲಿಟ್ಟುಕೊಂಡು, ಭಾಷೆ ಮತ್ತು ಲಿಂಗಸಂಬಂಧವನ್ನು ಈ ಅಧ್ಯಾಯದಲ್ಲಿ ಪರಿಶೀಲಿಸಲಾಗಿದೆ.

ಅಧ್ಯಾಯ ನಾಲ್ಕು: ಕನ್ನಡ ಸಮುದಾಯದ ಭಾಷಿಕ ನೆಲೆಗಳು: ಗಂಡು ಮತ್ತು ಹೆಣ್ಣು–ಈ ಅಧ್ಯಾಯದಲ್ಲಿ ಒಂದು ಸಮುದಾಯವು ಪುರುಷ ಮತ್ತು ಸ್ತ್ರೀಯರ ಬಗೆಗೆ ಹೊಂದಿರುವ ನಿಲುವುಗಳು ಆ ಭಾಷೆಯ ಬಳಕೆಯ ವಿವಿಧ ಸ್ತರಗಳಲ್ಲಿ ಹೇಗೆ ಅಭಿವ್ಯಕ್ತವಾಗಿವೆ ಎಂಬುದನ್ನು ಪರಿಶೀಲಿಸಲಾಗಿದೆ. ಭಾಷಾ ಬಳಕೆಯ ನೆಲೆಗಳಾದ ವ್ಯಕ್ತಿನಾಮಗಳು, ಸಂಬೋಧನಾ ರೂಪಗಳು, ಸಂಬಂಧವಾಚಕಗಳು, ಗಾದೆಗಳು, ಒಡಪುಗಳು, ಬೈಗುಳಗಳಲ್ಲಿರುವ ಲಿಂಗಸಂಬಂಧಿ ನೆಲೆಗಳನ್ನು ಈ ಅಧ್ಯಾಯದಲ್ಲಿ ಪರಿಶೀಲಿಸಲಾಗಿದೆ.

ಅಧ್ಯಾಯ ಐದು: ಪ್ರಾಯೋಗಿ ಅಧ್ಯಯನಗಳು – ಈ ಅಧ್ಯಾಯದಲ್ಲಿ ಭಾಷೆಯಲ್ಲಿ ಪುರುಷ ಮತ್ತು ಮಹಿಳೆ ಇಬ್ಬರಿಗೂ ಸಮಾನವಾಗಿ ಅನ್ವಯವಾಗುವ ತಟಸ್ಥ (ನ್ಯೂಟ್ರಲ್) ಪದಗಳನ್ನು ಆ ಸಮುದಾಯದ ಒಂದು ವಿದ್ಯಾವಂತ ಯುವ ವರ್ಗ ಹೇಗೆ ಗ್ರಹಿಸುತ್ತಿದೆ ಮತ್ತು ಬಳಸುತ್ತಿದೆ ಎಂಬುದನ್ನು ಪರಿಶೀಲಿಸಲಾಗಿದೆ. ಮೂರು ಹಂತಗಳ ಪ್ರಾಯೋಗಿಕ ಅಧ್ಯಯನವನ್ನು ಮಾಡಲಾಗಿದೆ. ಅವುಗಳೆಂದರೆ;

೧. ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಅನ್ವಯವಾಗುವ ಕೆಲವು ಪದಗಳನ್ನು ನೀಡಿ, ಅರ್ಥ ತಿಳಿಸಲು ಹೇಳುವುದು.

೨. ತಟಸ್ಥ ಅರ್ಥವಿದ್ದರೂ ಸಮುದಾಯದ ಗ್ರಹಿಕೆಯಲ್ಲಿ ಪುರುಷವಾಚಕವಾಗಿರುವ, ತಟಸ್ಥ ಅರ್ಥವಿದ್ದರೂ ಸಮುದಾಯದ ಗ್ರಹಿಕೆಯಲ್ಲಿ ಸ್ತ್ರೀವಾಚಕಗಳಾಗಿರುವ ಕೆಲವು ಪದಗಳನ್ನು ನೀಡಿ ವಾಕ್ಯರಚಿಸಲು ಹೇಳುವುದು.

೩. ಲೇಖಕರ ಹೆಸರು ಹೇಳದೆ, ಕೆಲವು ಬರಹಗಳನ್ನು ನೀಡಿ, ಇದರಲ್ಲಿ ಮಹಿಳೆಯ ಬರಹ ಮತ್ತು ಪುರುಷನ ಬರಹಗಳನ್ನು ಗುರುತಿಸಲು ಹೇಳುವುದು. ನಿಮಗೆ ಇದು ಮಹಿಳೆಯ ಬರಹ ಅಥವಾ ಪುರುಷನ ಬರಹವೆಂದು ಅನಿಸಲು ಕಾರಣಗಳನ್ನು ದಾಖಲಿಸಿ ಎಂದು ಹೇಳುವುದು. ಮಹಿಳೆಯ ಬರಹ ಮತ್ತು ಪುರುಷನ ಬರಹವೆಂದು ಗುರುತಿಸಲು ಸಾಧ್ಯವಾಗದಿದ್ದಲ್ಲಿ ಅದನ್ನು ದಾಖಲಿಸಿ ಎಂದು ಹೇಳುವುದು.

ಪದಗಳ ನೆಲೆಯಲ್ಲಿ, ವಾಕ್ಯರಚನೆಗಳ ನೆಲೆಯಲ್ಲಿ ಹಾಗೂ ಬರಹಗಳಲ್ಲಿನ ಲಿಂಗಭಿನ್ನತೆಯನ್ನು ಗುರುತಿಸುವಲ್ಲಿ ಸಮುದಾಯದಲ್ಲಿನ ಲಿಂಗಸಂಬಂಧಿ ಗ್ರಹಿಕೆಗಳು ಪ್ರಭಾವಿಸುತ್ತಿವೆಯೇ ಎಂಬುದನ್ನು ಕುರಿತು ಈ ಅಧ್ಯಾಯದಲ್ಲಿ ಪ್ರಾಯೋಗಿಕ ಅಧ್ಯಯನ ಫಲಿತಗಳ ಆಧಾರದ ಮೇಲೆ ವಿಶ್ಲೇಷಿಸಲಾಗಿದೆ.

ಅಧ್ಯಾಯ ಆರು: ಸಮಾರೋಪ – ಈ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶಗಳ ಹಿನ್ನೆಲೆಯಲ್ಲಿ ಕಂಡುಕೊಂಡ ಫಲಿತಗಳನ್ನು ವಿವರಿಸಲಾಗಿದೆ. ಹಾಗೂ ಮುಂದಿನ ಅಧ್ಯಯನಗಳ ಸಾಧ್ಯತೆಗಳನ್ನು ಕುರಿತು ವಿವರಿಸಲಾಗಿದೆ.

## ಅಧ್ಯಾಯ–ಎರಡು

# ಸ್ತ್ರೀವಾದದಲ್ಲಿ ಭಾಷೆಯ ಬಗೆಗಿನ ಚರ್ಚೆಗಳು

೨.೧. ಪಾಶ್ಚಾತ್ಯರಲ್ಲಿ ನಡೆದಿರುವ ಭಾಷಿಕ ಲಿಂಗಸಂಬಂಧಿ ಆಯಾಮಗಳ ಚರ್ಚೆಗಳು

೨.೨. ದ್ವಿಮಾನ ಪರಿಕಲ್ಪನೆ ಮತ್ತು ಲಿಂಗಭೇದ

೨.೩. ಭಾಷೆ ಮತ್ತು ಅಧಿಕಾರ

೨.೪ ಭಾಷೆ ಮತ್ತು ಸಂಸ್ಕೃತಿ

೨.೫. ಸಮಾಜ, ಲಿಂಗ ಮತ್ತು ಭಾಷೆ

೨.೬. ಸ್ತ್ರೀವಾದ ಮತ್ತು ಸಿದ್ಧಾಂತಗಳು

- ೨.೬.೧. ಮಾರ್ಕ್ಸ್‌ವಾದ ಮತ್ತು ಸ್ತ್ರೀವಾದ
- ೨.೬.೨. ಸಫೀರ್ ಮತ್ತು ವೂರ್ಫ್ ಪ್ರಮೇಯ ಮತ್ತು ಸ್ತ್ರೀವಾದ
- ೨.೬.೩. ಸಸ್ಸೂರ್‌ನ ಭಾಷಿಕ ವಿಚಾರಗಳು ಮತ್ತು ಸ್ತ್ರೀವಾದ
- ೨.೬.೪. ಡೆರಿಡಾನ ನಿರಚನವಾದ ಮತ್ತು ಸ್ತ್ರೀವಾದ
- ೨.೬.೫. ಲಕಾನ್, ಫ್ರಾಯ್ಡ್ ಮತ್ತು ಜೂಲಿಯಾ ಕ್ರಿಸ್ತೇವಾರವರ ಮನಃಶಾಸ್ತ್ರೀಯ ಮತ್ತು ಭಾಷಿಕ ವಿಚಾರಗಳು

೨.೭. ಕನ್ನಡದಲ್ಲಿ ನಡೆದಿರುವ ಭಾಷಿಕ ಲಿಂಗ ಸಂಬಂಧಿ ಆಯಾಮಗಳ ಚರ್ಚೆಗಳು

ಅಧ್ಯಾಯ–ಎರಡು

# ಸ್ತ್ರೀವಾದದಲ್ಲಿ ಭಾಷೆಯ ಬಗೆಗಿನ ಚರ್ಚೆಗಳು

ಸಮಾಜದಲ್ಲಿನ ಪ್ರತಿಯೊಂದು ಚಿಂತನೆ, ಗ್ರಹಿಕೆ, ಸಿದ್ಧಾಂತ, ಧೋರಣೆ, ಆಚರಣೆ, ನಿಲುವುಗಳ ಹಿಂದೆ ಕೆಲವು ತಾತ್ವಿಕತೆಗಳು ಕಾರ್ಯನಿರ್ವಹಿಸುತ್ತಿರುತ್ತವೆ. ಕೆಲವು ಪ್ರಜ್ಞಾಪೂರ್ವಕವಾಗಿ ಪ್ರಭಾವವನ್ನು ಬೀರಿದರೆ ಮತ್ತೆ ಕೆಲವು ಅಪ್ರಜ್ಞಾಪೂರ್ವಕ ನೆಲೆಯಲ್ಲಿ ಪ್ರಭಾವಿಸುತ್ತಿರುತ್ತವೆ. ಜಾತಿವಾದ, ಜನಾಂಗವಾದ, ವರ್ಗವಾದ, ಸ್ತ್ರೀವಾದಗಳ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಇವುಗಳನ್ನು ಗ್ರಹಿಸಬಹುದು. ಸಮುದಾಯದ ತಿಳಿವಳಿಕೆಗಳು, ನಿಲುವುಗಳು ಯಾವಾಗಲೂ ಬಹುತ್ವದ ನೆಲೆಯಲ್ಲಿರುತ್ತವೆ. ಏಕಕಾಲಕ್ಕೆ ಪರಸ್ಪರ ಸಮಾನಾಂತರವಾದ ಅಥವಾ ಪರಸ್ಪರ ವಿರೋಧವಾದ ನೆಲೆಯಲ್ಲಿ ಕಾರ್ಯ ನಿರ್ವಹಿಸುತ್ತಿರುತ್ತವೆ. ಯಾವುದೇ ತಿಳಿವಳಿಕೆಯನ್ನು ಸಮನಾಂತರ ಮತ್ತು ವಿರೋಧಿ ನೆಲೆಗಳಲ್ಲಿ ಗ್ರಹಿಸಬೇಕಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಗ್ರಹಿಕೆಯ ಸಮಸ್ಯೆಗಳಿಂದಾಗಿ ನಮ್ಮ ವಿಚಾರಗಳು, ಸಿದ್ಧಾಂತಗಳು, ತಾತ್ವಿಕತೆಗಳು ಏಕಮುಖವಾಗಿ ಸಾಗುತ್ತಿರುತ್ತವೆ. ಈ ಹಿನ್ನೆಲೆಯಲ್ಲಿ ಸ್ತ್ರೀವಾದಿ ತಾತ್ವಿಕತೆಯನ್ನು ಪರಿಶೀಲಿಸುವ ಅಗತ್ಯವಿದೆ.

ಸ್ತ್ರೀವಾದಿ ತಾತ್ವಿಕತೆಯನ್ನು ಎರಡು ಭಿನ್ನ ನೆಲೆಗಳಲ್ಲಿ ಗ್ರಹಿಸಬೇಕಾಗುತ್ತದೆ.

೧. ಜಾಗತಿಕ ನೆಲೆ.

೨. ಭಾರತೀಯ ನೆಲೆ.

ಜಗತ್ತಿನಾದ್ಯಂತ ಪುರುಷ ಮತ್ತು ಮಹಿಳೆಯರಿಗೆ ಸಂಬಂಧಿಸಿದಂತೆ ಸಾರ್ವತ್ರಿಕವಾದ ಕೆಲವು ನಿಯಮಗಳಿವೆ ಎಂಬ ನಿಲುವು ಪ್ರಾರಂಭಿಕ ಹಂತದ ಸ್ತ್ರೀವಾದಿಗಳ ಪ್ರಮುಖ ನಿಲುವಾಗಿತ್ತು. ಉದಾಹರಣೆಗೆ ಲಿಂಗ ಸಂಬಂಧವನ್ನು ಅಸಮಾನತೆಯ ಹಿನ್ನೆಲೆಯಲ್ಲಿ ಶೋಷಕ/ಶೋಷಿತೆ, ಪ್ರಧಾನ/ಅಧೀನ, ಶ್ರೇಷ್ಠ/ಕನಿಷ್ಠದ ನೆಲೆಯಲ್ಲಿ ಇವರ ಧೋರಣೆಗಳು ರೂಪುಗೊಂಡವು. ಸ್ತ್ರೀವಾದಿ ತಾತ್ವಿಕತೆಯನ್ನು ಎರಡು ಪ್ರಮುಖ ಹಂತಗಳಲ್ಲಿ ಗ್ರಹಿಸಬಹುದು.

೧. ಲಿಂಗಭೇದ ವ್ಯವಸ್ಥೆಯು ಸಾಮಾಜಿಕವಾಗಿ ಕಟ್ಟಲ್ಪಟ್ಟಿದ್ದು ಎಂಬ ನಿಲುವು.

೨. ಎಲ್ಲ ಬಗೆಯ ತಾತ್ವಿಕತೆ ಮತ್ತು ಸಿದ್ಧಾಂತಗಳನ್ನು ಪುರುಷಮೂಲೀಯವಾದದ್ದು ಎಂದು ವಿರೋಧಿಸುವುದು. ಸ್ತ್ರೀತಾತ್ವಿಕತೆಯ ಹಿನ್ನೆಲೆಯಲ್ಲಿ ಪರ್ಯಾಯ ಸಿದ್ಧಾಂತಗಳನ್ನು ಕಟ್ಟುವುದು.

ಸ್ತ್ರೀವಾದಿ ತಾತ್ವಿಕತೆ ಪ್ರಾರಂಭವಾಗುವುದು ಸ್ತ್ರೀ-ಪುರುಷರ ನಡುವಿನ ಅಸಮಾನತೆಯು ಪ್ರಕೃತಿ ಸಹಜವಲ್ಲ, ಜೈವಿಕವಲ್ಲ, ಅದು ಸಾಮಾಜಿಕವಾದದ್ದು ಎಂದು. ಜೈವಿಕ ಲಿಂಗ(Sex) ಮತ್ತು ಸಾಮಾಜಿಕ ಲಿಂಗ(Gender) ಎಂಬ ಎರಡು ಪರಿಭಾಷೆಗಳ ಮುಖಾಂತರ ಅವುಗಳನ್ನು ವಿಶ್ಲೇಷಿಸುತ್ತಾರೆ. ಲಿಂಗ ಎಂದರೆ ವ್ಯಕ್ತಿಗಳನ್ನು ಗಂಡು ಮತ್ತು ಹೆಣ್ಣು ಎಂದು ಜೈವಿಕತೆಯನ್ನಾಧರಿಸಿ ವಿಂಗಡಿಸುವುದು. ಸಾಮಾಜಿಕ ಲಿಂಗವು ಸಂಸ್ಕೃತಿಗಳಿಗನುಸಾರವಾಗಿ ವ್ಯತ್ಯಾಸವಾಗುವ ಗಂಡು ಮತ್ತು ಹೆಣ್ಣು ಎಂಬ ಪರಸ್ಪರ ವಿರುದ್ಧವಾದ ಶ್ರೇಣೀಕರಣ. ಇದು ಸಮಾಜದಲ್ಲಿ ಗಂಡು ಮತ್ತು ಹೆಣ್ಣು ಯೋಚಿಸುವ, ಭಾಗವಹಿಸುವ, ವರ್ತಿಸುವ ವಿಧಾನವನ್ನು ಕುರಿತ ಸಮಾಜದ ನಿರೀಕ್ಷೆ ಮತ್ತು ನಿರ್ಬಂಧಗಳನ್ನು ಒಳಗೊಂಡಿರುತ್ತದೆ ಎಂಬುದು ಅವರ ಒಟ್ಟಾರೆ ಗ್ರಹಿಕೆಯಾಗಿದೆ.

ಹೆಣ್ಣುತನ ಮತ್ತು ಗಂಡುತನದ ಪರಿಕಲ್ಪನೆಯು ಪುರುಷ ಕೇಂದ್ರಿತ ಗ್ರಹಿಕೆಯಲ್ಲಿ ನಿರ್ವಚನಗೊಂಡಿದೆ ಎಂಬುದು ಸ್ತ್ರೀವಾದಿಗಳ ಪ್ರಬಲವಾದ ನಂಬಿಕೆ. ಹೆಣ್ಣು ಮತ್ತು ಗಂಡಿನ ವಿಭಿನ್ನತೆಯನ್ನು ವ್ಯಕ್ತಿವೈಶಿಷ್ಟ್ಯದ ಹಿನ್ನೆಲೆಯಲ್ಲಿ ಗ್ರಹಿಸುವುದರ ಬದಲು, ಅಸಮಾನತೆಯ ನೆಲೆಯ ಮೇಲೆ ರೂಪುಗೊಂಡಿರುವ ಸಾಮಾಜಿಕ ವ್ಯವಸ್ಥೆಯನ್ನು ಪ್ರಶ್ನಿಸಿದರು. ಎಲ್ಲ ವಿಚಾರಗಳು ಪುರುಷಮೂಲೀಯ ಎಂದು ತಿರಸ್ಕರಿಸಿ ಅದಕ್ಕೆ ಪರ್ಯಾಯ ಸಿದ್ಧಾಂತಗಳನ್ನು ಕಟ್ಟಲು ಪ್ರಯತ್ನಿಸಿದರು. ಸಮಾಜ ನಿರ್ದಿಷ್ಟಪಡಿಸಿದ ಹೆಣ್ಣು ಮತ್ತು ಗಂಡು ಮಾದರಿಗಳನ್ನು ನಿರಾಕರಿಸಲು ಪ್ರಯತ್ನಿಸಿದರು.

ಜಾಗತಿಕ ಮಟ್ಟದ ಸ್ತ್ರೀವಾದಿ ಚರ್ಚೆಗಳೆಲ್ಲವೂ ಇಡೀ ಜಗತ್ತಿಗೆ ಅನ್ವಯವಾಗುವ ಸಾರ್ವತ್ರಿಕವಾದ ಏಕರೂಪದ 'ಸ್ತ್ರೀತ್ವ'ವೊಂದನ್ನು ಕುರಿತು ಮಾತನಾಡುತ್ತವೆ. ಜೀವಶಾಸ್ತ್ರದ ನೆಲೆಯಿಂದ ಸ್ತ್ರೀಯರೆನಿಸುವ ಎಲ್ಲರೂ ಬೇರೆ ಬೇರೆ ಕಾಲ, ದೇಶ, ವರ್ಗ, ಜನಾಂಗ, ಜಾತಿ, ಸಂಸ್ಕೃತಿಗಳ ಭೇದವಿಲ್ಲದಂತೆ ಒಂದೇ ರೀತಿಯ ಸ್ತ್ರೀಸ್ವಭಾವವನ್ನು ಹೊಂದಿರಲು ಸಾಧ್ಯವೇ? ಎಂಬ ಪ್ರಶ್ನೆ ಉಂಟಾಗುತ್ತದೆ. ಲಿಂಗಾಧಾರಿತ ತಾರತಮ್ಯ ಜಗತ್ತಿನಾದ್ಯಂತ ಇದ್ದರೂ ಅದರ ಸ್ವರೂಪ ಬೇರೆ ಬೇರೆ ಸಮುದಾಯಗಳಲ್ಲಿ ಬೇರೆ ಬೇರೆ ರೂಪಗಳನ್ನು ತಾಳುತ್ತದೆ. ಸ್ತ್ರೀ ಶೋಷಣೆಯ ಮೂಲಗಳು, ಪ್ರಕಾರಗಳು, ಪ್ರಮಾಣಗಳು ಸಮುದಾಯದಿಂದ ಸಮುದಾಯಕ್ಕೆ ವ್ಯತ್ಯಾಸವಾಗುತ್ತವೆ.

ಭಾರತೀಯ ಸಂದರ್ಭದಲ್ಲಿ ಲಿಂಗತಾರತಮ್ಯದ ಧೋರಣೆ ಏಕಾಕಾರವಾಗಿ ಸಕ್ರಿಯವಾಗಿರುವುದಿಲ್ಲ. ಇಲ್ಲಿನ ಪ್ರಧಾನ ಚಿಂತನೆ ಲಿಂಗಭೇದದ ಲಕ್ಷಣವನ್ನು ಹೊಂದಿದ್ದರೂ ಇಲ್ಲಿನ ಜಾತಿವ್ಯವಸ್ಥೆ, ವರ್ಗವ್ಯವಸ್ಥೆ, ಗ್ರಾಮೀಣ ಜೀವನ, ನಗರ ಜೀವನಗಳಲ್ಲಿ ಸ್ತ್ರೀಸಬಲತೆಯ ಕೆಲವು ಲಕ್ಷಣಗಳು ಕಾಣಿಸುತ್ತವೆ. ಸಾಂಸ್ಕೃತಿಕ ವೈವಿಧ್ಯತೆ ಇರುವುದರಿಂದ ಶ್ರೇಣೀಕರಣ, ಶೋಷಣೆ, ಅಸಮಾನತೆಯ ತತ್ವಗಳು ಇಲ್ಲಿ ಲಿಂಗತಾರತಮ್ಯಕ್ಕಷ್ಟೇ ಸೀಮಿತವಾಗಿರುವುದಿಲ್ಲ. ಶೋಷಣೆಗೆ ಜಾತಿ, ವರ್ಗಗಳು ಕಾರಣವಾಗುವಂತೆ ಲಿಂಗ ಕೂಡ ಒಂದು ಕಾರಣವಾಗುತ್ತದೆ. ಲಿಂಗ ತಾರತಮ್ಯದಲ್ಲಿ ಮತ್ತೆ ಬಹುಮುಖಗಳನ್ನು ಹುಡುಕಲು ಸಾಧ್ಯವಾಗುತ್ತದೆ.

ಭಾರತದ ಬಹುಮುಖಿ ಶ್ರೇಣಿಗಳಲ್ಲಿ ಸ್ತ್ರೀ-ಪುರುಷ ಸಂಬಂಧಗಳಲ್ಲಿ ಎಲ್ಲಿ ಯಜಮಾನಿಕೆ, ಅಧಿಕಾರಗಳು ತಲೆದೋರುತ್ತವೆ ಎಂಬುದನ್ನು ಸೂಕ್ಷ್ಮವಾಗಿ ಗ್ರಹಿಸಬೇಕಾಗುತ್ತದೆ. ಅದರ ಜೊತೆಗೆ ಸ್ತ್ರೀಯರು ಎಲ್ಲಿ ನಿಜವಾದ ದಮನಕ್ಕೆ ಒಳಗಾಗಿದ್ದಾರೆ ಹಾಗೂ ಎಲ್ಲಿ ಅವರದೇ ಪ್ರಾಬಲ್ಯದ ಅವಕಾಶಗಳಿವೆ ಎಂಬುದರ

ಆಧಾರದ ಮೇಲೆ ಸ್ತ್ರೀವಾದಿ ತಾತ್ವಿಕತೆಯನ್ನು ಇಲ್ಲಿ ರೂಪಿಸಬೇಕಾಗುತ್ತದೆ. ಉದಾಹರಣೆಗೆ ಭಾರತೀಯರ ಧರ್ಮದ ಹಿನ್ನೆಲೆಯಲ್ಲಿ ಲಿಂಗತಾರತಮ್ಯದ ಧೋರಣೆ ಭಿನ್ನವಾಗಿ ನಿಲ್ಲುತ್ತದೆ. ಹಿಂದೂ ಧರ್ಮದ ಮಹಿಳೆಯರ ಸಮಸ್ಯೆಗಳಿಗೂ ಮುಸ್ಲಿಂ ಧರ್ಮದ ಮಹಿಳೆಯರ ಸಮಸ್ಯೆಗಳಿಗೂ ವ್ಯತ್ಯಾಸಗಳಿವೆ. ಇಂದಿಗೂ ಮುಸ್ಲಿಂ ಮಹಿಳೆಯರು ಬುರ್ಖಾವನ್ನು ಬಳಸುವ ಅನಿವಾರ್ಯತೆಯಿದೆ. ಹಳೆಯ ತಲೆಮಾರಿನ ಸಂಪ್ರದಾಯಸ್ಥ ಮಹಿಳೆಯರ ಮನೋಧರ್ಮ, ಧೋರಣೆಗಳಿಗೂ ಆಧುನಿಕ ವಿದ್ಯಾವಂತ ದುಡಿಯುವ ಮಹಿಳೆಯರ ಮನೋಧರ್ಮ, ಧೋರಣೆಗಳಿಗೂ ವ್ಯತ್ಯಾಸಗಳಿವೆ.

ಭಾರತೀಯರ ಮನೋಧರ್ಮದಲ್ಲಿ ನಿಲುವಿಗೂ, ಧೋರಣೆಗೂ ವ್ಯತ್ಯಾಸವಿದೆ. ಮಹಿಳೆಯರ ಕುರಿತಾಗಿ ಮಾತೃದೇವೊಭವದ ಕಲ್ಪನೆಯಿದ್ದರೂ ಹೆಣ್ಣು ಭ್ರೂಣ ಹತ್ಯೆ ನಿರಂತರವಾಗಿದೆ. ಯಾವಾಗ ಹೆಣ್ಣು ದೈವತ್ವದ ನೆಲೆಗೆ ಏರುತ್ತಾಳೆ, ಯಾವಾಗ ಹೆಣ್ಣು ಮಗು ಬೇಡವೆನಿಸುತ್ತದೆ ಎನ್ನುವುದರ ಆಧಾರದ ಮೇಲೆ ಧೋರಣೆಗಳು ಬದಲಾಗುತ್ತಿರುತ್ತವೆ ಎಂಬುದನ್ನು ಪರಿಶೀಲಿಸಬೇಕಾಗುತ್ತದೆ. ಇಲ್ಲಿ ಸ್ತ್ರೀಯರೆಲ್ಲರಿಗೂ ಅನ್ವಯಿಸುವಂತಹ ಒಂದು ಸ್ತ್ರೀವಾದಿ ತಾತ್ವಿಕತೆಯನ್ನು ರೂಪಿಸಲು ಸಾಧ್ಯವಾಗುವುದಿಲ್ಲ. ಈ ಮೇಲಿನ ವಿಚಾರಗಳ ಹಿನ್ನೆಲೆಯಲ್ಲಿ ಸ್ತ್ರೀವಾದಿಗಳು ಲಿಂಗತಾತರಮ್ಯಕ್ಕೆ ನೀಡುತ್ತಿರುವ ಭಾಷಿಕ ಆಕರಗಳು, ಅವುಗಳ ಮೂಲಕ ಕಟ್ಟುತ್ತಿರುವ ತಾತ್ವಿಕತೆಯನ್ನು ಪರಿಶೀಲಿಸುವ ಅಗತ್ಯವಿದೆ.

ಭಾಷೆ ಮತ್ತು ಲಿಂಗಗಳ ನಡುವಿನ ಸಂಬಂಧವನ್ನು ಅರಿಯುವ ಉದ್ದೇಶದಿಂದ ಈ ಅಧ್ಯಯನಕ್ಕೆ ಪೂರಕವಾಗಿ ಸ್ತ್ರೀವಾದಿಗಳು ಇದುವರೆಗೂ ಚರ್ಚಿಸಿರುವ ಭಾಷೆ ಮತ್ತು ಲಿಂಗದ ನಡುವಿನ ಸಂಬಂಧಗಳ ಕೆಲವು ವಿಚಾರಗಳನ್ನು ಈ ಅಧ್ಯಾಯದಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ಪುರುಷ ಪ್ರಧಾನ ಸಮಾಜದ ನಿಲುವು, ಧೋರಣೆಗಳನ್ನು ವಿಶ್ಲೇಷಿಸುವ ಸ್ತ್ರೀವಾದಿಗಳಿಗೆ, ಭಾಷೆ ಒಂದು ಪ್ರಮುಖ ಆಕರವಾಯಿತು. 'ಸ್ತ್ರೀವಾದಿ ಭಾಷಾಶಾಸ್ತ್ರ' ಎಂಬ ಪರಿಭಾಷೆಯಡಿಯಲ್ಲಿ ಚರ್ಚಿಸುವಷ್ಟರ ಮಟ್ಟಿಗೆ ಈ ಅಧ್ಯಯನಗಳು ನಡೆಯುತ್ತಿವೆ. ಹೆಣ್ಣಿನ ಅಧೀನತೆಗೆ ಭಾಷೆ ಹೇಗೆ ಕಾರಣವಾಗಿದೆ ಎಂಬುದನ್ನು ಗುರುತಿಸುವುದು ಮತ್ತು ಬಿಡುಗಡೆಯ ಸಾಧ್ಯತೆಗಳನ್ನು ಕುರಿತು ಚರ್ಚಿಸುವುದು ಸ್ತ್ರೀವಾದಿಗಳ ಮುಖ್ಯ ಗುರಿಯಾಗಿದೆ.

ಕೆಲವು ಪ್ರಶ್ನೆಗಳ ಮುಖಾಂತರ ಸ್ತ್ರೀವಾದಿಗಳ ಭಾಷಿಕ ನಿಲುವುಗಳನ್ನು ಈ ಅಧ್ಯಾಯದಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ಅವುಗಳೆಂದರೆ;

೧. ಲಿಂಗ ಮತ್ತು ಭಾಷೆಯ ಅಂತರ್‌ಸಂಬಂಧವನ್ನು ಸ್ತ್ರೀವಾದಿಗಳು ಗ್ರಹಿಸುತ್ತಿರುವ ಕ್ರಮಗಳು ಯಾವುವು?

೨. ಲಿಂಗ ತಾರತಮ್ಯಕ್ಕೆ ಭಾಷೆಯೇ ಕಾರಣವೇ? ಅಥವಾ ಸಾಮಾಜಿಕ, ಸಾಂಸ್ಕೃತಿಕ ನೆಲೆಯ ಲಿಂಗತಾರತಮ್ಯದ ನಂಬಿಕೆ ಮತ್ತು ಆಚರಣೆಗಳನ್ನು ಭಾಷೆಗೂ ಆರೋಪಿಸಲಾಗುತ್ತಿದೆಯೇ?

೩. ಭಾಷೆಗೂ ಅಧಿಕಾರ ಕೇಂದ್ರಗಳಿಗೂ ಇರುವ ಸಂಬಂಧದ ಸ್ವರೂಪ ಯಾವ ನೆಲೆಯದು?

ಮುಂತಾದ ಪ್ರಶ್ನೆಗಳ ಹಿನ್ನೆಲೆಯಲ್ಲಿ ಸ್ತ್ರೀವಾದಿಗಳ ಭಾಷಿಕ ಚಿಂತನೆಗಳನ್ನು ವಿಶ್ಲೇಷಿಸುವ ಉದ್ದೇಶ ಈ ಅಧ್ಯಾಯದ್ದಾಗಿದೆ. ಇದುವರೆಗೆ ನಡೆದಿರುವ ಸ್ತ್ರೀವಾದಿಗಳ ಭಾಷಿಕ ಚರ್ಚೆಗಳನ್ನು ಒಟ್ಟಾರೆ ನಾಲ್ಕು ಪ್ರಮುಖ ಹಂತಗಳಲ್ಲಿ ಗುರುತಿಸಬಹುದು. ಅವುಗಳೆಂದರೆ;

೧. ಭಾಷೆ ಪುರುಷ ಸೃಷ್ಟಿ ಎಂಬ ವಾದ.

೨. ಗಂಡಿನ ಭಾಷೆ ಮತ್ತು ಹೆಣ್ಣಿನ ಭಾಷೆ ಬೇರೆ ಬೇರೆ ಎಂದು ವಿಂಗಡಿಸಿ ನೋಡುವ ಹಂತ.

೩. ಲಿಂಗ ತಾರತಮ್ಯವನ್ನು ಭಾಷೆಯ ವಿವಿಧ ನೆಲೆಗಳಲ್ಲಿ ಗುರುತಿಸುವ ಹಂತ.

೪. ಸ್ತ್ರೀವಾಚಕ ಪದಗಳ ನಿರ್ಮಾಣ ಪ್ರಕ್ರಿಯೆ ಹಾಗೂ ಲಿಂಗ ತಟಸ್ಥ ಭಾಷೆಯ ಬಳಕೆಯ ಆಲೋಚನೆಗಳು.

ಮೇಲಿನ ನಾಲ್ಕು ಹಂತಗಳ ಚರ್ಚೆಗಳು ಪಾಶ್ಚಾತ್ಯರಲ್ಲಿ ಆರಂಭವಾದವು. ನಂತರ ಅದರ ಪ್ರಭಾವ ಭಾರತದಲ್ಲಿ ಉಂಟಾದರೂ ಪಾಶ್ಚಾತ್ಯ ಚಿಂತನಾ ಮಾದರಿಗಳಿಗೂ ಭಾರತದಲ್ಲಿ ಅಸ್ತಿತ್ವದಲ್ಲಿರುವ ಚಿಂತನಾ ಮಾದರಿಗಳಿಗೂ ವ್ಯತ್ಯಾಸವಿದೆ. ಆ ವ್ಯತ್ಯಾಸಗಳನ್ನು ಎರಡು ನೆಲೆಗಳಲ್ಲಿ ಗುರುತಿಸಬಹುದು.

೧. ಸಿದ್ಧಾಂತಗಳ ಮೊರೆ ಹೋಗುವಿಕೆ.

೨. ಭಾಷಾ ಬಳಕೆಯ ನೆಲೆಗಳ ಗ್ರಹಿಕೆಯಲ್ಲಿನ ಭಿನ್ನತೆಗಳು.

ಮೊದಲನೆಯದಾಗಿ ಪಾಶ್ಚಾತ್ಯ ಸ್ತ್ರೀವಾದಿಗಳ ಭಾಷಿಕ ಚಿಂತನೆಗಳು ಪೂರ್ವಸಿದ್ಧಾಂತಗಳಿಗೆ ಮೊರೆ ಹೋಗಿರುವಿಕೆಯನ್ನು ಗುರುತಿಸಬಹುದು. ಇವರ ಪ್ರತಿಯೊಂದು ಹಂತದ ಚರ್ಚೆಯೂ ಪೂರ್ವಸಿದ್ಧಾಂತಗಳ ತಾತ್ವಿಕತೆಯನ್ನು ವಿರೋಧಿಸುವ, ಒಪ್ಪಿಕೊಳ್ಳುವ, ಸಮೀಕರಿಸುವ ನೆಲೆಯಲ್ಲಿ ಮುಂದುವರಿಯುತ್ತದೆ. ಉದಾ: ಮಾರ್ಕ್ಸ್‌ವಾದ, ಸಫೀರ್–ವೂರ್ಫ್ ಸಿದ್ಧಾಂತ, ಫ್ರಾಯ್ಡ್, ಲಕಾನ್ ಮನೋವಿಶ್ಲೇಷಣಾತ್ಮಕ ವಿಚಾರಗಳು, ಸಸ್ಸೂರ್‌ನ ಭಾಷಿಕ ಸಿದ್ಧಾಂತಗಳು ಮುಂತಾದವುಗಳನ್ನು ಬಳಸಿಕೊಳ್ಳುತ್ತಾರೆ. ಆದರೆ ಕನ್ನಡ ಭಾಷೆಯ ಲಿಂಗಸಂಬಂಧಿ ಚರ್ಚೆಗಳು ಯಾವುದೇ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಚರ್ಚೆಯನ್ನು ಬೆಳೆಸುವುದಿಲ್ಲ. ಕನ್ನಡದಲ್ಲಿ ನೇರವಾಗಿ ಭಾಷಿಕ ಆಕರಗಳ ಮುಖಾಂತರ ಲಿಂಗತಾರತಮ್ಯದ ಚರ್ಚೆಯನ್ನು ನಡೆಸಲಾಗಿದೆ.

ಎರಡನೆಯದಾಗಿ ಪಾಶ್ಚಾತ್ಯರ ಮತ್ತು ಭಾರತೀಯರ ಭಾಷಾ ಬಳಕೆಯ ಗ್ರಹಿಕೆಯ ನೆಲೆಗಳಲ್ಲಿ ಭಿನ್ನತೆಗಳಿವೆ. ಇದಕ್ಕೆ ಕಾರಣ ಸಾಮಾಜಿಕ ಸಂರಚನಾ ವಿನ್ಯಾಸದಲ್ಲಿನ ಭಿನ್ನತೆಗಳು. ಅವುಗಳೆಂದರೆ;

೧. ವರ್ಗ ಆಧಾರಿತ ಸಾಮಾಜಿಕ ವಿಂಗಡಣೆ.

೨. ಜಾತಿ, ಧರ್ಮ ಆಧಾರಿತ ಸಾಮಾಜಿಕ ವಿಂಗಡಣೆ.

ಪಾಶ್ಚಾತ್ಯರ ಸಾಮಾಜಿಕ ಸಂರಚನೆ ವರ್ಗಾಧಾರಿತವಾಗಿದೆ. ಅಲ್ಲಿ ಭಾಷಾ ಬಳಕೆಯ ನೆಲೆಗಳನ್ನು ಎರಡು ಮಾನದಂಡಗಳ ಮೂಲಕ ಅಳೆಯಲಾಗುತ್ತದೆ. ಅವುಗಳೆಂದರೆ, ಉನ್ನತಮಟ್ಟದ ಭಾಷೆ (Standard Form), ಉನ್ನತಮಟ್ಟದ್ದಲ್ಲದ ಭಾಷೆ(Non Standard Form). ವರ್ಗಾಧಾರಿತ ಸಮಾಜದಲ್ಲಿ ಆರ್ಥಿಕತೆ ಪ್ರಮುಖ ಮಾನದಂಡವಾಗುತ್ತದೆ. ಅಲ್ಲಿ ಉನ್ನತ ಮತ್ತು ಉನ್ನತವಲ್ಲದ ಎಂಬ ಎರಡು ಶ್ರೇಣೀಕರಣ ಸದಾ ಜಾಗೃತವಾಗಿರುತ್ತದೆ. ಆದರೆ ಜಾತಿಯಾಧಾರಿತ, ಧರ್ಮ ಆಧಾರಿತ ವಿಂಗಡಣೆಯಿರುವ ಭಾರತದ ಪರಿಸ್ಥಿತಿ ಹಾಗಿರುವುದಿಲ್ಲ. ಇಲ್ಲಿ ಏಕಕಾಲದಲ್ಲಿ ಅನೇಕ ವಿಷಯಗಳು ಪ್ರಭಾವ ಬೀರುತ್ತಿರುತ್ತವೆ. ಧರ್ಮ, ಜಾತಿ, ಉಪಜಾತಿಗಳು ಒಟ್ಟೊಟ್ಟಿಗೆ ಕೆಲಸ ನಿರ್ವಹಿಸುತ್ತಿರುತ್ತವೆ. ಉದಾಹರಣೆಗೆ ಹಿಂದೂ ಧರ್ಮದಲ್ಲಿನ ಮೇಲ್‌ಜಾತಿಯ ಮಹಿಳೆಯ ಪರಿಸ್ಥಿತಿಗೂ ಕೆಳಜಾತಿಯ ಮಹಿಳೆಯ ಪರಿಸ್ಥಿತಿಗೂ ವ್ಯತ್ಯಾಸಗಳಿವೆ. ಕೆಳಜಾತಿಯ

ಮಹಿಳೆಯರಿಗೆ ಸಾಧ್ಯವಾಗಿರುವ ಮುಕ್ತ ಅಭಿವ್ಯಕ್ತಿ ಇಂದಿಗೂ ಮೇಲ್ಜಾತಿಯ ಮಹಿಳೆಯರಿಗೆ ಸಾಧ್ಯವಾಗದಿರುವುದನ್ನು ಗುರುತಿಸಬಹುದು.

ಈ ಮೇಲಿನ ಭಿನ್ನಾಂಶಗಳ ಕಾರಣದಿಂದಾಗಿ ಈ ಅಧ್ಯಾಯದಲ್ಲಿ ಪಾಶ್ಚಾತ್ಯರ ಹಾಗೂ ಕನ್ನಡ ಸಂದರ್ಭಗಳಲ್ಲಿನ ಭಾಷಿಕ ಲಿಂಗಸಂಬಂಧಿ ಆಯಾಮಗಳ ಕುರಿತ ಚರ್ಚೆಗಳನ್ನು ಬೇರೆ ಬೇರೆಯಾಗಿ ವಿಂಗಡಿಸಿ ಚರ್ಚೆಗೆ ಒಳಪಡಿಸಲಾಗಿದೆ.

**೨.೧. ಪಾಶ್ಚಾತ್ಯರಲ್ಲಿನ ಭಾಷಿಕ ಲಿಂಗಸಂಬಂಧಿ ಆಯಾಮಗಳ ಚರ್ಚೆಗಳು**

ಮೊದಲಿಗೆ ಪಾಶ್ಚಾತ್ಯರ ಸಂದರ್ಭದಲ್ಲಿನ ಚರ್ಚೆಗಳನ್ನು ಪರಿಶೀಲಿಸುವುದಾದರೆ, ಅವರ ಭಾಷೆ ಮತ್ತು ಲಿಂಗ ಸಂಬಂಧಗಳ ಕುರಿತ ಚರ್ಚೆಗಳನ್ನು ಎರಡು ಭಿನ್ನ ನೆಲೆಗಳಲ್ಲಿ ಗುರುತಿಸಬಹುದು.

೧. ತೀವ್ರವಾದಿ ಸ್ತ್ರೀವಾದಿ ಭಾಷಿಕ ನಿಲುವುಗಳು.

೨. ಉದಾರವಾದಿ ಸ್ತ್ರೀವಾದಿ ಭಾಷಿಕ ನಿಲುವುಗಳು.

ತೀವ್ರವಾದಿ ಸ್ತ್ರೀವಾದಿ ಭಾಷಿಕ ನಿಲುವುಗಳ ಪ್ರತಿಪಾದಕರು ಡೇಲ್ ಸ್ಪೆಂಡರ್, ಸಾರಾಮಿಲ್, ಮಾಲ್ಪಜ್, ಬೋರ್ಕರ್, ಆಡ್ರಿನ್ ರಿಚ್ ಮೊದಲಾದವರು. ಇವರ ವಾದಗಳ ಪ್ರಕಾರ ಭಾಷೆಯೇ ಲಿಂಗತಾರತಮ್ಯಕ್ಕೆ ಕಾರಣ. ಈ ಭಾಷೆ ಸಮಾಜದ ಅಧಿಕಾರ ಕೇಂದ್ರವಾದ ಪುರುಷನ ಹಿಡಿತದಲ್ಲಿದೆ ಹಾಗೂ ಅವನ ಹಿತಾಸಕ್ತಿಗೆ ಅನುಗುಣವಾಗಿ ರಚಿಸಲಾಗಿದೆ ಎಂಬಂತಹ ನಿಲುವುಗಳನ್ನು ವ್ಯಕ್ತಪಡಿಸುತ್ತಾರೆ.

ಉದಾರವಾದಿ ಭಾಷಿಕ ನಿಲುವುಗಳ ಪ್ರಮುಖ ಪ್ರತಿಪಾದಕರು ಡೊಬೊರಾ ಕ್ಯಾಮರನ್, ಬ್ಲಾಕ್‌ಕವಾರ್ಡ್, ಪೆನಲಪೆ ಎಕರ್ಟ್, ಅಕ್ಯುಚಿಡಾ ಮುಂತಾದವರು. ಇವರ ಪ್ರಕಾರ, ಭಾಷೆಗೂ ಲಿಂಗತಾರತಮ್ಯಕ್ಕೂ ನೇರವಾದ ಸಂಬಂಧವಿಲ್ಲ. ಸಾಮಾಜಿಕ ಸಾಂಸ್ಕೃತಿಕ ನೆಲೆಯ ಲಿಂಗತಾರತಮ್ಯದ ನಂಬಿಕೆ ಮತ್ತು ಆಚರಣೆಗಳನ್ನು ಭಾಷೆ ಪ್ರತಿನಿಧಿಸುತ್ತಿದೆಯೇ ಹೊರತು, ಮೂಲತಃ ಭಾಷೆಯೇ ತಾರತಮ್ಯಕ್ಕೆ ಕಾರಣವಲ್ಲ ಎಂಬ ಪ್ರತಿವಾದವನ್ನು ಮಂಡಿಸುತ್ತಾರೆ.

ಉದಾರವಾದಿ ಸ್ತ್ರೀವಾದಿಗಳು ನಾವೆಲ್ಲ ವ್ಯಕ್ತಿಗಳು ಎಂಬ ವಾಸ್ತವವನ್ನು ಎತ್ತಿ ಹಿಡಿಯಲು ಉದಾರವಾದಿ ಧೋರಣೆಯನ್ನು ಅನುಸರಿಸುತ್ತಾರೆ. ತೀವ್ರವಾದಿಗಳು ಮುಂದಿಟ್ಟ ಭಾಷಾ ನಿಲುವುಗಳಿಗೆ ಇವರೂ ವಿರೋಧಗಳನ್ನು ವ್ಯಕ್ತಪಡಿಸುತ್ತಾರೆ. ಇವರ ವಿಚಾರಗಳನ್ನು ಈ ಮುಂದಿನ ಪಟ್ಟಿಯಲ್ಲಿ ನೋಡಬಹುದಾಗಿದೆ.

| ಕ್ರ ಸಂ. | ತೀವ್ರವಾದಿ ಧೋರಣೆಗಳು | ಉದಾರವಾದಿ ಧೋರಣೆಗಳು |
|---|---|---|
| ೦೧ | ಭಾಷೆಯೇ ಲಿಂಗತಾರತಮ್ಯಕ್ಕೆ ಕಾರಣ | ಸಂವಹನ ಆಕರಗಳು ತಾರತಮ್ಯಕ್ಕೆ ಕಾರಣವಲ್ಲ |
| ೦೨ | ಭಾಷೆ ಪುರುಷ ನಿರ್ಮಿತ | ಭಾಷೆ ಸಮುದಾಯದ ಸೃಷ್ಟಿ |
| ೦೩ | 'ಹೆಣ್ಣು ಭಾಷೆ' ಎಂಬ ಪರಿಕಲ್ಪನೆಗೆ ಮನ್ನಣೆ | ಹೆಣ್ಣಿನ ಭಾಷೆ ಎಂಬ ಪರಿಕಲ್ಪನೆಯನ್ನೇ ಪ್ರಶ್ನಿಸುತ್ತಾರೆ |
| ೦೪ | ಹೆಣ್ಣಿನ ಭಾಷೆಗೂ, ಹೆಣ್ಣಿನ ದೇಹಕ್ಕೂ ನಂಟು ಕಲ್ಪಿಸುತ್ತಾರೆ | ದೈಹಿಕ ಸಂಗತಿಗಳ ನಿರಾಕರಣೆ |
| ೦೫ | ಹೆಂಗಸರಲ್ಲಿರುವ ಬಹುತ್ವಕ್ಕೆ ಮನ್ನಣೆ ಇಲ್ಲ | ಬಹುತ್ವಕ್ಕೆ ಮನ್ನಣೆ |
| ೦೬ | ಜಂಡರ್ ಎಂಬುದು ಇರುವಂತಹದ್ದು ಎಂಬ ನಿಲುವು | ಜಂಡರ್ ಎಂಬುದು ಇರುವಂಥದಲ್ಲ. ಅದು ಕಟ್ಟುವಿಕೆ ಮತ್ತು ನಿರ್ವಹಿಸುವಿಕೆ |
| ೦೭ | ಅವಳಿ ವಿರೋಧ ಕಲ್ಪನೆಗೆ ಮನ್ನಣೆ | ಅವಳಿ ವಿರೋಧನೆಲೆಯ ಮೀರುವಿಕೆ |
| ೦೮ | ಭಾಷೆಯಲ್ಲಿ ಲಿಂಗ ಅಸ್ತಿತ್ವದ ಹುಡುಕಾಟ | ಲಿಂಗ ತಟಸ್ಥ ಪರಿಕಲ್ಪನೆಗೆ ಮನ್ನಣೆ |

ಸ್ತ್ರೀವಾದಿಗಳು ಭಾಷೆ ಮತ್ತು ಲಿಂಗಸಂಬಂಧವನ್ನು ಅರಿಯಲು ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಇತರ ಪರಿಕಲ್ಪನೆಗಳಾದ ಅಧಿಕಾರ, ಸಂಸ್ಕೃತಿ, ದ್ವಿಮಾನ ಕಲ್ಪನೆ ಮುಂತಾದವುಗಳ ಮೂಲಕ ವಿವರಿಸಲು ಮುಂದಾಗುತ್ತಾರೆ. ಇವುಗಳನ್ನು ಕುರಿತ ಕೆಲವು ವಿಚಾರಗಳನ್ನು ಇಲ್ಲಿ ಚರ್ಚೆಗೆ ಒಳಪಡಿಸಲಾಗಿದೆ.

**೨.೨. ದ್ವಿಮಾನ ಪರಿಕಲ್ಪನೆ ಮತ್ತು ಲಿಂಗಭೇದ**

ಮಾನವ ಗ್ರಹಿಕೆಯ ಪ್ರತಿಯೊಂದು ವಿಚಾರದಲ್ಲೂ ದ್ವಿಮಾನ ಕಲ್ಪನೆ ಇರುತ್ತದೆ. ಏಕೆಂದರೆ, ಒಂದರ ಅರ್ಥ ಸ್ಪಷ್ಟವಾಗುವುದು ಅದರ ಎದುರಿಗೆ ಮತ್ತೊಂದು ಅರ್ಥವಿದ್ದಾಗ ಮಾತ್ರ. ಉದಾ: ಶುಭದ ಅರ್ಥ ಸ್ಪಷ್ಟವಾಗುವುದು ಅದರ ಎದುರಿಗೆ ಅಶುಭವಿದ್ದಾಗ. ಈ ಅಂಶವನ್ನು ಒಳಿತು–ಕೆಡುಕು, ಪ್ರಧಾನ–ಅಧೀನ, ಸ್ವ–ಅನ್ಯ, ಮೇಲ್‌ಸ್ತರ–ಕೆಳಸ್ತರ ಮುಂತಾದ ಕಲ್ಪನೆಗಳಲ್ಲೂ ಕಾಣಬಹುದು. ಈ ವಿಭಜಿತ ಗ್ರಹಿಕೆಗಳು ಉಂಟಾಗಲು ಕಾರಣವೇನು? ಇದು ಕಲ್ಪಿತ ವಿಂಗಡಣೆಯೇ? ಅಥವಾ ನೈಸರ್ಗಿಕವಾದುದೆ ಎಂಬ ಪ್ರಶ್ನೆಗಳು ಎದುರಾಗುತ್ತವೆ.

ಈ ವಿಭಜಿತ ಗ್ರಹಿಕೆಗಳನ್ನು ಎರಡು ನೆಲೆಗಳಲ್ಲಿ ಗುರುತಿಸಬಹುದು. ಅವುಗಳೆಂದರೆ;

೧. ಸಹಚರ್ಯದ ನೆಲೆ.

೨. ವಿರೋಧದ ನೆಲೆ.

ಸಹಚರ್ಯದ ನೆಲೆಯಲ್ಲಿ ಒಂದು ಮತ್ತೊಂದರ ಅಸ್ತಿತ್ವವನ್ನು ಅಲ್ಲಗಳೆಯುವ ಹಾಗಿಲ್ಲ. ಎರಡಕ್ಕೂ ತನ್ನದೇ ಅಸ್ತಿತ್ವವಿರಬಹುದು ಅಥವಾ ಪರಸ್ಪರ ಪೂರಕವಾಗಿರಬಹುದು. ಉದಾ: ಭೂಮಿ–ಆಕಾಶ,

ರಾತ್ರಿ–ಹಗಲು, ಗಂಡ–ಹೆಂಡತಿ, ಕಪ್ಪು–ಬಿಳಿ ಇತ್ಯಾದಿ. ಆದರೆ, ವಿರೋಧದ ನೆಲೆಯಲ್ಲಿ ಪ್ರಧಾನ–ಅಧೀನ, ಶ್ರೇಷ್ಠ–ಕನಿಷ್ಠದ ಅಸಮಾನತೆಯ ನೆಲೆಗಳು ಎದುರಾಗುತ್ತವೆ. ಉದಾ: ಒಳಿತು–ಕೆಡುಕು, ಶುಭ–ಅಶುಭ, ನೈತಿಕತೆ–ಅನೈತಿಕತೆ ಇತ್ಯಾದಿ.

ಈ ಹಿನ್ನೆಲೆಯಲ್ಲಿ ಲಿಂಗವಿಭಜನೆಯನ್ನು ಕುರಿತು ಚರ್ಚಿಸುವುದಾದರೆ, ಲೆವಿಸ್ಟ್ರಾಸ್‌ರವರ ಪ್ರಕಾರ "ಪ್ರಾಕೃತಿಕ ಅವಸ್ಥೆಯಿಂದ ಸಾಂಸ್ಕೃತಿಕ ಅವಸ್ಥೆಗೆ ದಾಟಿ ಬರುವ ಪ್ರಕ್ರಿಯೆಯಲ್ಲಿ ಮನುಷ್ಯರು ಜೈವಿಕ ಸಂಬಂಧಗಳನ್ನು ಹಲವು ವೈಸಾದೃಶ್ಯಗಳ ಸರಣಿಯೆಂದು ಗುರುತಿಸಲು ಸಮರ್ಥರಾಗಿರುವುದು ಕಂಡು ಬರುತ್ತದೆ. ದ್ವಿತ್ವ, ಪರ್ಯಾಯ, ವಿರೋಧ, ಸಾಮ್ಯ ಇವೇ ಆ ವೈಸಾದೃಶ್ಯಗಳು. ಹೀಗೆ ಗುರುತಿಸುವ ವೈಸಾದೃಶ್ಯಗಳು ಕೆಲವೊಮ್ಮೆ ಸ್ಪಷ್ಟವೂ ಮತ್ತೆ ಕೆಲವೊಮ್ಮೆ ಅಸ್ಪಷ್ಟವೂ ಆಗಿರುತ್ತವೆ. ಆದರೆ ಇವು ಯಾವುದೇ ಸಾಮಾಜಿಕ ವಾಸ್ತವದಿಂದ ದತ್ತವಾದ ಸಂಗತಿಗಳ ಮೂಲಕ ವಿವರಿಸಲು ಬರುವಂಥವಲ್ಲ"[೧] ಎನ್ನುತ್ತಾರೆ.

ದ್ವಿಮಾನ ಕಲ್ಪನೆ ಮೊದಲು ವೈರುಧ್ಯಗಳಿಂದ ಕೂಡಿರಲಿಲ್ಲ. ಒಂದು ಇನ್ನೊಂದರ ಅಸ್ತಿತ್ವದ ಬಗ್ಗೆ ಅರಿವು ಹೊಂದಿಲ್ಲದೆಯೂ ಇದ್ದಿರಬಹುದು ಅಥವಾ ಒಂದು ಇನ್ನೊಂದರ ಸ್ವಾಯತ್ತತೆಯನ್ನು ಒಪ್ಪಿಕೊಂಡಿರಬಹುದು. ಉದಾ: ರಾತ್ರಿ–ಹಗಲುಗಳಿಗೆ ಭಿನ್ನ ಸ್ವಾಯತ್ತತೆ ಇದೆ. ಇವುಗಳನ್ನು ವಿರೋಧದ ನೆಲೆಯಲ್ಲಿ ಗ್ರಹಿಸುವಿಕೆಯೇ ದೋಷಪೂರ್ಣವಾಗುತ್ತದೆ. ಆಗ ಇವುಗಳು ಅಸಂಗತ ಲೋಕ ವಿಭಜನೆಯ ಮಾದರಿಗಳಾಗುತ್ತವೆ. ಆದರೆ, ಸ್ತ್ರೀವಾದಿಗಳ ದ್ವಿಮಾನ ಕಲ್ಪನೆಯ ಲಿಂಗವಿಭಜನೆ ಸಾಹಚರ್ಯದ ನೆಲೆಗಿಂತ ವಿರೋಧದ ನೆಲೆಯಲ್ಲಿಯೇ ನಿಂತಿರುವುದನ್ನು ಗಮನಿಸಬಹುದು.

ಗಂಡ–ಹೆಂಡತಿ ಈ ರಚನೆಯಲ್ಲಿ ಇರುವ ಎರಡು ಲಿಂಗಗಳಿಗೆ ಒಂದು ಇನ್ನೊಂದನ್ನು ಬಿಟ್ಟಿರಲಾರದ ಅನಿವಾರ್ಯತೆ ಇದೆ. ಎರಡಕ್ಕೂ ತನ್ನದೇ ಪ್ರತ್ಯೇಕ ಅಸ್ತಿತ್ವವಿದೆ. ಇವುಗಳನ್ನು ವಿಂಗಡಿಸಿ, ಪರಸ್ಪರ ವಿರೋಧದ ನೆಲೆಯಲ್ಲಿ ಗ್ರಹಿಸುವಲ್ಲಿ ಎರಡು ಅಂಶಗಳು ಪೂರಕವಾಗಿ ಕಾರ್ಯನಿರ್ವಹಿಸುತ್ತವೆ. ಅವುಗಳೆಂದರೆ, 'ಸ್ವ' ಮತ್ತು 'ಅನ್ಯತ್ವದ' ಕಲ್ಪನೆಗಳು. 'ಸ್ವ'ವನ್ನು ಪುರುಷನಿಗೂ, 'ಅನ್ಯ'ವನ್ನು ಸ್ತ್ರೀಯರಿಗೂ ಆರೋಪಿಸಿ ಚರ್ಚಿಸಲಾಗುತ್ತಿದೆ. ಅನ್ಯವನ್ನು 'ಅಧೀನ' ಎಂಬ ಅರ್ಥದಲ್ಲಿ ಗ್ರಹಿಸಲಾಗುತ್ತಿದೆ. ಹೆಣ್ಣನ್ನು 'ಅನ್ಯಳು' ಎಂದು ಹೇಳುತ್ತಿರುವ ದೃಷ್ಟಿಕೋನ ಯಾರದು? ಅವಳ ದೃಷ್ಟಿಯಲ್ಲಿ ಅವನು ಕೂಡ ಅನ್ಯನೇ ಆಗಿರುತ್ತಾನೆ.

ಈ ಹಿನ್ನೆಲೆಯಲ್ಲಿ ಸಿಮೋನ್ ದ ಬೊವಾ ಅವರ ವಿಚಾರವನ್ನು ಗಮನಿಸಬಹುದು: "ಗಂಡಸು ಅನ್ಯವನ್ನು ಹೊರತುಪಡಿಸಿ ತನ್ನನ್ನು ಕುರಿತು ತಾನು ಚಿಂತಿಸಲಾರ, ಜಗತ್ತನ್ನು ಆತ ದ್ವಿಮಾನ ಭಾವದಲ್ಲೇ ಗ್ರಹಿಸುತ್ತಾನೆ. ಆತನ ಗ್ರಹಿಕೆಯ ಜಗತ್ತಿನ ಈ ಎರಡು ಹೋಳುಗಳಲ್ಲಿ ಲಿಂಗಭೇದವಿಲ್ಲ. ತಾನಲ್ಲದ ಇನ್ನೊಂದು ತನ್ನಂತೆ ಗಂಡಸಲ್ಲ ಎಂಬ ಅರಿವಿರುವುದರಿಂದ. ಆ ಅನ್ಯದಲ್ಲಿ ಹೆಂಗಸನ್ನು ಸಂಸರ್ಗಗೊಳಿಸಲು ಗಂಡಸು ಮುಂದಾದನು. ಹೀಗಾಗಿ ಹೆಣ್ಣು ಅನ್ಯದ ವ್ಯಾಪ್ತಿಗೆ ಬಂದಳು. ಮೊದಮೊದಲು ಅನ್ಯವೆಂದು ತಿಳಿದಿದ್ದ ಎಲ್ಲವೂ ಹೆಂಗಸಾಗಿರಲಿಲ್ಲ. ಅದರೊಳಗಿನ ಒಂದು ಭಾಗವಾಗಿ ಮಾತ್ರ ಅವಳು ಜಾಗ ಪಡೆದುಕೊಂಡಿದ್ದಳು"[೨] ಎನ್ನುತ್ತಾರೆ.

ಯಾವುದೇ ದ್ವಿಮಾನ ಕಲ್ಪನೆ ಮೊದಲು ಲಿಂಗಭೇದವನ್ನು ಸೂಚಿಸುತ್ತಿರಲಿಲ್ಲ. ಇದೊಂದು ಕಲ್ಪಿತ ವಿಂಗಡಣೆ. ಅವಿನಾಭಾವಕ್ಕಿಂತ ಹೆಚ್ಚು ವಿಭಜಿತ ನೆಲೆಯಲ್ಲೇ ಮಾನವರ ಗ್ರಹಿಕೆಗಳು ನಡೆಯುತ್ತಿರುತ್ತವೆ ಎಂಬುದನ್ನು ಕೂಡ ಕಡೆಗಣಿಸುವಂತಿಲ್ಲ. ಈ ಎರಡೂ ಗ್ರಹಿಕೆಗಳ ಹಿನ್ನೆಲೆಯಲ್ಲಿ ಲಿಂಗ ವಿಭಜನೆಯನ್ನು ಪರಿಶೀಲಿಸುವುದು ಸೂಕ್ತವೆನಿಸುತ್ತದೆ.

**೨.೩. ಭಾಷೆ ಮತ್ತು ಅಧಿಕಾರ**

ಸಾಮಾಜಿಕ ಅಸಮಾನತೆ ಹಾಗೂ ಲಿಂಗ ತಾರತಮ್ಯಕ್ಕೂ ಆ ಸಮಾಜದ ಕೆಲವು ಅಧಿಕಾರ ಶಕ್ತಿಗಳ ಪಾತ್ರ ಮುಖ್ಯವಾಗಿರುತ್ತದೆ ಎಂಬುದು ಸ್ತ್ರೀವಾದಿಗಳ ವಾದ. ಹಾಗಾದರೆ, ಭಾಷೆಗೂ ಅಧಿಕಾರಕ್ಕೂ ಇರುವ ಸಂಬಂಧದ ಸ್ವರೂಪ ಎಂಥದ್ದು? ಅಧಿಕಾರ ಪ್ರಜ್ಞಾಪೂರ್ವಕವಾಗಿ ನಡೆಯುವ ಕ್ರಿಯೆಯೆ? ಎಂಬ ಪ್ರಶ್ನೆಗಳು ಮೊದಲಿಗೆ ಎದುರಾಗುತ್ತವೆ. ಮಿಶೆಲ್ ಫುಕೋ 'ಸಂಕಥನ' ಕಲ್ಪನೆಯನ್ನು ಭಾಷೆಗೂ ಮತ್ತು ಅಧಿಕಾರ ಕೇಂದ್ರಗಳಿಗೂ ಇರುವ ಸಂಬಂಧವನ್ನು ಚರ್ಚಿಸಲು ಬಳಸಿದ್ದಾರೆ. "ಯಾರು ಏನನ್ನು ಹೇಳಬಹುದು ಮತ್ತು ಯಾವ ಪ್ರಕಾರದಲ್ಲಿ ಹೇಳಬಹುದು? ಯಾವುದು ಯಾವ ಸಂದರ್ಭದಲ್ಲಿ ಉಚಿತ ಮತ್ತು ಯಾವುದು ಅನುಚಿತ? ಯಾರಿಗೆ ಏನನ್ನು ಹೇಳುವ ಅಧಿಕಾರವಿದೆ? ಯಾರು ಕೇಳಬೇಕು? ಯಾರು ಎಷ್ಟು ಮಾತನಾಡಬೇಕು? ಯಾರು ಹೆಚ್ಚು ಮಾತನಾಡಬಾರದು ಎಂಬ ನಿರ್ದೇಶನಗಳನ್ನು ಒಂದು ಕಾಲದ ಸಂಕಥನ ನಿರ್ಧರಿಸುತ್ತಿರುತ್ತದೆ"[೩] ಎಂದು ಫುಕೋನ ಸಂಕಥನ ಪರಿಕಲ್ಪನೆ ಚರ್ಚಿಸುತ್ತದೆ.

ಇಲ್ಲಿ ಭಾಷೆ ಮತ್ತು ಅಧಿಕಾರಕ್ಕೂ ನಿಕಟ ಸಂಬಂಧವಿದೆ ಎಂಬುದನ್ನು ಹೇಳಲಾಗುತ್ತಿದೆ. ಆದರೆ, ಸಾಮಾಜಿಕವಾಗಿ ಅಧಿಕಾರದ ಪರಿಕಲ್ಪನೆ ವರ್ಗ, ಜಾತಿ, ವಿದ್ಯಾಭ್ಯಾಸ, ಲಿಂಗ, ವಯಸ್ಸುಗಳು ವಿವಿಧ ಆಯಾಮಗಳಲ್ಲಿ ಹೇಗೆ ಕಾರ್ಯನಿರ್ವಹಿಸುತ್ತವೆ ಎಂಬುದನ್ನು ಕೂಡ ಪರಿಗಣಿಸಬೇಕಾಗುತ್ತದೆ. ಅಧಿಕಾರ, ಮೇಲಿನ ಎಲ್ಲ ನೆಲೆಗಳಲ್ಲೂ ಒಂದೇ ರೀತಿಯಲ್ಲಿ ತನ್ನ ಪರಿಣಾಮ, ಪ್ರಭಾವ ಬಿರುತ್ತದೆಯೇ? ಅಥವಾ ಭಿನ್ನವಾಗಿರುತ್ತದೆಯೇ ಎಂಬುದನ್ನು ಪರಿಶೀಲಿಸುವ ಅಗತ್ಯವಿದೆ. ಉದಾ: ಸಾಮಾಜಿಕವಾಗಿ ಮೇಲುಜಾತಿಯ ಪುರುಷ ಮತ್ತು ಮಹಿಳೆಯರು ಕೆಳಜಾತಿಯ ಪುರುಷ, ಮಹಿಳೆಯರನ್ನೊಳಗೊಂಡಂತೆ ಏಕವಚನದಲ್ಲಿ ಸಂಬೋಧಿಸುತ್ತಾರೆ. ಅದೇ ಕೆಳಜಾತಿಯ ಪುರುಷ ಮತ್ತು ಮಹಿಳೆಯರು ಮೇಲ್ಜಾತಿಯ ಮಕ್ಕಳನ್ನು ಒಳಗೊಂಡಂತೆ ಎಲ್ಲರನ್ನು ಬಹುವಚನದಲ್ಲಿ ಸಂಬೋಧಿಸುತ್ತಾರೆ. ಇಲ್ಲಿ ಮೇಲ್ಜಾತಿ ಅಧಿಕಾರಯುತವಾಗಿ ಕೆಳಜಾತಿ ಅಧೀನವಾಗಿದೆ. ಅಧಿಕಾರ ಮತ್ತು ಭಾಷೆಯ ಸಂಬಂಧ ಇಲ್ಲಿ ಏಕಮುಖವಾಗಿ ಚಲಿಸುತ್ತದೆ. ಆದರೆ ಲಿಂಗದ ನೆಲೆಯಲ್ಲಿ ಅಧಿಕಾರ ಈ ರೀತಿಯಲ್ಲಿ ಚಲಿಸುವುದಿಲ್ಲ. ಉದಾ: ಒಬ್ಬ ಅಧಿಕಾರದಲ್ಲಿರುವ ಮಹಿಳೆ ತನ್ನ ಕೈಕೆಳಗೆ ಕೆಲಸ ಮಾಡುವ ಪುರುಷನ ಮೇಲೆ ಅಧಿಕಾರದಿಂದ ವರ್ತಿಸಬಹುದು. ಆದರೆ, ಆಕೆ ಮನೆಯಲ್ಲಿ ತನ್ನ ಅತ್ತೆ, ಗಂಡನಿಗೆ ಅಧೀನಳಾಗಿ ಬದುಕುತ್ತಿರಬಹುದು. ಇಲ್ಲಿ ಲಿಂಗ ಮತ್ತು ಅಧಿಕಾರದ ಚಲನೆ ಏಕಮುಖವಾಗಿರುವುದಿಲ್ಲ. ಅದಕ್ಕೆ ಬಹುಮುಖಿ ಆಯಾಮಗಳಿರುತ್ತವೆ.

ಸ್ತ್ರೀವಾದಿಗಳ ಭಾಷೆ ಮತ್ತು ಅಧಿಕಾರದ ಸಂಬಂಧದ ಚರ್ಚೆಯನ್ನು ಗಮನಿಸುವುದಾದರೆ, ಈ ಅಧಿಕಾರದಿಂದಾಗಿ ಪುರುಷನ ಮತ್ತು ಸ್ತ್ರೀಯರ ಸಂಭಾಷಣೆಯಲ್ಲಿ ಎರಡು ರೀತಿಯ ಪರಿಣಾಮಗಳನ್ನು ಗುರುತಿಸುತ್ತಾರೆ. ಅವುಗಳೆಂದರೆ,

೧. ಗಂಡು ಮತ್ತು ಹೆಣ್ಣಿನ ಸಂಭಾಷಣೆಯಲ್ಲಿ ಅಸಮಾನತೆ.

೨. ಈ ಅಸಮಾನತೆಯಿಂದಾಗಿ ಸಂಭಾಷಣೆಯಲ್ಲಿ ಅಪಾರ್ಥ ಉಂಟಾಗುವಿಕೆ ಹಾಗೂ ಮಾತುಕತೆ ಮುರಿದು ಬೀಳುವಿಕೆ.

ಇದಕ್ಕೆ ಪೂರಕವಾಗಿ ಸ್ತ್ರೀವಾದಿಗಳು ಗಂಡು ಮತ್ತು ಹೆಣ್ಣಿನ ಸಂಭಾಷಣೆಯ ಶೈಲಿಗಳನ್ನು ಪಟ್ಟಿಮಾಡುತ್ತಾರೆ. ಅವುಗಳು ಈ ಮುಂದಿನಂತಿವೆ.

| **ಹೆಣ್ಣಿನ ಸಂಭಾಷಣಾ ಶೈಲಿ** | **ಗಂಡಿನ ಸಂಭಾಷಣಾ ಶೈಲಿ** |
|---|---|
| ಸಹಕಾರ | ಪೈಪೋಟಿ |
| ಸಮಾನತೆ | ಅಧಿಕಾರ ಸ್ಥಾಪನೆ |
| ಸಹಭಾಗಿತ್ವ | ಸವಾಲು ಹಾಕುವಿಕೆ |
| ಸಂಬಂಧ ರಚನೆ | ಯಾಜಮಾನ್ಯ |
| ಹಂಚಿಕೊಳ್ಳುವಿಕೆ | ವಾದ ಹೂಡುವಿಕೆ |
| ಸಹಾನುಭೂತಿ | ಮಾತಿನ ರಭಸ[೪] |

ಹೀಗೆ ಎರಡು ವಿಧದ ಸಂಭಾಷಣಾ ಶೈಲಿಯನ್ನು ಒಂದು ಗಂಡಿಗೆ ಮತ್ತೊಂದನ್ನು ಹೆಣ್ಣಿಗೆ ಹೋಲಿಸಿ ವಿಂಗಡಿಸಿ ಚರ್ಚಿಸಲಾಗುತ್ತಿದೆ.

ಅಧಿಕಾರ ಮತ್ತು ಭಾಷೆಯ ಸಂಬಂಧವನ್ನು ಎರಡು ಭಿನ್ನ ನೆಲೆಯ, ಪರಸ್ಪರ ವಿರೋಧಿ ಎನ್ನಬಹುದಾದ ನಿಲುವನ್ನು ತೀವ್ರವಾದಿ ಮತ್ತು ಉದಾರವಾದಿ ಸ್ತ್ರೀವಾದಿಗಳು ಮಂಡಿಸುತ್ತಾರೆ. ಅವುಗಳನ್ನು ಈ ಕೆಳಕಂಡಂತೆ ಎರಡು ರೀತಿಯಲ್ಲಿ ವಿಂಗಡಿಸಿ ಪರಿಶೀಲಿಸಬಹುದು.

೧. ಭಾಷೆ ಅಧಿಕಾರ ವರ್ಗದ ರಚನೆ ಮತ್ತು ಹಿಡಿತದಲ್ಲಿದೆ.

೨. ಭಾಷೆ ಮತ್ತು ಅಧಿಕಾರ ಸಂಬಂಧದ ನಿರಾಕರಣೆ.

ಭಾಷೆಗೂ ಅಧಿಕಾರಕ್ಕೂ ನೇರ ಸಂಬಂಧವನ್ನು ಕಲ್ಪಿಸಿದ ಸ್ತ್ರೀವಾದಿಗಳಲ್ಲಿ ಡೇಲ್ ಸ್ಪೆಂಡರ್ ಪ್ರಮುಖರು. ಅವರ 'ಮ್ಯಾನ್ ಮೇಡ್ ಲಾಂಗ್ವೇಜ್' ಕೃತಿಯಲ್ಲಿ ಭಾಷೆ ಮತ್ತು ಅಧಿಕಾರಕ್ಕೆ ನೇರ ಸಂಬಂಧ ಕಲ್ಪಿಸುವ ಮುಖಾಂತರ ತನ್ನ ಸಿದ್ಧಾಂತವನ್ನು ಕಟ್ಟುತ್ತಾರೆ. "ಮಾನವ ಜೀವಿಗಳು ವಿಶ್ವವನ್ನು ನಿಷ್ಪಕ್ಷಪಾತವಾಗಿ ಬಣ್ಣಿಸಲಾರರು, ಏಕೆಂದರೆ ಬಣ್ಣಿಸಲು ಅವರಿಗೆ ಮೊದಲು ವರ್ಗೀಕರಣ ವ್ಯವಸ್ಥೆಯೊಂದು ಬೇಕು. ವಿರೋಧಾಭಾಸವೆಂದರೆ ಒಮ್ಮೆ ಈ ವರ್ಗೀಕರಣ ವ್ಯವಸ್ಥೆ ದೊರಕಿತೆಂದರೆ ಅವರಿಗೊಂದು ಭಾಷೆ ದೊರಕಿದಂತೆ"[೫] ಎನ್ನುತ್ತಾರೆ.

ಡೇಲ್‌ಸ್ಪೆಂಡರ್ ಮಾನವನ ವಿಕಾಸವೇ ಮೂಲತಃ ವರ್ಗೀಕರಣದ ಮುಖಾಂತರ ರಚಿತವಾಗಿವೆ ಹಾಗೂ ಈ ವರ್ಗೀಕೃತ ಸಮಾಜ ರಚನೆಯಾಗಲೂ ಭಾಷೆಯೇ ಕಾರಣ ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ. ಇಲ್ಲಿ ಭಾಷೆಗೂ ಸಮಾಜದ ವರ್ಗೀಕರಣಕ್ಕೂ ನೇರವಾದ ನಂಟನ್ನು ಕಲ್ಪಿಸುತ್ತಾರೆ. ಈ ವಿಚಾರದ ಹಿನ್ನೆಲೆಯಲ್ಲಿ ಅವರ ಮತ್ತೊಂದು ಹೇಳಿಕೆಯನ್ನು ಗಮನಿಸಬಹುದು: "ಭಾಷೆಯೂ ನಮ್ಮ ಜಗತ್ತನ್ನು ರೂಪಿಸುತ್ತದೆ ಎನ್ನುವುದಾದರೆ, ಸಂಕೇತಗಳನ್ನು ರಚಿಸುವ ಮತ್ತು ಅವುಗಳಿಗೆ ಅರ್ಥಪ್ರಧಾನ ಮಾಡುವ ಅಧಿಕಾರವುಳ್ಳವರು ಈ ಲೋಕದಲ್ಲಿ ವಿಶಿಷ್ಟ ಸ್ಥಾನಮಾನಗಳನ್ನು ಪಡೆದುಕೊಳ್ಳುತ್ತಾರೆ. ತಮ್ಮ ಉದ್ದೇಶಕ್ಕನುಗುಣವಾಗಿ ಈ ಜಗತ್ತನ್ನು ವ್ಯವಸ್ಥೆಗೊಳಿಸುತ್ತಾರೆ. ತಾವೇ ಕೇಂದ್ರದಲ್ಲಿರುವಂತೆ ನೋಡಿಕೊಳ್ಳುವ ಭಾಷೆಯನ್ನು, ವಾಸ್ತವತೆಯನ್ನು, ಜ್ಞಾನವನ್ನು ಸೃಷ್ಟಿಸಿಕೊಳ್ಳುತ್ತಾರೆ. ಯಾರೂ ಪ್ರಶ್ನಿಸಲಾಗದ ನಂಬಿಕೆಯ ಜಾಲವು ಬೇರು ಬಿಡುವಂತೆ ನೋಡಿಕೊಳ್ಳುತ್ತಾರೆ"[೬] ಎನ್ನುತ್ತಾರೆ.

ಭಾಷೆ, ವಾಸ್ತವತೆ ಮತ್ತು ಜ್ಞಾನವನ್ನು ಸಮಾಜದ ಒಂದು ಅಧಿಕಾರ ಕೇಂದ್ರ ಮಾತ್ರ ಸೃಷ್ಟಿಸಿ ನಿಯಂತ್ರಿಸುತ್ತಿರುತ್ತದೆ ಎಂಬುದು ಇವರ ವಾದ. ಸ್ಪೆಂಡರ್ ಪ್ರಕಾರ, ಸಮಾಜದ ಅಧಿಕಾರ ಕೇಂದ್ರ ಒಂದಿದೆ. ಹಾಗಾದರೆ, ಆ ಅಧಿಕಾರ ಕೇಂದ್ರ ಯಾವುದು? ಎಂಬ ಪ್ರಶ್ನೆ ಎದುರಾಗುತ್ತದೆ. ಇದಕ್ಕೆ ಪೂರಕವಾಗಿ ಅವರ ಮತ್ತೊಂದು ಹೇಳಿಕೆಯನ್ನು ಗಮನಿಸಬಹುದು: "ಅಧಿಕಾರ ಕೇಂದ್ರದಲ್ಲಿರುವ ಗಂಡಸರೇ ಭಾಷೆ, ಆಲೋಚನೆ ಮತ್ತು ವಾಸ್ತವತೆಗಳನ್ನು ಸೃಷ್ಟಿಸಿದ್ದಾರೆ. ಚಾರಿತ್ರಿಕವಾಗಿ ನೋಡಿದಾಗ ಕೂಡಾ ಈ ಎಲ್ಲಾ ಪ್ರಕ್ರಿಯೆಗಳೂ ಗಂಡಿನಿಂದಲೇ ನಿಯಂತ್ರಿತವಾಗಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಪ್ರಕ್ರಿಯೆಯಲ್ಲಿ ಕೆಲವು ಗಂಡಸರು ಉಳಿದ ಗಂಡಸರ ಪರವಾಗಿ ಈ ಪ್ರಕ್ರಿಯೆಯನ್ನು ಪೂರ್ಣಗೊಳಿಸಿದ್ದಾರೆ. ಇದರಲ್ಲಿ ಹೆಂಗಸರಿಗೆ ಕಿಂಚಿತ್ತು ಪಾತ್ರವಿಲ್ಲ"[೭] ಎನ್ನುತ್ತಾರೆ. ಇಲ್ಲಿ ಗಂಡಸಿಗೆ ಇರುವ, ಹೆಂಗಸಿಗೆ ದೊರಕದ ಅಧಿಕಾರವೇ ಮುಖ್ಯ ವಿಷಯವಾಗಿದೆ. ಅಂದರೆ, ಗಂಡುತನ ಮತ್ತು ಹೆಣ್ಣುತನ ಎಂದು ವಿಭಾಗಿಸುವ ಲಿಂಗಾಧಾರಿತ ನೆಲೆಗಳಿಗೆ ಅಧಿಕಾರ ಮತ್ತು ಬಲಹೀನತೆ ಎಂಬ ನಾಮಪಟ್ಟಿಗಳನ್ನು ನೀಡುತ್ತಿರುವ ದೃಷ್ಟಿಕೋನವನ್ನು ಗಮನಿಸಬಹುದು.

ಉದಾರವಾದಿ ಸ್ತ್ರೀವಾದಿ ದೃಷ್ಟಿಕೋನವನ್ನು ಹೊಂದಿರುವ ಡೊಬೊರಾ ಕೆಮರಾನ್‌ರವರು ಸ್ಪೆಂಡರ್‌ರ ಮೇಲಿನ ಹೇಳಿಕೆಯನ್ನು ಪರಿಶೀಲಿಸಿ, ತಮ್ಮ ವಾದವನ್ನು ಮಂಡಿಸುತ್ತಾರೆ. "ಸ್ಪೆಂಡರ್‌ಳ ವಾದವು ಪಿತೃಪ್ರಧಾನತೆಯ ಉಗಮವನ್ನು ಕುರಿತ ಮಿಥ್ಯಕಲ್ಪನೆ. ಇದು ಇದ್ದಕ್ಕಿದ್ದಂತೆ ಎಲ್ಲಿಂದಲೋ ಅವತಾರ ಪಡೆದಂತೆ ಬಣ್ಣಿಸಲಾಗಿದೆ. ಎಲ್ಲಕ್ಕಿಂತ ಮೊದಲು ಈ ಲೋಕವನ್ನು ಗಂಡನ್ನು ಮೆಚ್ಚುವ ಹೆಣ್ಣನ್ನು ಕಡೆಗಣಿಸುವ ಬಗೆಯಲ್ಲೇ ವರ್ಗೀಕರಿಸುವ ಒಪ್ಪಿತ ನಿಯಮವೊಂದು ಇದ್ದಿತು ಎಂದು ಹೇಳಿದಂತಿದೆ. ಯಾರು ಈ ನಿಯಮವನ್ನು ಮಾಡಿದರು ಮತ್ತು ಏಕೆ?"[೮] ಈ ಪ್ರಶ್ನೆಯೊಡನೆ ಭಾಷೆಯ ಮೇಲೆ ಗಂಡಸು ಹೊಂದಿರುವ ನಿಯಂತ್ರಣದ ಸಮಸ್ಯೆಯನ್ನು ಕುರಿತು ಚರ್ಚಿಸಬೇಕಾಗುತ್ತದೆ ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ.

ಈ ಹಿನ್ನೆಲೆಯಲ್ಲಿ ಬ್ಲಾಕ್ ಮತ್ತು ಕವಾರ್ಡ್‌ರ ವಿಚಾರಗಳನ್ನು ಪರಿಶೀಲಿಸುವುದಾದರೆ, "ಸಮಾಜದಲ್ಲಿ ಅಧಿಕಾರಕ್ಕೆ ಹಲವು ಆಯಾಮಗಳಿವೆ. ಲಿಂಗ, ವರ್ಗ, ವರ್ಣ, ಮುಂತಾದವೂ ಅಧಿಕಾರದ ನೆಲೆಗಳೇ

ಆಗಿವೆ. ಹೀಗಿರುವುದರಿಂದ ಒಂದು ಗುಂಪು ಇನ್ನೊಂದು ಗುಂಪಿನ ಮೇಲೆ ಅಧಿಕಾರ ಹೊಂದಿರುತ್ತದೆ ಎಂದು ಹೇಳುವುದು ಸರಿಯಾಗಲಾರದು"[೯] ಎನ್ನುತ್ತಾರೆ. ಅಧಿಕಾರವೆಂಬುದು ಒಂದು ಸಾಮಾಜಿಕ ಸ್ಥಿತಿ. ಅದು ಯಾರೋ ಒಬ್ಬರಿಂದ ನಿರ್ಮಾಣವಾದುದಲ್ಲ. ಜಾತಿ, ವರ್ಗ, ವಯಸ್ಸು, ವಿದ್ಯಾಭ್ಯಾಸ, ಲಿಂಗ ಹೀಗೆ ವಿವಿಧ ಕಡೆಗಳಲ್ಲಿ ಅಧಿಕಾರದ ಆಯಾಮಗಳೂ ಭಿನ್ನವಾಗಿರುತ್ತವೆ. ಅಧಿಕಾರವೆಂದರೆ ಕೇವಲ ದಮನಕಾರಿ ನಡವಳಿಕೆ ಮಾತ್ರವಲ್ಲ. ಅಧಿಕಾರ ಎಂಬ ಪರಿಕಲ್ಪನೆಯನ್ನು ಬಹು ಆಯಾಮಗಳ ನೆಲೆಯಿಂದ ನೋಡಬೇಕಾಗುತ್ತದೆ. ಅಧಿಕಾರದ ಪರಿಕಲ್ಪನೆಯನ್ನು ಎರಡು ರೀತಿಯಲ್ಲಿ ತಿಳಿಯಬಹುದು.

೧. ಅಧಿಕಾರದ ಉದ್ದೇಶ.

೨. ಅಧಿಕಾರದ ಅಸ್ತಿತ್ವ

ಗಂಡಸರು ಉದ್ದೇಶಪೂರ್ವಕವಾಗಿ ವ್ಯವಸ್ಥಿತ ಯೋಜನೆಗಳ ಮೂಲಕ ಹೆಂಗಸರ ಮೇಲೆ ಅಧಿಕಾರವನ್ನು ಚಲಾಯಿಸುತ್ತಾರೆಯೇ? ಕೆಲವು ಕಟ್ಟುಪಾಡುಗಳಿಂದ ರಚನೆಯಾದ ಸಂಸ್ಕೃತಿ ಮತ್ತು ಪರಂಪರೆಗೆ ಅವರು ವಾರಸುದಾರರಾಗಬಹುದು. ಅದರಿಂದಾಗಿ ಅವರ ವರ್ತನೆಗಳಲ್ಲಿ ಯಾಜಮಾನ್ಯದ ದೃಷ್ಟಿಕೋನವಿರಬಹುದು. ಇಲ್ಲಿ ಏಕಕಾಲದಲ್ಲಿ, ಪ್ರಜ್ಞಾಪೂರ್ವಕವಾಗಿ ಅಧಿಕಾರದ ಉದ್ದೇಶ ಹಾಗೂ ಅಸ್ತಿತ್ವಗಳೆರಡೂ ಒಟ್ಟೊಟ್ಟಿಗೆ ಇರುವುದಿಲ್ಲ. ಹೆಂಗಸರೂ ಇದೇ ಕೆಲಸವನ್ನು ಮಾಡುತ್ತಿರುತ್ತಾರೆ. ಉದಾ: ಅಮ್ಮಂದಿರು, ಅತ್ತೆಯಂದಿರು. ಇವರು ಸಮಾಜದ ಕೆಲವು ಕಟ್ಟುಪಾಡುಗಳಿಗೆ ಅನುಗುಣವಾಗಿ ಬದುಕುತ್ತಿರುತ್ತಾರೆ ಮತ್ತು ಮುಂದಿನ ಪೀಳಿಗೆಯವರಿಗೆ ಆದೇಶಿಸುತ್ತಿರುತ್ತಾರೆ.

ಅಧಿಕಾರ ವರ್ಗಗಳ ಮತ್ತು ಭಾಷೆಯ ನಡುವಿನ ಸಂಬಂಧ ವೈಯಕ್ತಿಕ ಸಂದರ್ಭ ಹಾಗೂ ಸಾಮಾಜಿಕ ಸಂದರ್ಭಗಳಲ್ಲಿ ಭಿನ್ನವಾಗುತ್ತದೆ. ಸಮುದಾಯದ ಪರಸ್ಪರ ಸಮ್ಮತಿಯಿಂದ ಉಂಟಾದ ಸಾಮಾಜಿಕ ವಲಯ ಹಾಗೂ ಕೌಟುಂಬಿಕ ವಲಯಗಳಲ್ಲಿನ ಚಟುವಟಿಕೆಗಳಲ್ಲಿ ಭಾಷಿಕಾಂಶಗಳು ಭಿನ್ನವಾಗುತ್ತವೆ. ಉದಾ: ಒಬ್ಬ ಹೆಣ್ಣು, ಕುಟುಂಬದಲ್ಲಿ ಪುರುಷನ ಅಧಿಕಾರದ ಹಿಡಿತಕ್ಕೆ ಒಳಪಟ್ಟಿರಬಹುದು. ಜೊತೆಗೆ ಆಕೆ ಸಾಮಾಜಿಕವಾಗಿ ಜಾತಿವಾದಿಯಾಗಿರಬಹುದು. ಇಂತಹ ಸಂದರ್ಭಗಳಲ್ಲಿ ಅಧಿಕಾರದ ಅರ್ಥವ್ಯಾಪ್ತಿ ಬದಲಾಗುತ್ತದೆ. ಏಕಕಾಲದಲ್ಲಿ ಆಕೆ ಪುರುಷನ ಅಧೀನಕ್ಕೆ ಒಳಪಟ್ಟರೂ ಜಾತಿಯ ಕಾರಣದಿಂದಾಗಿ ಮತ್ತೊಂದು ಜಾತಿಯವರ ಮೇಲೆ ಅಧಿಕಾರ ಚಲಾಯಿಸುತ್ತಿರುತ್ತಾಳೆ. ಈ ರೀತಿಯ ದ್ವಿಸ್ತರತೆ ಭಾಷೆ ಮತ್ತು ಅಧಿಕಾರ ಶಕ್ತಿಗಳ ಸಂಬಂಧವನ್ನು ಸಾಮಾಜಿಕವಾಗಿ ದ್ವಿಮುಖಗೊಳಿಸುತ್ತದೆ.

### ೨.೪. ಭಾಷೆ ಮತ್ತು ಸಂಸ್ಕೃತಿ

ಗಂಡು ಮತ್ತು ಹೆಣ್ಣಿನ ಸಂಭಾಷಣೆಯಲ್ಲಿನ ಅಸಮಾನತೆಗೆ ಅಧಿಕಾರವೇ ಮುಖ್ಯಕಾರಣವೆಂದು ಅಧಿಕಾರದ ಚೌಕಟ್ಟಿನವರು ಚರ್ಚಿಸಿದರೆ, ಅವರ ನಡುವಿನ ಮಾತುಕತೆಯ ಅಸಮಾನತೆಗೆ ಅವರು ಬೆಳೆದ ಭಿನ್ನ ಸಂಸ್ಕೃತಿಯೇ ಕಾರಣವೆಂದು ಸಂಸ್ಕೃತಿಯ ಚೌಕಟ್ಟಿನವರು ವಾದಿಸುತ್ತಾರೆ. ಈ ವಾದದ ಪ್ರತಿಪಾದಕರು ಮಾಲ್ಟ್ಜ್ ಮತ್ತು ಬೋರ್ಕರ್. ಇವರ ಭಾಷೆ ಮತ್ತು ಭಿನ್ನ ಸಂಸ್ಕೃತಿಯ ನಡುವಿನ ಸಂಬಂಧದ ಚರ್ಚೆಯನ್ನು ಈ ಮುಂದಿನಂತೆ ಪರಿಶೀಲಿಸಬಹುದು.

ಭಿನ್ನ ಸಂಸ್ಕೃತಿಯ ಮಾದರಿಯವರು ಹೆಣ್ಣು ಗಂಡುಗಳ ಮಾತಿನಲ್ಲಿರುವ ವ್ಯತ್ಯಾಸಕ್ಕೆ ಯಜಮಾನಿಕೆ ಕಾರಣವೆಂಬುದನ್ನು ಒಪ್ಪುವುದಿಲ್ಲ. ಇದಕ್ಕೆ ಪೂರಕವಾಗಿ ಮಾಲ್ಟ್ಜ್ ಮತ್ತು ಬೋರ್ಕರ್‌ರವರ ಹೇಳಿಕೆಯನ್ನು ಪರಿಶೀಲಿಸಬಹುದು: "ಲಿಂಗಭಿನ್ನತೆ ಎಂಬುದು ಸಾಂಸ್ಕೃತಿಕ ಭಿನ್ನತೆ. ಆದ್ದರಿಂದ ಗಂಡು ಮತ್ತು ಹೆಣ್ಣು ಮಾತಾಡುವಾಗ ಎರಡು ಭಿನ್ನ ಸಂಸ್ಕೃತಿಗಳಿಗೆ ಸೇರಿದವರ ನಡುವೆ ಮಾತುಕತೆ ನಡೆದಂತಿರುತ್ತದೆ. ಗಂಡು ಹೆಣ್ಣುಗಳು ಸಾಮಾಜಿಕ ಭಾಷಿಕ ನೆಲೆಯ ಉಪಸಂಸ್ಕೃತಿಗಳಿಂದ ಬಂದವರಾಗಿರುತ್ತಾರೆ. ಏಕೆಂದರೆ ಅನೌಪಚಾರಿಕ ಮಾತುಕತೆಯ ನಿಯಮಗಳನ್ನು ಕಲಿಯುವುದು ಬಾಲ್ಯದಲ್ಲಿ. ಆಗ ಹುಡುಗರು ಮತ್ತು ಹುಡುಗಿಯರು ಹೆಚ್ಚಾಗಿ ತಂತಮ್ಮ ಲಿಂಗಕ್ಕೆ ಸೇರಿದವರೊಡನೆ ಆಡುತ್ತಾ, ಮಾತಾಡುತ್ತಾ ಬೆಳೆಯುತ್ತಾರೆ. ಆದರೆ, ಗಂಡಸರು ಮತ್ತು ಹೆಂಗಸರು ಮಾತುಕತೆಗಳಲ್ಲಿ ಪದಗಳನ್ನು ಹೇಗೆ ಬೇರೆಯಾಗಿ ಬಳಸಬೇಕು ಎನ್ನುವುದನ್ನು ಬೆಳೆದ ಮೇಲೆ ಕಲಿಯಬೇಕು"[೧೦] ಎನ್ನುತ್ತಾರೆ.

ಈ ಭಿನ್ನ ಸಂಸ್ಕೃತಿಯ ಚೌಕಟ್ಟು ಎಷ್ಟು ಸರಿ? ಎಂಬ ಪ್ರಶ್ನೆ ಎದುರಾಗುತ್ತದೆ. ಇದಕ್ಕೆ ಪೂರಕವಾಗಿ ಅಕ್ಯುಚಿಡಾ(Akiuchida)ರವರ ವಾದ ಹೀಗಿದೆ: "ಗಂಡು ಹೆಣ್ಣುಗಳು ಮಾತಾಡುವಾಗ ಭಿನ್ನ ಸಂಸ್ಕೃತಿಯ ಮಾದರಿಯನ್ನು ಅನುಸರಿಸುತ್ತಾರೆ ಎಂದು ಹೇಳುವುದು ತೀರಾ ಸರಳ ಗ್ರಹಿಕೆ. ಏಕೆಂದರೆ, ಮಕ್ಕಳು ತಂತಮ್ಮ ಲಿಂಗದ ಮಕ್ಕಳೊಡನೆ ಎಷ್ಟೇ ಸಮಯವನ್ನು ಕಳೆದರೂ ಬೇರೆ ಲಿಂಗದ ಮಕ್ಕಳಿಂದ ಸಂಪೂರ್ಣ ಬೇರ್ಪಟ್ಟಿರುವುದಿಲ್ಲ. ಸಮಲಿಂಗಿಗಳೊಡನೆ ಗೆಳೆತನದ ಮಾತುಕತೆಯ ನಿಯಮವನ್ನು ಕಲಿಯುತ್ತಿರುವಾಗಲೇ ಅವರು ಬೇರೆ ಲಿಂಗದ ಮಕ್ಕಳೊಡನೆ, ತಂದೆ ತಾಯಿಯರೊಡನೆ ಮಾತುಕತೆಯಾಡುತ್ತಿರುತ್ತಾರಷ್ಟೇ. ಹೀಗಾಗಿ ಹುಡುಗರು ಮತ್ತು ಹುಡುಗಿಯರು ಸಂಸ್ಕೃತಿಯು ಸಿದ್ಧಗೊಳಿಸಿಕೊಟ್ಟ ಮಾದರಿಗಳನ್ನು ತಮ್ಮೊಳಗೆ ನೆಲೆಗೊಳಿಸಿಕೊಳ್ಳುತ್ತಾರೆ. ಆದ್ದರಿಂದ ಬೆಳೆದ ಮೇಲೆ ಮಾತುಕತೆಗೆ ತೊಡಗುವ ಗಂಡು, ಹೆಣ್ಣುಗಳು ಯಾವುದೋ ಒಂದು ಕಾರ್ಖಾನೆಯಲ್ಲಿ ಜೊತೆಗೂಡಿ ಕೆಲಸ ಮಾಡುತ್ತಿರುವ ಅಮೆರಿಕ ಮತ್ತು ಜಪಾನಿನ ಕಾರ್ಮಿಕರಂತೆ ನಿಜವಾಗಿಯೂ ಬೇರೆ ಬೇರೆ ಸಂಸ್ಕೃತಿಗಳಿಗೆ ಸೇರಿರುವುದಿಲ್ಲ. ಕಾರ್ಖಾನೆಯ ಸಂದರ್ಭದಲ್ಲಿ ಕಾರ್ಮಿಕರು ಇನ್ನೊಂದು ಸಂಸ್ಕೃತಿಯ ಪರಿಚಯ ಪಡೆದಿರುವುದಿಲ್ಲ. ಆದರೆ, ಹೆಣ್ಣು ಗಂಡುಗಳ ವಿಚಾರ ಹೀಗಲ್ಲ"[೧೧] ಎನ್ನುತ್ತಾರೆ.

ಗಂಡು ಹೆಣ್ಣಿನ ಮಾತುಕತೆಯ ಭಿನ್ನತೆಗೆ ಅಧಿಕಾರದ ಚೌಕಟ್ಟನ್ನು ತೆಗೆದು ಭಿನ್ನ ಸಂಸ್ಕೃತಿಯ ಚೌಕಟ್ಟನ್ನು ಕೊಡುವುದರಿಂದ ಒಂದು ಪರ್ಯಾಯ ವಿವರಣೆಯನ್ನು ನೀಡಿದಂತಾಯಿತೆ ವಿನಃ ಬೇರೇನೂ ಅಲ್ಲ. ಭಿನ್ನ ಸಂಸ್ಕೃತಿ ಎಂಬ ಪರಿಕಲ್ಪನೆಯನ್ನು ಬಳಸಿದ ಕೂಡಲೇ ಗಂಡು ಹೆಣ್ಣುಗಳ ನಡುವೆ ಭಿನ್ನತೆಯ ಪಟ್ಟಿಯೊಂದಿದೆ ಎಂಬುದನ್ನು ನಂಬಿದಂತಾಗುತ್ತದೆ. ಆದರೆ, ಗಂಡು ಮತ್ತು ಹೆಣ್ಣುಗಳನ್ನು ಹೀಗೆ ಭಿನ್ನ ಸಂಸ್ಕೃತಿಗಳಿಂದ ಬಂದವರು ಎಂದು ನಂಬುವುದೇ ಸರಳೀಕರಣವಾಗುತ್ತದೆ. ಪುರುಷ – ಸ್ತ್ರೀಯರ ನಡುವಿನ ಮಾತುಕತೆಯನ್ನು ಒಂದೇ ಸಂಸ್ಕೃತಿಯ ಭಿನ್ನ ಭಿನ್ನವಲಯಗಳ ನೆಲೆಯಿಂದ ಪರಿಶೀಲಿಸುವುದು ಸೂಕ್ತವೆನಿಸುತ್ತದೆ. ಆಗ ಒಂದು ಸಂಸ್ಕೃತಿಯ ಒಳ ರಚನೆಗಳ ನೆಲೆಗಳು ಗೋಚರವಾಗುತ್ತವೆ.

ಇದಕ್ಕೆ ಪೂರಕವಾಗಿ ಅಕ್ಕುಚಿಡಾರವರ ಮತ್ತೊಂದು ಹೇಳಿಕೆಯನ್ನು ಗಮನಿಸಬಹುದು: "ಭಿನ್ನ ಸಂಸ್ಕೃತಿ ಮಾದರಿಯನ್ನು ಗಂಡು ಹೆಣ್ಣುಗಳ ಮಾತುಕತೆಯ ವಿಶ್ಲೇಷಣೆಗೆ ಬಳಸುವುದೆಂದರೆ, ಯಾಜಮಾನ್ಯವನ್ನು ಆಧರಿಸಿದ ಮಾದರಿಯನ್ನು ಅನ್ವಯಿಸಿದಂತೆಯೇ ಸರಿ. ಜನಾಂಗ, ವರ್ಗ, ವಯಸ್ಸು ಮತ್ತು ಲಿಂಗ ದೃಷ್ಟಿಕೋನಗಳು ಮಾತುಕತೆಯಲ್ಲಿ ವಹಿಸುವ ಪಾತ್ರವನ್ನು ಈ ಎರಡೂ ಮಾದರಿಗಳು ಪರಿಗಣಿಸುವುದಿಲ್ಲ. ಗಂಡು ಹೆಣ್ಣುಗಳು ತಂತಮ್ಮ ಸಮಲಿಂಗಿ ಗುಂಪುಗಳ ಭಾಗವಾಗಿರುವಂತೆ, ಪರಸ್ಪರ ನಂಟುಳ್ಳ ಹಲವು ಸಾಮಾಜಿಕ ಗುಂಪುಗಳಿಗೂ ಸೇರಿರುತ್ತಾರೆ. ಹಾಗಾಗಿ ಒಬ್ಬ ವ್ಯಕ್ತಿ ಇನ್ನೊಬ್ಬರೊಡನೆ ವ್ಯವಹರಿಸುವಾಗ ಕೇವಲ ಹೆಂಗಸು ಅಥವಾ ಗಂಡಸು ಮಾತ್ರ ಆಗಿರುವುದಿಲ್ಲ"[೨] ಎನ್ನುತ್ತಾರೆ. ಸಾಮಾಜಿಕವಾಗಿ ಗಂಡು ಮತ್ತು ಹೆಣ್ಣಿನ ಪಾತ್ರ ನಿರ್ವಹಣೆ ಕೇವಲ ಲಿಂಗ ಪ್ರತಿನಿಧಿಗಳಾಗಿ ಮಾತ್ರ ಇರುವುದಿಲ್ಲ ಎಂಬುದನ್ನು ಗಮನಿಸಬೇಕಾಗುತ್ತದೆ.

ಅಧಿಕಾರ ಮತ್ತು ಭಿನ್ನ ಸಂಸ್ಕೃತಿಯ ಎರಡೂ ಮಾದರಿಗಳು ಗಂಡು ಮತ್ತು ಹೆಣ್ಣಿನ ಸಂವಹನದಲ್ಲಿನ ಭಿನ್ನತೆಗೆ ಅಧಿಕಾರದ ಕೇಂದ್ರವಾಗಿ ಪುರುಷನನ್ನು ಹಾಗೂ ಭಿನ್ನ ಸಂಸ್ಕೃತಿಯಲ್ಲಿ ಮೇಲ್ದರ್ಜೆಯ ಪ್ರತೀಕವಾಗಿ ಕೂಡ ಪುರುಷನನ್ನೇ ಮಾನದಂಡವನ್ನಾಗಿ ನೋಡಲಾಗಿದೆ. ಅಂದರೆ, ಸ್ತ್ರೀಯನ್ನು ಕೇವಲ ಒಳಗೊಳ್ಳುವ, ಅಧೀನ ನೆಲೆಯಲ್ಲಿ ಪರಿಗಣಿಸಲಾಗುತ್ತಿದೆ.

**೨.೫. ಸಮಾಜ, ಲಿಂಗ ಮತ್ತು ಭಾಷೆ**

ಸಾಮಾಜಿಕ ಸಂರಚನೆಯೂ ಜನರ ನಂಬಿಕೆಗಳು, ಮೌಲ್ಯಗಳು, ಮಾಡುವ ಕೆಲಸ ಕಾರ್ಯ, ಮಾತನಾಡುವ ರೀತಿ ಮುಂತಾದವುಗಳನ್ನು ಒಳಗೊಂಡಿರುತ್ತದೆ. ಇವು ಔಪಚಾರಿಕ ವಲಯ ಹಾಗೂ ಅನೌಪಚಾರಿಕ ವಲಯಗಳೆರಡಕ್ಕೂ ಅನ್ವಯವಾಗುತ್ತವೆ. ಸಮುದಾಯದ ಸಂರಚನೆಗಳ ಹಿಂದೆ ಪರಸ್ಪರ ಒಮ್ಮತ ಕೂಡ ಮುಖ್ಯವಾಗಿರುತ್ತದೆ. ವಿರೋಧಿ ಧ್ವನಿಗಳಿದ್ದರೂ ಅವು ಮುಂಚೂಣಿಗೆ ಬರದಂತೆ ಕೆಲ ಶಕ್ತಿಕೇಂದ್ರಗಳೂ ಸದಾ ಕಾರ್ಯ ನಿರ್ವಹಿಸುತ್ತಿರುತ್ತವೆ. ಸಾಮಾಜಿಕ ಚಟುವಟಿಕೆಗಳಿಗೂ, ಲಿಂಗ ನಡಾವಳಿಗಳಿಗೂ ಹಾಗೂ ಭಾಷಿಕ ಚಟುವಟಿಕೆಗಳಿಗೂ ಪರಸ್ಪರ ಪೂರಕ ಸಂಬಂಧವಿದೆ. ಭಾಷಿಕ ಚಟುವಟಿಕೆಗಳು ಸಾಮಾಜಿಕ ಚಟುವಟಿಕೆಗಳಿಂದ ಕಟ್ಟಲ್ಪಡುತ್ತವೆ. ಇವು ಕೇವಲ ಗಂಡು, ಹೆಣ್ಣುಗಳೆಂದಷ್ಟೇ ಕಟ್ಟಲ್ಪಡದೆ ಭಾರತೀಯ, ಮೇಲ್ವರ್ಗ, ಕೆಳಜಾತಿ, ಯುವಜನಾಂಗ, ತೃತೀಯಲಿಂಗ ಹೀಗೆ ವಿವಿಧ ವರ್ಗಗಳಿಗೆ ಅನುಸಾರವಾಗಿ ಭಿನ್ನವಾಗುತ್ತವೆ.

ಹಾಗಾದರೆ, ಲಿಂಗ ಭಿನ್ನತೆ ಅಥವಾ ಲಿಂಗ ಸಂಬಂಧಗಳ ರಚನೆಯಲ್ಲಿ ಭಾಷೆಯ ಪಾತ್ರವೇನು? ಹಾಗೂ ಭಾಷೆಗೂ ಸಾಮಾಜಿಕ ಸಂರಚನೆಗೂ ಇರುವ ಸಂಬಂಧದ ಸ್ವರೂಪ ಎಂತಹುದು? ಎಂಬ ಅಂಶಗಳನ್ನು ಸ್ಪಷ್ಟಪಡಿಸಿಕೊಳ್ಳಬೇಕಾಗುತ್ತದೆ. ಮಾತನಾಡುವ ಒಂದು ಸಮುದಾಯದಲ್ಲಿ ಯಾರು ನಿಯಮ, ರೂಢಿ, ಸಂಪ್ರದಾಯಗಳನ್ನು ನಿರ್ಮಿಸುತ್ತಾರೆ? ಹಾಗೂ ಅವುಗಳನ್ನು ಭಾಷೆಯ ಬಳಕೆಯಲ್ಲಿ ಉಪಯೋಗಿಸಲು ಸೂಚಿಸುತ್ತಾರೆ? ಎಂಬ ಪ್ರಶ್ನೆಗಳು ಎದುರಾಗುತ್ತವೆ.

ಈ ಹಿನ್ನೆಲೆಯಲ್ಲಿ ಮೊದಲು ಭಾಷೆ ಮತ್ತು ಲಿಂಗ ಸಂಬಂಧಗಳ ಕುರಿತ ಸ್ತ್ರೀವಾದಿಗಳ ಕೆಲವು ಹೇಳಿಕೆಗಳನ್ನು ಪರಿಶೀಲಿಸುವುದು ಸೂಕ್ತವೆನಿಸುತ್ತದೆ. ಡೇಲ್‌ಸ್ಪೆಂಡರ್ ಅವರ ಪ್ರಕಾರ: "ಭಾಷೆಯಲ್ಲಿ ಹೆಂಗಸು ಅಧೀನ ಪಾತ್ರವನ್ನು ವಹಿಸುತ್ತಿರುವುದಕ್ಕೆ ಹೆಂಗಸು ಭಾಷೆಯೊಡನೆ ನಕಾರಾತ್ಮಕ ಸಂಬಂಧ ಹೊಂದಿರುವುದೇ ಕಾರಣ. ಗಂಡಸರು ತಮ್ಮನ್ನು ಕೇಂದ್ರದಲ್ಲಿರಿಸುವ ಮತ್ತು ಪ್ರಧಾನಗೊಳಿಸುವ ನಿಯಮಗಳನ್ನು ರೂಪಿಸಿದ್ದಾರೆ. ಆ ನಿಟ್ಟಿನಿಂದ ಲೋಕವನ್ನು ವರ್ಗೀಕರಿಸಲು ಹೊರಟು ಪಿತೃಪ್ರಧಾನ ವ್ಯವಸ್ಥೆಯನ್ನು ಪ್ರತಿನಿಧಿಸುವ ಸಂಕೇತಗಳ ಜಾಲವನ್ನು ರಚಿಸಿದ್ದಾರೆ. ಭಾಷೆಯು ಗಂಡು ಹೆಣ್ಣುಗಳ ಸ್ಥಾನಗಳನ್ನು ತಾನೇ ರಚಿಸುತ್ತದೆ. ಆದರೆ ಗಂಡಸು ಭಾಷೆಗಿಂತಲೂ ಮೊದಲಿನವನಾಗಿದ್ದು ತನ್ನ ಹಿತಾಸಕ್ತಿಯನ್ನು ಸಾಧಿಸಿಕೊಳ್ಳಲು ಅದನ್ನು ಬೇಕಾದ ಹಾಗೆ ಕಟ್ಟಿದ್ದಾನೆ"[೧೩] ಎನ್ನುತ್ತಾರೆ.

ಇದಕ್ಕೆ ಪೂರಕವಾಗಿ ಆಡ್ರಿನ್ ರಿಚ್‌ರವರ ಮತ್ತೊಂದು ಹೇಳಿಕೆಯನ್ನು ನೋಡಬಹುದು: "ನಾವು ಬಳಸುತ್ತಿರುವ ಭಾಷೆಯ ಬಗೆಗೆ ನಾವು ಎಚ್ಚರಗೊಂಡಾಗ ನಮಗೆ ಗಲಿಬಿಲಿ ಉಂಟಾಗುತ್ತದೆ. ನಾವು ಅದನ್ನು ಬಳಸುತ್ತಿಲ್ಲ. ಅದು ನಮ್ಮನ್ನು ಬಳಸುತ್ತಿದೆ ಎಂಬುದು ಗೊತ್ತಾಗುತ್ತದೆ"[೧೪] ಎನ್ನುತ್ತಾರೆ. ಈ ಹೇಳಿಕೆಗಳನ್ನು ಗಮನಿಸಿದರೆ, ಈ ಬಗೆಯ ಚಿಂತನೆಗಳನ್ನು ಒಪ್ಪುವ ಭಾಷಿಕ ತತ್ವ ಯಾವುದು? ಎಂಬ ಪ್ರಶ್ನೆ ಉಂಟಾಗುತ್ತದೆ. "ಭಾಷೆಯು ಆಲೋಚನೆಯ ಸಾಧನ. ಜನರು ಇರುವ ಭಿನ್ನ ಪರಿಸರ ಮತ್ತು ಅನುಭವಗಳಿಂದ ಪ್ರಭಾವಿತವಾದ ಗ್ರಹಿಕೆಗಳನ್ನು ಭಾಷೆಯಲ್ಲಿ ಸಂಕೇತೀಕರಣಗೊಳಿಸಲಾಗುತ್ತದೆ. ಅಂದರೆ, ಭಾಷೆಯು ಗ್ರಹಿಕೆಗಳನ್ನು ಬಿಂಬಿಸುತ್ತವೆಯೇ ಹೊರತು ನಿರ್ಧರಿಸುವುದಿಲ್ಲ."[೧೫] ಸಮುದಾಯದ ನಿಯಮಗಳೂ ಸಂಜ್ಞೆಗಳಾಗಿ ಭಾಷೆಯಲ್ಲಿ ಅಂತಃಸ್ಥವಾಗಿರುತ್ತವೆ ವಿನಃ ಭಾಷೆಯೇ ನೇರವಾಗಿ ತಾರತಮ್ಯದ ಸೃಷ್ಟಿಗೆ ಕಾರಣವಲ್ಲ. ಸ್ತ್ರೀವಾದಿಗಳು ಹೇಳುವಂತೆ ಭಾಷಿಕ ಲಿಂಗತಾರತಮ್ಯವು ಒಂದು ಪ್ರಜ್ಞಾಪೂರ್ವಕವಾದ ಚಟುವಟಿಕೆ ಅಲ್ಲವೆಂಬುದನ್ನು ಗಮನಿಸಬೇಕಾಗುತ್ತದೆ.

"ಭಾಷೆಯು ಒಂದು ರೂಪವೇ ಹೊರತು ವಸ್ತುವಲ್ಲ"[೧೬] ಎಂದು ಸಸ್ಸೂರ್ ಹೇಳುತ್ತಾರೆ. ಭಾಷಾ ವ್ಯವಸ್ಥೆಯೊಳಗೆ ವ್ಯತ್ಯಾಸಗಳನ್ನು ಆಧರಿಸಿ ಹುಟ್ಟುವ ಸಂಬಂಧಗಳಿಂದ ಅರ್ಥ ಮೂಡುತ್ತದೆಯೇ ಹೊರತು, ಭಾಷೆ ವ್ಯವಸ್ಥೆಯ ಆಚೆಗೆ ಅಥವಾ ಭಾಷಾ ವ್ಯವಸ್ಥೆಯ ಮುನ್ನ ಅರ್ಥವೆಂಬುದು ಇರುವುದಿಲ್ಲ. ಭಾಷೆಯ ಮೂಲ ನಿಯಮವನ್ನು ಸ್ತ್ರೀವಾದಿಗಳು ತಪ್ಪಾಗಿ ಗ್ರಹಿಸಿ, ಗಂಡು ಏನಲ್ಲವೋ ಅದು ಹೆಣ್ಣು ಎಂದು ಸಾಮಾಜಿಕ ತಾರತಮ್ಯದ ನೆಲೆಯನ್ನು ಭಾಷೆಗೆ ಆರೋಪಿಸಿ ತಮ್ಮ ವಾದವನ್ನು ಮಂಡಿಸುತ್ತಿದ್ದಾರೆ.

ಸ್ತ್ರೀವಾದಿಗಳು ಭಾಷೆಯಲ್ಲಿರುವ ಲಿಂಗತಾರತಮ್ಯದ ನೆಲೆಗಳನ್ನು ಎರಡು ರೀತಿಯಲ್ಲಿ ಗುರುತಿಸುತ್ತಾರೆ.

೧. ಪ್ರತ್ಯೇಕೀಕರಣ.

೨. ಮೌನ.

ಪುರುಷನ ಹಿಡಿತದಲ್ಲಿರುವ ಭಾಷೆಯನ್ನು ಮಹಿಳೆ ಬಳಸಬಹುದು. ಆದರೆ, ಇದರಿಂದ ಅವರ ಅನುಭವ ಮತ್ತು ಗ್ರಹಿಕೆಗಳು ಹುಸಿಯಾಗುತ್ತವೆ. ಏಕೆಂದರೆ, ಅದು ಗಂಡು ಲೋಕದೃಷ್ಟಿ. ಇದನ್ನು 'ಪ್ರತ್ಯೇಕೀಕರಣ' ಎನ್ನುತ್ತಾರೆ. ಮಹಿಳೆಯರಿಗೆ ತಮ್ಮ ಅನುಭವಗಳನ್ನು ಅಭಿವ್ಯಕ್ತಿಗೊಳಿಸಲು ಭಾಷಿಕ ಸಂಪನ್ಮೂಲಗಳ ಕೊರತೆ ಇದೆಯೆಂದು ಗೊತ್ತಾದಾಗ ಮೌನದ ಮೊರೆಹೋಗುತ್ತಾರೆ[೧೭] ಎಂಬ ನಿಲುವನ್ನು

ವ್ಯಕ್ತಪಡಿಸುತ್ತಾರೆ. ಈ ಮೌನ ಮತ್ತು ಪ್ರತ್ಯೇಕೀಕರಣದ ಪರಿಕಲ್ಪನೆಯ ಹಿನ್ನೆಲೆಯಲ್ಲಿ ತೀವ್ರವಾದಿ ಸ್ತ್ರೀವಾದಿಗಳು ಭಾಷೆಯನ್ನು ಒಟ್ಟು ನಾಲ್ಕು ರೀತಿಯಲ್ಲಿ ನಿರ್ವಚಿಸುತ್ತಾರೆ.

೧. ನಮ್ಮ ಚಿಂತನೆ ಮತ್ತು ಗ್ರಹಿಕೆಗಳನ್ನು ಹಾಗೂ ಆ ಮೂಲಕ ನಮ್ಮ ವಾಸ್ತವವನ್ನು ಭಾಷೆಯೇ ನಿರ್ಧರಿಸುತ್ತದೆ.

೨. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಎಲ್ಲ ಸಂಪನ್ಮೂಲಗಳನ್ನು ಹಿಡಿತದಲ್ಲಿಟ್ಟುಕೊಂಡಿರುವ ಗಂಡಸರೇ ಭಾಷೆಯನ್ನು ನಿಯಂತ್ರಿಸುತ್ತಾರೆ. ಆದ್ದರಿಂದ, ಭಾಷೆಯಲ್ಲಿ ಲೋಕವನ್ನು ಗಂಡುನೆಲೆಯಿಂದ ನೋಡುವ ಬಗೆ ಬೇರುಬಿಟ್ಟಿದೆ.

೩. ಭಾಷೆಯ ಬಳಕೆದಾರರಾಗಿ ಹೆಂಗಸರಿಗೆ ಇರುವ ಅವಕಾಶಗಳು ಕುಂಠಿತವಾಗಿವೆ.

೪. ಹೆಂಗಸರದೇ ಆದ ಹೊಸ ಭಾಷೆಯ ನಿರ್ಮಾಣದ ಅನಿವಾರ್ಯತೆ ಇದೆ.[೧೮]

"ಸ್ತ್ರೀಯರಿಗೆ ತಮ್ಮ ವಿಶಿಷ್ಟ ಅನುಭವಗಳನ್ನು ಹೇಳಿಕೊಳ್ಳಲು ಪುರುಷ ನಿರ್ಮಿತ ಭಾಷೆಯಲ್ಲಿ ಪದಗಳೇ ಇಲ್ಲ. ಭಾಷೆಯ ಒಳಗೆ ಮೈಗೂಡಿಕೊಂಡಿರುವ ಲಿಂಗತ್ವ ವ್ಯವಸ್ಥೆಯ ಮೌಲ್ಯಕಲ್ಪಿತ ಅರ್ಥಪರಂಪರೆಯನ್ನು ಮಹಿಳೆಯರು ಬಳಸುತ್ತಾ ಹೋದರೆ ಅವರ ಸ್ವಂತವೂ ಸ್ವತಂತ್ರವೂ ಆದ ಅನುಭವಗಳನ್ನು ಆ ಪದಗಳು ಹೇಳಲು ಸಾಧ್ಯವಾಗಲಾರವು. ಈ ಕಾರಣಕ್ಕಾಗಿಯೇ ತನ್ನದಾದ ಅನುಭವಗಳನ್ನು ಅವುಗಳ ಸಮಗ್ರ ವಿಶೇಷತೆಯೊಂದಿಗೆ ಭಾಷೆಯಲ್ಲಿ ಅಭಿವ್ಯಕ್ತಿಸಲಿಕ್ಕಾಗಿ ಮಹಿಳೆಯರು ಈಗಿರುವ ಪುರುಷ ಭಾಷೆಯ ಬದಲಾಗಿ ತಮ್ಮದೇ ಆದ ಭಾಷೆಯೊಂದನ್ನು ಸೃಷ್ಟಿಸಿಕೊಳ್ಳಬೇಕು"[೧೯] ಎಂಬುದಾಗಿ ಸ್ತ್ರೀವಾದಿಗಳ ಒಂದು ಮುಖ್ಯವಿಚಾರಧಾರೆ ಹೇಳುತ್ತದೆ.

ಮೇರಿ ಡೇಲಿ ಎಂಬ ಪಾಶ್ಚಾತ್ಯ ಸ್ತ್ರೀವಾದಿ "ಪುರುಷ ರೂಪಿತ ಭಾಷೆಯನ್ನೇ ಬಿಟ್ಟು, ಹೆಣ್ತನ ಮತ್ತು ಪ್ರಕೃತಿಯ ನಡುವಿನ ಸಂಬಂಧಕ್ಕೆ ಒತ್ತು ನೀಡಿ ಸ್ತ್ರೀ ವಿಶಿಷ್ಟ ಭಾಷೆಯೊಂದನ್ನು ಸೃಷ್ಟಿಸಬೇಕು. ಜಗತ್ತೆಲ್ಲಾ ತಮ್ಮದೇ ಸಾಮ್ರಾಜ್ಯವೆಂದು ಆಳುತ್ತಿರುವ ಪಿತೃಪ್ರಧಾನ ವ್ಯವಸ್ಥೆಯು ಇಲ್ಲಿನ ಪದಾರ್ಥಗಳ ಮೂಲ ಹೆಸರನ್ನು ಮುಸುಕು ಮಾಡಿ ಕೃತಕವಾಗಿ ತನ್ನ ಅಂಕಿತಗಳನ್ನು ನಾಮಕರಣ ಮಾಡಿದೆ. ಈ ವಸ್ತುಗಳನ್ನೆಲ್ಲಾ ಸ್ತ್ರೀದೃಷ್ಟಿಯಿಂದ ಮರುನಾಮಕರಣ ಮಾಡಬೇಕಾಗಿದೆ"[೨೦] ಎನ್ನುತ್ತಾರೆ.

ಈ ವಾದಗಳ ಪ್ರಕಾರ, ಸ್ತ್ರೀಯರಿಗೆ ಭಾಷೆಯೊಂದರ ಅವಶ್ಯಕತೆ ಇದೆ ಎಂದಾಯಿತು. ಹಾಗಾದರೆ, ಇಲ್ಲಿಯವರೆಗೂ ಹೆಣ್ಣಿನ ವಿಶಿಷ್ಟ ಅನುಭವಗಳು ಅಭಿವ್ಯಕ್ತಗೊಂಡಿರಲೇ ಇಲ್ಲವೇ? ಅಥವಾ ಆ ಅನುಭವಗಳನ್ನು ವ್ಯಕ್ತಪಡಿಸಲು ಅವರಿಗೆ ಅವಕಾಶಗಳಿರಲಿಲ್ಲವೇ? ಎಂಬ ಪ್ರಶ್ನೆಗಳು ಎದುರಾಗುತ್ತವೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಕೌಟುಂಬಿಕ ವಲಯದಲ್ಲಾಗಲಿ, ಸಾಮಾಜಿಕ ಪರಿಸರದಲ್ಲಾಗಲಿ ಹೆಣ್ಣಿನ ವಿಚಾರ, ಅಭಿಪ್ರಾಯಗಳಿಗೆ ಹಿಂದೆ ಎಂದೂ ಬೆಲೆ ಇರಲಿಲ್ಲ ಎಂಬುದು ಒಂದು ಅಂಶ. ಹೆಣ್ಣಿನ ಮಾತಿನ ಮಧ್ಯೆ ಗಂಡು ಪ್ರವೇಶಿಸಿ, ಅವಳ ಮಾತನ್ನು ತುಂಡರಿಸಿ ಸುಮ್ಮನಿರು, ಮಾತಾಡಬೇಡ, ನಿನಗೆ ಅರ್ಥವಾಗುವುದಿಲ್ಲ, ಏನೇನೋ ಮಾತಾಡಬೇಡ ಎಂದು ಹೇಳುವುದನ್ನು ಗಮನಿಸಬಹುದು. ಆಗ

ಹೆಣ್ಣಿನ ಮಾತು ಮೌನದೆಡೆಗೆ ಸಾಗುತ್ತದೆ. Invisibility of women's experience ಎಂಬ ವಿಚಾರಕ್ಕೆ ಇಲ್ಲಿನ ಸಾಮಾಜಿಕ ಕಟ್ಟಳೆಗಳು ಕಾರಣವೇ ವಿನಾ ಭಾಷೆಯಲ್ಲಿಯೇ ಹೆಣ್ಣಿನ ಅನುಭವಗಳ ಅಭಿವ್ಯಕ್ತಿಗೆ ಪದಗಳೇ ಇಲ್ಲ ಎಂಬ ವಾದ ತರ್ಕಬಾಹಿರವಾಗುತ್ತದೆ.

ಈಗಿರುವ ಭಾಷೆಯನ್ನು ಬುಡಮೇಲು ಮಾಡಿ ಏಕಾಏಕಿ ಹೊಸ ಭಾಷೆಯನ್ನು ಸೃಷ್ಟಿಸಲು ಸಾಧ್ಯವಾಗುತ್ತದೆಯೇ? ಸ್ಥಾಪಿತ ಭಾಷೆಯನ್ನು ಬುಡಮೇಲು ಮಾಡಿ ಅದೇ ಸ್ಥಳದಲ್ಲಿ ಮತ್ತೊಂದನ್ನು ತರುವುದರಿಂದ ಸ್ತ್ರೀವಾದವು ಯಾವುದನ್ನು ಪ್ರಶ್ನಿಸಲು ಹೊರಟಿದೆಯೋ ಅದೇ ಧೋರಣೆಯನ್ನು ಬಲಪಡಿಸಿದಂತಾಗುತ್ತದೆ. ಸಾಮಾಜಿಕ, ಸಾಂಸ್ಕೃತಿಕ ವಾಹಕವಾಗಿ ಭಾಷೆ ನಿರ್ವಹಿಸುತ್ತಿರುವ ಪಾತ್ರವನ್ನು ಹಾಗೂ ಲಿಂಗ ಮತ್ತು ಭಾಷೆಯ ಸಂಬಂಧದ ಸ್ವರೂಪವನ್ನು ಸ್ತ್ರೀವಾದಿಗಳು ಸರಿಯಾಗಿ ಅರ್ಥೈಸಿಕೊಳ್ಳಬೇಕಾಗುತ್ತದೆ.

ಸ್ತ್ರೀವಾದಿಗಳ ಭಾಷಿಕ ಚಿಂತನೆಗಳು ಕೆಲವು ವೇಳೆ ಅತಿರೇಕಕ್ಕೆ ಬಂದು ನಿಲ್ಲುತ್ತವೆ. ಉದಾ: ಡೇಲಿ ಮತ್ತು ರಿಚ್‌ರವರ ಹೇಳಿಕೆಯನ್ನು ಪರಿಶೀಲಿಸಬಹುದು: "ನಾವೀಗ ಪ್ರತ್ಯೇಕಗೊಂಡಿರುವುದಕ್ಕೆ ಭಾಷೆಯೇ ಮೂಲಕಾರಣ. ಅದನ್ನು ಕುರಿತು ನಾವು ಗಮನಹರಿಸದಿದ್ದರೆ ಪರಿವರ್ತನೆಗಾಗಿ ನಾವು ನಡೆಸುವ ಎಲ್ಲಾ ಪ್ರಯತ್ನಗಳು ವಿಫಲವಾಗುತ್ತವೆ. ಅಲ್ಲದೆ, ಒಮ್ಮೆ ಗಮನ ಹರಿಸಿದೆವೆಂದರೆ ಅದೇ ನಮ್ಮ ಪರಿವರ್ತನೆಗೆ ಬೇಕಾದ ಸಾಮಾಗ್ರಿಯನ್ನು ನೀಡಬಲ್ಲದು. ಭಾಷೆ ನಮ್ಮನ್ನೂ 'ಒಡೆಯುತ್ತದೆ' ಅದನ್ನು ನಾವು ಮರುಗಳಿಸಿದರೆ ಅದು ನಮ್ಮನ್ನು ಮರಳಿ ಕಟ್ಟಬಲ್ಲುದು"[೧೧] ಎನ್ನುತ್ತಾರೆ.

ಇಲ್ಲಿ ಭಾಷೆಯ ಮುಖಾಂತರ ಸಮಾಜದಲ್ಲಿರುವ ಅಸಮಾನತೆಯನ್ನು ಸರಿಪಡಿಸುವ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಇಲ್ಲಿ ಎರಡು ಪ್ರಶ್ನೆಗಳು ಎರುರಾಗುತ್ತವೆ.

೧. ಭಾಷೆಯ ಮುಖಾಂತರ ಸಮಾಜದ ಬದಲಾವಣೆ ಸಾಧ್ಯವೇ?

೨. ಸಮಾಜದಲ್ಲಿನ ಬದಲಾವಣೆಯ ಮುಖಾಂತರ ಭಾಷೆಯ ಬದಲಾವಣೆ ಸಾಧ್ಯವೇ?

ಮೊದಲನೆಯ ಪ್ರಶ್ನೆಯನ್ನು ಪರಿಗಣಿಸಿದರೆ, ಭಾಷೆಯ ಮುಖಾಂತರ ಸಮಾಜದ ಬದಲಾವಣೆ ಸಾಧ್ಯವಿಲ್ಲ. ಸಾಮಾಜಿಕ, ಸಾಂಸ್ಕೃತಿಕ ನೆಲೆಯ ಅಸಮಾನತೆ ಸಂವಹನ ಆಕರಗಳಲ್ಲಿ ವ್ಯಕ್ತಗೊಳ್ಳುತ್ತಿರುತ್ತದೆಯೇ ಹೊರತು, ಸಂವಹನ ಆಕರಗಳೇ ಅಸಮಾನತೆಯ ಮೂಲನೆಲೆಗಳಾಗಿರುವುದಿಲ್ಲ. ಎರಡನೆಯ ಪ್ರಶ್ನೆಯನ್ನು ಪರಿಗಣಿಸುವುದಾದರೆ, ಸಮಾಜದ ಬದಲಾವಣೆಯ ಮುಖಾಂತರ ಭಾಷೆ ಬದಲಾವಣೆ ಸಾಧ್ಯ ಎನ್ನುವುದಾದರೆ, ಭಾಷೆಯಲ್ಲಿ ಬದಲಾಗಬೇಕಾದ ಅಂಶಗಳು ಇವೆ ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಈ ಅಂಶ ಆಯಾ ಸಮಾಜ, ಸಂಸ್ಕೃತಿಗಳಲ್ಲಿ ವ್ಯಕ್ತಿಗಳ ಪಾತ್ರ ಬದಲಾಗುವಿಕೆ, ವಿವಿಧ ಕಾರ್ಯಚಟುಟಿಕೆಗಳಲ್ಲಿ ಪಾಲ್ಗೊಳ್ಳುವಿಕೆಯಲ್ಲಿನ ಬದಲಾವಣೆಗಳನ್ನು ಅವಲಂಬಿಸಿರುತ್ತದೆ.

ಗಂಡು-ಹೆಣ್ಣು, ಪ್ರಧಾನ-ಅಧೀನ, ಶ್ರೇಷ್ಠ-ಕನಿಷ್ಠ ಎಂಬ ನಾಮಪಟ್ಟಿಗಳ ಮುಖಾಂತರ ಭಾಷೆ ಸೃಷ್ಟಿಯಾಗಿರುವುದಿಲ್ಲ. ಅಥವಾ ಮೂಲದಲ್ಲಿ ಈ ರೀತಿಯ ಭೇದಭಾವವಿಲ್ಲದೆ, ಸಮಾನ ನೆಲೆಯಲ್ಲಿ

ಸೃಷ್ಟಿಯಾದ ಭಾಷೆ ನಂತರದ ದಿನಗಳಲ್ಲಿ ಪುರುಷಮೂಲೀಯ ಸ್ಥಾನ ಪಡೆದಿದೆಯೇ? ಬಹಳ ಮುಖ್ಯವಾಗಿ ಗಮನಿಸಬೇಕಾದ ವಿಚಾರವೆಂದರೆ, ಭಾಷೆಯಲ್ಲಿ ಎರಡು ವಿಧಗಳಿವೆಯೇ? ಅಥವಾ ಎರಡು ದೃಷ್ಟಿಕೋನಗಳಿವೆಯೇ? ಈ ದೃಷ್ಟಿಕೋನಗಳಲ್ಲಿ ಪ್ರಧಾನ–ಅಧೀನ ಎಂಬ ವಿಂಗಡಣೆ ಪ್ರಾರಂಭವಾಗಿ ಪ್ರಧಾನವಾದುದನ್ನು ಗಂಡು ಭಾಷಿಕ ಗುಣವೆಂತಲೂ, ಅಧೀನವಾದದ್ದನ್ನು ಹೆಣ್ಣು ಭಾಷಿಕ ಗುಣವೆಂತಲೂ ವಿಂಗಡಿಸಿ, ಭಾಷೆಯನ್ನು 'ಗಂಡು ಭಾಷೆ' ಮತ್ತು 'ಹೆಣ್ಣು ಭಾಷೆ' ಎಂದು ವಿಂಗಡಿಸಲಾಗುತ್ತಿದೆ.

ಆದರೆ, ಈ ವಿಂಗಡಣೆ ಅಷ್ಟು ಸಮಂಜಸವಲ್ಲ ಎನಿಸುತ್ತದೆ. ಪ್ರಧಾನ, ಅಧೀನತೆಯ ಅಸ್ತಿತ್ವವನ್ನೇ ಆಧುನಿಕ ಚಿಂತನಾ ಕ್ರಮಗಳು ಪ್ರಶ್ನಿಸುತ್ತಿವೆ. ಹೆಣ್ಣಿನ ಭಾಷೆ, ಗಂಡಿನ ಭಾಷೆ ಎಂದು ಎರಡು ಧ್ರುವಗಳಲ್ಲಿ ಮಾನವರ ದೃಷ್ಟಿಕೋನ, ಸ್ವಭಾವಗಳನ್ನು ಒಡೆದಿಡುವುದು ಅಸಮರ್ಪಕ ವಿಂಗಡಣೆಯಾಗುತ್ತದೆ. ಭಾಷೆಯಲ್ಲಿ ಮೂಲತಃ ತಾರತಮ್ಯವಿರುವುದಿಲ್ಲ. ಸಾಮಾಜಿಕ ಸಂದರ್ಭದಲ್ಲಿರುವ ತಾರತಮ್ಯ ಭಾಷಿಕ ಸಂದರ್ಭದಲ್ಲೂ ಪ್ರತಿಬಿಂಬಿತವಾಗುತ್ತಿರುತ್ತದೆ.

ರೋಲಾನ್ ಬಾರ್ತ್‌ರವರು "ಲಿಂಗ ಪ್ರಭೇದವು ಪಿತೃಪ್ರಧಾನ ತಾತ್ವಿಕತೆಗೆ ಅರ್ಥ ನೀಡುವ ಒಂದು ಮಿಥ್. ಈ ಮಿಥ್ ಭಾಷೆಯದೆ ಒಂದು ವಿಧಾನವಾಗಿದ್ದು ಅದು ಚಾರಿತ್ರಿಕ ಸಂದರ್ಭವೊಂದರಿಂದ ಅದರ ಅರ್ಥವನ್ನು ಬೇರೆ ಮಾಡಿ ಆ ಅರ್ಥವೇ ಶಾಶ್ವತವೋ ಎಂಬಂತೆ ತೋರಿಸುತ್ತಿರುತ್ತದೆ. ಮರುಗಳಿಕೆಯ ಮೂಲಕ ಈ ಮಿಥ್ ಗಟ್ಟಿಯಾಗುತ್ತಾ ಹೋಗುವುದರಿಂದ ಜನರಿಗೆ ಅದು ಚರಿತ್ರೆ ರಾಜಕೀಯಗಳಿಗೆ ಅತೀತವಾದ ತನ್ನಿಂದ ತಾನೇ ಉದ್ಭವಿಸಿದ ಸತ್ಯವೆಂಬಂತೆ ತೋರುತ್ತದೆ"[೨೨] ಎಂದು ಅಭಿಪ್ರಾಯ ಪಡುತ್ತಾರೆ. ಬಾರ್ತ್‌ರವರ ವಿಚಾರ ಮುಖ್ಯವಾದದ್ದು. ಏಕೆಂದರೆ, ಭಾಷೆಯಲ್ಲಿನ ತರತಮ ಭಾವದ ಕಲ್ಪನೆ ಸಮಾಜದ ಸಂರಚನಾ ನಿಯಮಗಳೇ ವಿನಃ ಮೂಲತಃ ಭಾಷೆಯೇ ಅದಕ್ಕೆ ಕಾರಣವಲ್ಲ. ಸಾಮಾಜಿಕ ಚಿಂತನಾಕ್ರಮಗಳು ಈ ರೀತಿಯ ವಿಂಗಡಣಾ ಕ್ರಮಕ್ಕೆ ಕಾರಣವಾಗಿವೆ.

ಭಾಷೆಯನ್ನು ಪುರುಷ ಭಾಷೆ ಮತ್ತು ಸ್ತ್ರೀಭಾಷೆ ಎಂದು ವಿಂಗಡಿಸುವಲ್ಲಿ ಪುರುಷರಲ್ಲೇ ಇರುವ ಬಹುತ್ವಕ್ಕೆ, ಸ್ತ್ರೀಯರಲ್ಲೇ ಇರುವ ಬಹುತ್ವಕ್ಕೆ ಮನ್ನಣೆ ದೊರೆತಿಲ್ಲ. ಇಡೀ ಜಗತ್ತಿಗೆ ಅನ್ವಯವಾಗುವ ಒಂದೇ ರೀತಿಯ ಲಿಂಗತತ್ವ ಇಲ್ಲ. ನಮ್ಮ ತಿಳಿವಳಿಕೆಯ ಪ್ರಕಾರ ಗಂಡು ಮತ್ತು ಹೆಣ್ಣು ಎಂದರೆ ಏನರ್ಥ? ಒಂದು ನಿರ್ದಿಷ್ಟ ಗುಂಪಿನಲ್ಲಿ, ಒಂದು ಸಮುದಾಯದಲ್ಲಿ, ಒಂದು ಸಮಾಜದಲ್ಲಿ ಮತ್ತು ಜಗತ್ತಿನಲ್ಲಿ? ಅದು ಸಮುದಾಯದಿಂದ ಸಮುದಾಯಕ್ಕೆ, ವರ್ಗದಿಂದ ವರ್ಗಕ್ಕೆ, ಜನಾಂಗದಿಂದ ಜನಾಂಗಕ್ಕೆ, ಸನ್ನಿವೇಶದಿಂದ ಸನ್ನಿವೇಶಕ್ಕೆ ಭಿನ್ನವಾಗುತ್ತದೆ.

ಪೆನಲಪೆ ಎಕರ್ಟ್‌ರವರ ಪ್ರಕಾರ: "Language enters into the social practices that gender people and their activities and ideas in many different ways, developing and using category lables like woman and man being only a small part of the story. To understand precisely how language interacts with gender requires that we look locally, closely observing linguistic and gender practices in the context of particular communities social practices."[೨೩] ಸಾಮಾಜಿಕ ಸಂರಚನೆಯ ಕ್ರಮಗಳಿಗೆ ಅನುಗುಣವಾಗಿ ಸಾಮಾಜಿಕ ಚಟುವಟಿಕೆಗಳು ಮತ್ತು ಆಲೋಚನೆಗಳು

ಭಿನ್ನವಾಗಿರುತ್ತವೆ. ಇವುಗಳು ಸಮಾಜದ ವಿವಿಧ ವರ್ಗಗಳ ನಾಮಪಟ್ಟಿಗಳಾಗಿ ಪರಿಣಮಿಸುತ್ತವೆ. ಇವುಗಳಲ್ಲಿ ಗಂಡು ಮತ್ತು ಹೆಣ್ಣು ಸಣ್ಣ ಭಾಗವಷ್ಟೇ, ಇವುಗಳನ್ನು ಕೆಲವು ನಿರ್ದಿಷ್ಟ ಸಮುದಾಯಗಳಲ್ಲಿ, ನಿರ್ದಿಷ್ಟ ಸನ್ನಿವೇಶಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಬೇಕು ಎನ್ನುತ್ತಾರೆ.

ಡೊಬೊರಾ ಟೆನನ್‌ರವರು ಸಮುದಾಯದಲ್ಲಿನ ಭಾಷಿಕ ವ್ಯತ್ಯಾಸಗಳನ್ನು ಗುರುತಿಸುವಲ್ಲಿ ಮುಖ್ಯವಾಗಿ ಎರಡು ರೀತಿಯ ವ್ಯತ್ಯಾಸ ಕ್ರಮಗಳನ್ನು ಮೊದಲು ತಿಳಿಯಬೇಕು ಎನ್ನುತ್ತಾರೆ. ಅವುಗಳೆಂದರೆ:

೧. ಸಾಮಾನ್ಯ ವ್ಯತ್ಯಾಸಗಳು (General differences)

೨. ಲಿಂಗ ವ್ಯತ್ಯಾಸಗಳು[೨೪] (Gender differences)

ಸಮುದಾಯದ ಪ್ರತಿಯೊಬ್ಬರಿಗೂ ಅನ್ವಯವಾಗುವ ಸಾಮಾನ್ಯ ವ್ಯತ್ಯಾಸಗಳು ಇರುತ್ತವೆ. ಉದಾ: ಹಿರಿಯರಿಗೆ ಗೌರವ ಸೂಚಕಗಳನ್ನು ಬಳಸುವುದು ಹಾಗೂ ಅವುಗಳಲ್ಲಿ ನಿರ್ದಿಷ್ಟವಾಗಿ ಲಿಂಗಕ್ಕೆ ಸಂಬಂಧಿಸಿದ ವ್ಯತ್ಯಾಸಗಳು. ಉದಾ: ಗಂಡನಿಗೆ ಗೌರವ ಸೂಚಕಗಳನ್ನು ಬಳಸುವುದು. ಹೀಗೆ ವ್ಯತ್ಯಾಸಗಳನ್ನು ಎರಡು ನೆಲೆಯಲ್ಲಿ ಗುರುತಿಸಬಹುದು. ಮೂಲಭೂತ ಸಮಸ್ಯೆ ಇರುವುದು ನಾವು ಅಧ್ಯಯನಕ್ಕೆ ಹುಡುಕಿ, ಆಯ್ಕೆ ಮಾಡುತ್ತಿರುವ ಭಾಷಿಕ ದತ್ತಾಂಶಗಳಲ್ಲಿ. ಕೆಲವು ಭಾಷಿಕಾಂಶಗಳು ಎಲ್ಲ ಸಮುದಾಯದ, ಎಲ್ಲ ಹೆಣ್ಣುಗಳನ್ನು ಪ್ರತಿನಿಧಿಸುವುದಿಲ್ಲ. ನಮ್ಮ ವಿಚಾರಗಳ ಪ್ರತಿಪಾದನೆಗೆ ಪೂರಕ ಸಂಬಂಧ ಹೊಂದಿದವುಗಳನ್ನು ಮಾತ್ರ ಆಯ್ಕೆ ಮಾಡಿಕೊಂಡು ಚರ್ಚಿಸಲಾಗುತ್ತಿದೆ. ಸಮಾಜವು ಲಿಂಗತ್ವವನ್ನು ಕಟ್ಟುವುದರ ಜೊತೆಗೆ ಬೇರೆ ರೀತಿಯ ಐಡೆಂಟಿಟಿಗಳನ್ನು ಸಹ ರಚಿಸುತ್ತಿರುತ್ತದೆ. ಉದಾ: ಜೀವನ ಶೈಲಿ, ಜನಾಂಗೀಯ, ಸಾಮಾಜಿಕ ವರ್ಗ, ಮುಂತಾದವುಗಳು. ಅದೇ ರೀತಿ ಲಿಂಗ ಎಂಬುದು ಐಡೆಂಟಿಟಿಯ ಒಂದು ಭಾಗ, ಪ್ರತ್ಯೇಕಿಸುವಿಕೆ ಅಲ್ಲ.

**೨.೬. ಸ್ತ್ರೀವಾದ ಮತ್ತು ಸಿದ್ಧಾಂತಗಳು**

ಸ್ತ್ರೀವಾದಿಗಳು ತಮ್ಮ ಭಾಷಿಕ ನಿಲುವುಗಳ ಸಮರ್ಥನೆಗೆ ಕೆಲವು ಸಿದ್ಧಾಂತಗಳನ್ನು ಹಾಗೂ ಭಾಷಾಶಾಸ್ತ್ರಜ್ಞರ, ಮನಃಶಾಸ್ತ್ರಜ್ಞರ ವಿಚಾರಗಳನ್ನು ಪೂರಕವಾಗಿ ಬಳಸಿಕೊಂಡಿದ್ದಾರೆ. ಒಂದು ವಿಷಯದ ಮಂಡನೆಗೆ ಇತರ ಜ್ಞಾನಶಿಸ್ತುಗಳ ಸಿದ್ಧಾಂತಗಳನ್ನು ಬಳಸಿಕೊಳ್ಳುವಾಗ ಅಲ್ಲಿ ಉಂಟಾಗುವ ಮಿತಿಗಳು ಮತ್ತು ತೊಡಕುಗಳನ್ನು ಕುರಿತು ಚರ್ಚಿಸುವ ಅಗತ್ಯವಿರುತ್ತದೆ. ಈ ಹಿನ್ನೆಲೆಯಲ್ಲಿ ಈ ಕೆಳಕಂಡ ಸಿದ್ಧಾಂತಗಳನ್ನು ಮತ್ತು ಸ್ತ್ರೀವಾದಿಗಳ ನಿಲುವುಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಅವುಗಳೆಂದರೆ:

೧. ಮಾರ್ಕ್ಸ್‌ವಾದ.

೨. ಸಫೀರ್ ಮತ್ತು ವೂರ್ಫ್ ಪ್ರಮೇಯ.

೩. ಸಸ್ಸೂರ್‌ನ ಭಾಷಿಕ ವಿಚಾರಗಳು.

೪. ಡೆರಿಡಾನ ನಿರಚನವಾದ.

೫. ಫ್ರಾಯ್ಡ್ ಮತ್ತು ಲಕಾನ್‌ನ ಮನಃಶಾಸ್ತ್ರೀಯ ವಿಚಾರಗಳು.

೬. ಜೂಲಿಯಾ ಕ್ರಿಸ್ತೇವಾಳ ಭಾಷಿಕ ವಿಚಾರಗಳು.

### ೨.೬.೧. ಮಾರ್ಕ್ಸ್‌ವಾದ ಮತ್ತು ಸ್ತ್ರೀವಾದ

ಮಾರ್ಕ್ಸ್‌ವಾದವು ಸಮಾಜವನ್ನು ಪರಸ್ಪರ ಶತೃತ್ವವುಳ್ಳ ಎರಡು ವರ್ಗಗಳ ರಚನೆ ಎಂದು ಗ್ರಹಿಸುತ್ತದೆ. ಒಂದು ಅಧಿಕಾರವರ್ಗ ಮತ್ತೊಂದು ದುಡಿಯುವ ವರ್ಗ. ಅಂದರೆ ವರ್ಗಶತೃತ್ವವನ್ನು ಒಪ್ಪಿಕೊಳ್ಳುವ ಸಾಮಾಜಿಕ ರಚನೆಯ ವ್ಯಾಪ್ತಿಯೊಳಗೆ ಈ ಚರ್ಚೆಗಳು ನಡೆದು ಬಂದಿವೆ. ಮಾರ್ಕ್ಸ್‌ವಾದದ ಮೂಲ ತಿರುಳಿರುವುದು ಆರ್ಥಿಕ ಶೋಷಣೆಯಲ್ಲಿ. ಈ ಆರ್ಥಿಕ ಶೋಷಣೆಯೇ ಸಾಮಾಜಿಕ ಶೋಷಣೆಗೆ ದಾರಿ ಮಾಡಿತು ಎಂಬುದು ಮಾರ್ಕ್ಸ್ ಚಿಂತನೆ. ಮಾರ್ಕ್ಸ್‌ವಾದದ ಮೂಲ ತಿರುಳನ್ನು ಎರಡು ನೆಲೆಗಳಲ್ಲಿ ಪರಿಗಣಿಸಬಹುದು.

೧. ಆಳುವ ವರ್ಗಕ್ಕೆ ವಾಸ್ತವವನ್ನು ವ್ಯಾಖ್ಯಾನಿಸುವ ಅಧಿಕಾರವಿರುತ್ತದೆ.

೨. ಈ ವಾಸ್ತವವು ಸಹಜ ಮತ್ತು ಸರ್ವಸಮ್ಮತಿಯುಳ್ಳದ್ದು ಎಂದು ನಂಬಿಸಬಲ್ಲದು. ಹೀಗೆ ನಂಬಿಸುವಾಗ ಅದಕ್ಕೆ ವಿರುದ್ಧವಾದ ಹಲವು ವಾಸ್ತವಗಳಿದ್ದರೂ ಆ ವಾಸ್ತವಗಳ ಮಂಡನೆಗೆ ಅಧಿಕೃತತೆ ದೊರಕದಂತೆ ಮಾಡಬಲ್ಲದು.[೨೫]

ಈ ಹಿನ್ನೆಲೆಯಲ್ಲಿ ಸ್ತ್ರೀವಾದಿಗಳ ಚಿಂತನೆಯನ್ನು ಪರಿಶೀಲಿಸುವುದಾದರೆ, ಮಾರ್ಕ್ಸ್‌ವಾದವನ್ನು ಬಲವಾಗಿ ನಂಬಿ, ತಮ್ಮ ವಾದವನ್ನು ಮಂಡಿಸಿದವರಲ್ಲಿ ಡೇಲ್ ಸ್ಪೆಂಡರ್ ಪ್ರಮುಖರು. ಇವರ ಚಿಂತನೆಯಲ್ಲಿ ಅಂಥ ಅಧಿಕಾರ ಗಂಡಸರಿಗಿದೆ. ಹಾಗಾಗಿ ಭಾಷೆಯ ನಿಯಮಗಳು ಗಂಡಸರ ಅರ್ಥಗಳನ್ನೇ ಬಿಂಬಿಸುತ್ತವೆ ಹಾಗೂ ಪುರುಷರು ಭಾಷೆಯ ಮುಖಾಂತರ ವಾಸ್ತವವನ್ನು ಕಟ್ಟುತ್ತಾರೆ ಹಾಗೂ ನಿಯಂತ್ರಿಸುತ್ತಾರೆ[೨೬] ಎಂಬ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಇಲ್ಲಿ ವರ್ಗವಿಭಜನೆಯ ಜಾಗದಲ್ಲಿ ಲಿಂಗವಿಭಜನೆಯನ್ನು ನೆಲೆಗೊಳಿಸಲಾಗಿದೆ.

ಗಂಡು, ಹೆಣ್ಣುಗಳನ್ನು ಆಳುವ ವರ್ಗ ಮತ್ತು ಅಧೀನ ವರ್ಗಗಳ ವ್ಯಾಪ್ತಿಯಲ್ಲಿ ತರುವುದು ಎಷ್ಟು ಸಮಂಜಸ ಎಂಬ ಪ್ರಶ್ನೆ ಎದುರಾಗುತ್ತದೆ. ವರ್ಗದ ಕಲ್ಪನೆಗೂ ಲಿಂಗದ ಕಲ್ಪನೆಗೂ ಅಗಾಧ ವ್ಯತ್ಯಾಸವಿದೆ. ಆಳುವ ವರ್ಗದಲ್ಲೂ ಹೆಣ್ಣಿನ ಅಸ್ತಿತ್ವವಿದೆ. ಹಾಗೆಯೇ ಅಧೀನ ವರ್ಗದಲ್ಲೂ ಹೆಣ್ಣಿನ ಅಸ್ತಿತ್ವವಿದೆ. ಇಲ್ಲಿ ಹೆಣ್ಣು ಎರಡು ವರ್ಗಗಳಲ್ಲೂ ವಿಭಜಿತಗೊಂಡಿದ್ದಾಳೆ. ಈ ಹಿಂದೆ ಚರ್ಚಿಸಿದಂತೆ ಯಜಮಾನಿಕೆ ಮತ್ತು ಅಧೀನತೆಗಳ ಸಂಬಂಧ ಯಾವಾಗಲೂ ಒಂದೇ ರೀತಿ ಇರುವುದಿಲ್ಲ. ಹೆಣ್ಣು ಗಂಡಿಗೆ ಅಧೀನವಾಗಿದ್ದರೂ ಆಕೆ ಜಾತಿವಾದಿಯಾಗಿರಬಹುದು. ಆ ಜಾತಿವಾದ ಪುನಃ ಯಜಮಾನಿಕೆ ಮತ್ತು ಅಧೀನತೆ ಪರಿಕಲ್ಪನೆಯನ್ನು ಮುಂದುವರಿಸುತ್ತದೆ. ಹೀಗೆ ವರ್ಗ ಮತ್ತು ಲಿಂಗ ಸಂಬಂಧವನ್ನು ಒಂದೇ ಚೌಕಟ್ಟಿನೊಳಗೆ ಸೇರಿಸಿ ಚರ್ಚಿಸುವುದು ಇದರ ಮಿತಿಯನ್ನು ತೋರಿಸುತ್ತದೆ.

### ೨.೬.೨. ಸಫೀರ್ ಮತ್ತು ವೂರ್ಫ್ ಪ್ರಮೇಯ ಮತ್ತು ಸ್ತ್ರೀವಾದ

ಸಫೀರ್ ಮತ್ತು ವೂರ್ಫ್ ಮಾನವಶಾಸ್ತ್ರಜ್ಞರು. ಇವರು ಅಮೆರಿಕದ ಮೂಲನಿವಾಸಿಗಳ ಸಂಸ್ಕೃತಿಯನ್ನು ವ್ಯಾಪಕವಾಗಿ ಅಧ್ಯಯನ ಮಾಡಿದ್ದಾರೆ. "ಒಂದೇ ಸಂಗತಿಯನ್ನು ಭಿನ್ನ ಸಂಸ್ಕೃತಿಗಳು, ಭಿನ್ನವಾಗಿ

ಗ್ರಹಿಸುವುದನ್ನು ಗುರುತಿಸಿದ್ದಾರೆ. ಉದಾ: ಕಾಲ ಮತ್ತು ದೇಶಗಳು, ವರ್ಣಪಟಲ, ಚೇತನ ಮತ್ತು ಅಚೇತನ ವಸ್ತುಗಳ ವಿಭಜನೆ, ಇಲ್ಲವೇ ವಸ್ತುಗಳ ಮತ್ತು ಘಟನೆಗಳನ್ನು ವಿಭಜಿಸುವ ಕ್ರಮ ಇವೆಲ್ಲವನ್ನು ಸಂಸ್ಕೃತಿಗಳು ಬೇರೆ ಬೇರೆ ರೀತಿಯಲ್ಲಿ ಗ್ರಹಿಸುತ್ತವೆ ಎಂಬುದನ್ನು ಗುರುತಿಸಿದರು. ಈ ಗಮನಾರ್ಹವಾದ ಗ್ರಹಿಕೆಯ ಭಿನ್ನತೆಗಳಿಗೆ ಭಾಷೆಯೇ ಮೂಲಕಾರಣ"[೨೭] ಎಂದು ವಾದಿಸಿದರು.

"ಒಂದೇ ಸಾಮಾಜಿಕ ವಾಸ್ತವವನ್ನು ಎರಡು ಭಾಷೆಗಳು ಒಂದೇ ರೀತಿಯಲ್ಲಿ ಪ್ರತಿನಿಧಿಸಲಾರವು"[೨೮] ಎಂದು ಸಫೀರ್ ಹೇಳುತ್ತಾರೆ. ಸಫೀರ್ ಮತ್ತು ವೂರ್ಫ್ ವಿಚಾರಗಳನ್ನು ತನ್ನ ವಾದ ಸಮರ್ಥನೆಗೆ ಬಳಸಿಕೊಂಡವರು ಡೇಲ್ ಸ್ಪೆಂಡರ್. ಇವರ ಪ್ರಕಾರ ಭಾಷಿಕ ಗ್ರಹಿಕೆಯ ಹಿನ್ನೆಲೆಯಾಗಿ ಲೈಂಗಿಕತಾವಾದ ಕಾರ್ಯ ನಿರ್ವಹಿಸುತ್ತದೆ ಎನ್ನುತ್ತಾರೆ.

ಸಫೀರ್ ಮತ್ತು ವೂರ್ಫ್ ಪ್ರಮೇಯವನ್ನು ಅಳವಡಿಸಿಕೊಳ್ಳುವಲ್ಲಿಯೇ ಒಂದು ಸಮಸ್ಯೆ ಇದೆ. ಸಫೀರ್ ಮತ್ತು ವೂರ್ಫ್ ಪ್ರಮೇಯ ಎರಡು ಭಿನ್ನ ಭಾಷಿಕ ಸಮುದಾಯಗಳಲ್ಲಿನ ಭಿನ್ನ ಗ್ರಹಿಕೆಗಳನ್ನು ಕುರಿತಾಗಿದೆ. ಆದರೆ, ಇದನ್ನು ಸ್ತ್ರೀವಾದಿಗಳು ಒಂದೇ ಭಾಷಿಕ ಸಮುದಾಯದಲ್ಲಿನ ಗಂಡು ಮತ್ತು ಹೆಣ್ಣಿನ ಗ್ರಹಿಕೆಗಳಿಗೆ ಅನ್ವಯಿಸಿ, ಅವರ ಗ್ರಹಿಕೆಗಳು ಭಿನ್ನವಾಗಿರುತ್ತವೆ ಹಾಗೂ ಈ ಭಿನ್ನ ಗ್ರಹಿಕೆ ಭಾಷೆಯಿಂದ ಮಾತ್ರ ಸಾಧ್ಯ ಎನ್ನುತ್ತಾರೆ. ಭಿನ್ನ ಭಾಷಿಕ ವಲಯಗಳಲ್ಲಿನ ಭಿನ್ನತೆಗೂ, ಒಂದೇ ಭಾಷಿಕ ವಲಯದಲ್ಲಿನ ಗಂಡು–ಹೆಣ್ಣಿನ ಗ್ರಹಿಕೆಗೂ ನಂಟನ್ನು ಕಲ್ಪಿಸುತ್ತಾರೆ.

**೨.೬.೩. ಸಸ್ಸೂರ್‌ನ ಭಾಷಿಕ ವಿಚಾರಗಳು ಮತ್ತು ಸ್ತ್ರೀವಾದ**

ಸ್ತ್ರೀವಾದಿಗಳ ದ್ವಿಮಾನ ಕಲ್ಪನೆಯೂ ಸಸ್ಸೂರ್‌ನ ಭಾಷಿಕ ಸಿದ್ಧಾಂತವನ್ನು ಬಳಸಿಕೊಂಡಿದೆ. ಸಸ್ಸೂರ್‌ನ ಭಾಷಿಕ ವಿವೇಚನೆಗೂ, ಸ್ತ್ರೀವಾದಿಗಳ ದ್ವಿಮಾನ ಕಲ್ಪನೆಗೂ ಸಂಬಂಧವೇನು? ಎನ್ನುವುದನ್ನು ಪರಿಶೀಲಿಸಬಹುದು. ಮೊದಲು ಸಸ್ಸೂರ್ ಪ್ರತಿಪಾದಿಸಿದ ಭಾಷಿಕ ನಿಲುವುಗಳನ್ನು ಸ್ಪಷ್ಟಪಡಿಸಿಕೊಂಡು, ನಂತರ ಸ್ತ್ರೀವಾದಿಗಳ ನಿಲುವುಗಳನ್ನು ಪರಿಶೀಲಿಸುವುದು ಸೂಕ್ತವೆನಿಸುತ್ತದೆ.

ಭಾಷೆಯ ರಚನೆಯಲ್ಲಿ ವೈರುಧ್ಯ ತತ್ವಕ್ಕೆ ಸಸ್ಸೂರ್ ಮಹತ್ವ ನೀಡಿದ್ದಾರೆ. ಸಸ್ಸೂರ್ ಭಾಷೆಯು ಒಂದು ಸಂಜ್ಞೆ (Sign) ಎಂಬುದಾಗಿ ವ್ಯಾಖ್ಯಾನಿಸುತ್ತಾರೆ. ಉದಾ: ಸಂಚಾರಿ ಲೈಟುಗಳು, ಸಂಚಾರಿ ಸೂಚನೆಗಳು ಇವುಗಳೇ ಸಂಜ್ಞೆಗಳಾಗುತ್ತವೆ. ಅಂದರೆ, ಯಾವುದು ತನ್ನನ್ನು ಮರೆಮಾಡಿ ಬೇರೆಯದರ ಬಗೆಗೆ ತಿಳಿಸುತ್ತದೆಯೋ ಅದುವೇ ಸಂಜ್ಞೆ. ಭಾಷೆ ಅಥವಾ ಆ ಭಾಷೆಯಲ್ಲಿರುವ ಪದಗಳು ಸಹ ಅವುಗಳನ್ನು ನಾವು ಬರೆದಾಗ ಅಥವಾ ಉಚ್ಚಾರಿಸಿದಾಗ ಅವು ಕೇವಲ ಶಬ್ದಗಳಾಗಿರುವುದಿಲ್ಲ. ಬದಲಾಗಿ ಅವು ಅವುಗಳನ್ನು ಹೊರತುಪಡಿಸಿದ ವಿಚಾರವನ್ನು ನಮ್ಮ ಮನಸ್ಸಿಗೆ ಹೊಳೆಯಿಸುತ್ತವೆ. ಆದುದರಿಂದ ಪದಗಳು ಕೂಡ ಸಂಜ್ಞೆಗಳೇ ಆಗಿವೆ. ಅವುಗಳನ್ನು ಸಸ್ಸೂರ್ ಭಾಷಿಕ ಸಂಜ್ಞೆ ಎಂದು ಕರೆಯುತ್ತಾನೆ.

ಸಂಜ್ಞೆಯಲ್ಲಿ ಸೂಚಕ ಮತ್ತು ಸೂಚಿತಗಳು ಎಂಬ ಎರಡು ಭಾಗಗಳಿವೆ. ಸೂಚಕ ಮತ್ತು ಸೂಚನೆಗಳ ಮೂಲಕವೇ ಸಂಜ್ಞೆ ತನ್ನ ಸ್ಪಷ್ಟ ರೂಪವನ್ನು ಪಡೆಯುತ್ತದೆ. ಮರಕ್ಕೂ ಮರ ಎಂಬ ಶಬ್ದಕ್ಕೂ ಸಂಬಂಧವಿರುವುದಿಲ್ಲ. ಈ ಸಂಬಂಧ ಯಾದೃಚ್ಛಿಕವಾದುದು. 'ಮರ' ಇದು ಶಾಬ್ದಿಕ ರೂಪ.

ಹಾಗೆಯೇ ಬರವಣಿಗೆಯ ಸಂದರ್ಭದಲ್ಲಿ ಚಾಕ್ಷುಷ ರೂಪವನ್ನು ಪಡೆಯುತ್ತದೆ. ಈ ಎರಡು ರೂಪಗಳನ್ನು ಸೂಚಕ (Signifier) ಎನ್ನುತ್ತಾರೆ. ಈ ಶಬ್ದಕ್ಕೆ ಸಂಬಂಧಿಸಿದ ಅರ್ಥ ಅಥವಾ ಪರಿಭಾವನೆಯನ್ನು ಅಂದರೆ, ನಮ್ಮ ಕಲ್ಪನೆಗೆ ಬರುವ ನಿಜವಾದ ಮರವನ್ನು ಸೂಚಿತ (Signified) ಎಂದು ಹೇಳುತ್ತಾರೆ.

ಸಸ್ಸೂರ್ ಅರ್ಥದ ಬಗೆಗೆ ಮಹತ್ವದ ವಿಚಾರಗಳನ್ನು ಮಂಡಿಸಿದ್ದಾರೆ. ಅವರ ಸಿದ್ಧಾಂತದ ಪ್ರಕಾರ ಎರಡು ರೀತಿಯ ಅರ್ಥಗಳಿರುತ್ತವೆ.

೧. ಮೊದಲನೆಯದು ಪರಸ್ಪರ ಸಂಬಂಧ ಬೆಳೆಸುವುದರ ಮೂಲಕ ಉಂಟಾಗುವ ಅರ್ಥಗಳು. ಉದಾ: ಕಡಲು, ಕೆರೆ, ನದಿ. ಯಾವುದು ಕಡಲಲ್ಲವೋ ಅದು ನದಿ, ಯಾವುದು ನದಿಯಲ್ಲವೋ ಅದು ಕೆರೆ.

೨. ಎರಡನೆಯದು ಪರಸ್ಪರ ವ್ಯತ್ಯಾಸಗಳ ಮೂಲಕ ಉಂಟಾಗುವ ಅರ್ಥಸಂಜ್ಞೆಯ ಭಾಗವಾಗಿರುವ ಅರ್ಥವು ಪರಸ್ಪರ ಸಂಜ್ಞೆಗಳ ವ್ಯತ್ಯಾಸದಿಂದ ಉಂಟಾಗುವ ಅರ್ಥಕ್ಕೆ ಅಧೀನವಾಗಿರುತ್ತದೆ. ಇಲ್ಲಿ ಮುಖ್ಯವಾಗಿ ಮೌಲ್ಯಕ್ಕೆ ಸಂಬಂಧಿಸಿದ ಗುಣಧರ್ಮವನ್ನು ನಾವು ಗಮನಿಸಬೇಕು. ಯಾವುದೇ ವಸ್ತುವಿಗೆ ಮೌಲ್ಯ ಉಂಟಾಗಬೇಕಾದರೆ ಇನ್ನೊಂದು ವಸ್ತುವಿನೊಂದಿಗೆ ಅದನ್ನು ಹೋಲಿಸಬೇಕು. ಇವುಗಳನ್ನು ಸಸ್ಸೂರ್ 'ಭಾಷಿಕ ಮೌಲ್ಯ'[೩೦] ಎಂದು ಕರೆಯುತ್ತಾರೆ. ಇವುಗಳು ಪರಸ್ಪರ ವ್ಯತ್ಯಾಸದಿಂದ ಉಂಟಾಗುವ ಅರ್ಥಗಳಾಗಿರುತ್ತವೆ. ಈ ವ್ಯತ್ಯಾಸವಾಗುವುದಕ್ಕೆ ಭಾಷಿಕ ವ್ಯತ್ಯಾಸ ಸಾಕಾಗುತ್ತದೆ. ಉದಾ: ಕಡಲು–ಒಡಲು ಎನ್ನುವ ಪದದ ಆರಂಭದಲ್ಲಿ ಕ, ಬ ವ್ಯತ್ಯಾಸವಷ್ಟೇ ಸಾಕಾಗುತ್ತದೆ ಎನ್ನುತ್ತಾನೆ.

ಭಾಷಿಕ ರೂಪಗಳು ಪರಸ್ಪರ ವ್ಯತ್ಯಾಸದ ಮೂಲಕ ಅರ್ಥವನ್ನುಂಟು ಮಾಡುತ್ತವೆ. ಭಾಷಿಕ ರೂಪವು ಯಾವುದೇ ರೀತಿಯ ಆಧಾರ(Subtance), ಅಸ್ತಿತ್ವ(Presence) ಅಥವಾ ಯಾವುದೇ ಧನಾತ್ಮಕ ಗುಣಲಕ್ಷಣಗಳನ್ನು ಹೊಂದಿರುವುದಿಲ್ಲ. ಅಲ್ಲಿರುವುದು ಕೇವಲ ವ್ಯತ್ಯಾಸವಷ್ಟೇ. ಯಾವುದು 'ಅ' ಎನ್ನುವ ಪ್ರಶ್ನೆ ಬಂದರೆ ಯಾವುದು 'ಇ' ಅಲ್ಲವೋ ಅದು ಎನ್ನಬಹುದೇ ಹೊರತು, ಇದುವೇ ಎಂದು ಬೆಟ್ಟುಮಾಡಿ ತೋರಿಸುವ ಅದರದೇ ಯಾವ ವೈಶಿಷ್ಟ್ಯವೂ 'ಅ' ವರ್ಣಕ್ಕೆ ಅಥವಾ ಯಾವುದೇ ವರ್ಣಕ್ಕೆ (ಯಾವುದೇ ಭಾಷೆಯ ಯಾವುದೇ ವರ್ಣಕ್ಕೂ) ಇಲ್ಲ[೩೧] ಎಂಬುದು ಸಸ್ಸೂರ್‌ನ ವಿಚಾರ.

ಸಸ್ಸೂರ್‌ನ ಎರಡು ವಿಚಾರಗಳನ್ನು ಸ್ತ್ರೀವಾದಿಗಳು ತಮ್ಮ ವಾದಗಳಿಗೆ ಬಳಸಿಕೊಂಡರು. ಅವುಗಳೆಂದರೆ:

೧. ಭಾಷೆಯಲ್ಲಿ ಬಳಕೆಯಾಗುವ ಒಂದು ಧ್ವನಿಯನ್ನು ಬಿಡಿಯಾಗಿ ಅದರದ್ದೇ ಆದ ಚಹರೆಗಳಿಂದ ವಿವರಿಸಲು ಹೊರಡುವುದು ಸರಿಯಲ್ಲ. ಅದು ಇಡೀ ಭಾಷೆಯ ಇತರ ಧ್ವನಿಗಳಿಗಿಂತ ಭಿನ್ನವಾಗಿರುವ ನೆಲೆಗಳನ್ನು ವಿವರಿಸುವುದು ಮುಖ್ಯವಾಗುತ್ತದೆ ಎಂಬ ವಿಚಾರ.

೨. ಪದಗಳ ಅರ್ಥವು ವ್ಯತ್ಯಾಸದ ಮೂಲಕವಷ್ಟೇ ಗೋಚರವಾಗುತ್ತದೆ. ಯಾವುದು ನದಿಯಲ್ಲವೋ ಅದು ಕೆರೆ ಎಂಬಂತಹ ವಿಚಾರ.

ಸ್ತ್ರೀವಾದಿಗಳು ಸಸ್ಸೂರ್‌ನ ಈ ವಿಚಾರಗಳ ಹಿನ್ನೆಲೆಯಲ್ಲಿ ಭಾಷೆ ಮತ್ತು ಆಲೋಚನೆಗಳು ಸಹಜವಾಗಿಯೇ ಹೀಗೆ ವೈರುಧ್ಯಗಳ ಸರಣಿಯಾಗಿರುತ್ತವೆಂದು ವಾದಿಸುತ್ತಾರೆ. ಪದಗಳ ಅರ್ಥಗಳನ್ನು ವಿವರಿಸುವ ಒಂದು ಮಾದರಿ ಇದೆ. ಇದು ದ್ವಿಮಾನ ಭಿನ್ನತೆಯನ್ನು ಅವಲಂಬಿಸಿದೆ ಎನ್ನುತ್ತಾರೆ. ಈ ದ್ವಿಮಾನ ಕಲ್ಪನೆಯನ್ನು ಕೇವಲ ಭಿನ್ನತೆಯ ನೆಲೆಯಲ್ಲಿ ವಿವೇಚಿಸಿಕೊಂಡಿದ್ದರೆ ಸಮಸ್ಯೆ ಎದುರಾಗುತ್ತಿರಲಿಲ್ಲ. ಬದಲಿಗೆ ಈ ದ್ವಿಮಾನ ಭಿನ್ನತೆಯ ನೆಲೆಗಳಿಗೆ ಸ್ತ್ರೀವಾದಿಗಳು ಸಕಾರಾತ್ಮಕ ಮತ್ತು ನಕಾರಾತ್ಮಕ ಎಂಬ ಎರಡು ಅರ್ಥದ ನೆಲೆಗಳನ್ನು ಆರೋಪಿಸುತ್ತಾರೆ.

ಡೇಲ್ ಸ್ಪೆಂಡರ್ ಅವರ ಪ್ರಕಾರ, ಯಾವುದು ಪುರುಷನಲ್ಲವೋ ಅದು ಸ್ತ್ರೀ, ಪುರುಷ ಸಮಾಜದ ಅಧಿಕಾರದ ಕೇಂದ್ರವಾದ್ದರಿಂದ ಅವನಿಗೆ ಸಂಬಂಧಪಟ್ಟ ವಿಚಾರಗಳನ್ನು ಸಕಾರಾತ್ಮಕ ಮತ್ತು ಉಳಿದವುಗಳೆಲ್ಲವನ್ನು ನಕಾರಾತ್ಮಕ ಎಂದು ತೀರ್ಮಾನಿಸುತ್ತಾರೆ. ಇಲ್ಲಿ ಸ್ತ್ರೀ ನಕಾರಾತ್ಮಕ ಅರ್ಥಛಾಯೆಯೊಳಗೆ ಸೇರುತ್ತಾಳೆ. ಹಾಗಾಗಿ ಭಾಷೆಯ ಅರ್ಥರಚನೆಯ ನಿಯಮಗಳು ಮೂಲತಃ ಲಿಂಗತಾರತಮ್ಯದಿಂದಲೇ ರಚಿತವಾಗಿವೆ. ಆದ್ದರಿಂದ, ಭಾಷೆ ಪುರುಷ ನಿರ್ಮಿತ ಎಂಬ ವಾದವನ್ನು ಮಂಡಿಸುತ್ತಾರೆ.

ಇದಕ್ಕೆ ಪೂರಕವಾಗಿ ಸ್ಪೆಂಡರ್ ಅವರ ಮತ್ತೊಂದು ಹೇಳಿಕೆಯನ್ನು ಗಮನಿಸಬಹುದು: "ನಮ್ಮ ಸಂಕೇತಗಳ ಮೂಲಕ ನಾವು ಕಟ್ಟಿದ ಲೋಕವನ್ನು ನಾವು ನಂಬುತ್ತೇವೆ. ಈ ಸಂಕೇತಗಳ ಪ್ರತಿನಿಧೀಕರಣ ಜಾಲಕ್ಕೆ ಸಿಕ್ಕಿಬಿದ್ದಿದ್ದೇವೆ. ಸಂಕೇತೀಕರಿಸಿದ ನಮ್ಮ ಸಾಮರ್ಥ್ಯ ಆ ಸಂಕೇತಗಳನ್ನು ನಾವು ಬಳಸುವ ಬಗೆ, ಇವುಗಳಿಂದ ಭಾಷೆ, ಆಲೋಚನೆ ಮತ್ತು ವಾಸ್ತವತೆ ಎಂಬ ರಚನೆಗಳ ಜಾಲವನ್ನು ರೂಪಿಸಿಕೊಂಡಿದ್ದೇವೆ. ಈ ಸಂಕೇತಗಳನ್ನು ಕಟ್ಟುವ, ಒಡೆಯುವ ಕೆಲಸಕ್ಕಾಗಿ ಭಾಷೆಯೆಂಬುದು ಮೈದಳೆದಿದೆ. ನಾವು ಏನನ್ನು ನೋಡುತ್ತೇವೋ ಅದೆಲ್ಲವೂ ಭಾಷೆಯಲ್ಲಿರುವ ಸಂಕೇತೀಕರಣ ನೆಲೆಗಳನ್ನು ಅವಲಂಬಿಸಿದೆ. ನಮ್ಮ ಭಾಷೆಯಲ್ಲೇ ಹೀಗೆ ಸಂಕೇತೀಕರಣಗೊಂಡಿರುವ ನಿಯಮಗಳಲ್ಲಿ ಲಿಂಗ ತಾರತಮ್ಯವೂ ಒಂದಾಗಿದೆ"[೨] ಎನ್ನುತ್ತಾರೆ.

ಸ್ಪೆಂಡರ್ ಅವರ ಪ್ರಕಾರ, ಭಾಷೆಯೇ ಶೋಷಣೆಗೆ ಕಾರಣ. ಅದು ಕೇವಲ ಸೂಚಕವಲ್ಲ ಎಂದು ಹೇಳುವ ಮುಖಾಂತರ ಪರ್ಯಾಯ ಚಿಂತನೆಯನ್ನು ಪ್ರತಿನಿಧಿಸುತ್ತಾರೆ. ಗಂಡಸರೇ ಎಲ್ಲ ಪದಗಳಿಗೂ ಅರ್ಥವನ್ನು ನಿಗದಿಪಡಿಸಿರುವುದರಿಂದ ಅವರು ಸ್ತ್ರೀ ವಿರೋಧಿ ನೆಲೆಗಳನ್ನು ಬಲಗೊಳಿಸಿದ್ದಾರೆ. ಹಾಗಾಗಿ ಎಲ್ಲ ಪದಗಳಲ್ಲೂ ಲೈಂಗಿಕತಾವಾದಿ ನೆಲೆಗಳು ಅಡಕಗೊಂಡಿರುತ್ತವೆ ಎನ್ನುತ್ತಾರೆ.

ಸಸ್ಸೂರ್‌ನ ಭಾಷಿಕ ಚಿಂತನೆಗಳಿಗೂ, ಸ್ತ್ರೀವಾದಿಗಳ ಚಿಂತನೆಗಳಿಗೂ ಒಟ್ಟಾರೆಯಾಗಿ ಎದ್ದುಕಾಣುವ ವ್ಯತ್ಯಾಸವೆಂದರೆ 'ಭಿನ್ನತೆ' ಮತ್ತು 'ವಿರೋಧ'ದ ಪರಿಕಲ್ಪನೆಗಳು. ಸಸ್ಸೂರ್‌ನ ವಾದ ಭಾಷೆಯಲ್ಲಿನ ಅರ್ಥಸ್ಪಷ್ಟತೆ ಭಿನ್ನತೆಗಳಿಂದ ಕೂಡಿರುತ್ತದೆ ಎನ್ನುವುದಾದರೆ, ಸ್ತ್ರೀವಾದಿಗಳೂ ಈ ಭಿನ್ನತೆಯ ಚೌಕಟ್ಟನ್ನು ವೈರುಧ್ಯದ ನೆಲೆಗೆ ಕೊಂಡೊಯ್ಯುತ್ತಾರೆ. ಪದಗಳ ಅರ್ಥಸ್ಪಷ್ಟತೆಯಾಗುವುದು ಪರಸ್ಪರ ಭಿನ್ನತೆಯಿಂದ ಎಂದು ಸಸ್ಸೂರ್ ವಾದಿಸಿದರೆ, ಸ್ತ್ರೀವಾದಿಗಳು ಪದಗಳ ಅರ್ಥಸ್ಪಷ್ಟವಾಗುವುದು ವೈರುಧ್ಯದ ನೆಲೆಗಳಿಂದ ಎಂದು ಭಾವಿಸುತ್ತಾರೆ. ರಾತ್ರಿ-ಹಗಲು ಪದಗಳ ನಡುವೆ ಇರುವುದು ಭಿನ್ನತೆಯಷ್ಟೆ. ಯಾವುದು ರಾತ್ರಿ

ಅಲ್ಲವೋ ಅದು ಹಗಲು. ಇವು ಅರ್ಥ ಸ್ಪಷ್ಟನೆಗೆ ಪರಸ್ಪರ ಪೂರಕವಾಗಿ ಕಾರ್ಯನಿರ್ವಹಿಸುತ್ತವೆ. ವಿರುದ್ಧದ ನೆಲೆಯಲ್ಲಿ ಅಲ್ಲ ಎಂಬುದನ್ನು ಪರಿಗಣಿಸಬೇಕಾಗುತ್ತದೆ.

**೨.೬.೪. ಡೆರಿಡಾನ ನಿರಚನವಾದ ಮತ್ತು ಸ್ತ್ರೀವಾದ**

ಸಸ್ಸೂರ್‌ನ ಚಿಂತನೆಗಳನ್ನು ಭಿನ್ನನೆಲೆಯಲ್ಲಿ ಮುಂದುವರೆಸಿದವರು ಡೆರಿಡಾ. ಇವರ ವಿಚಾರವನ್ನು 'ನಿರಚನವಾದ' ಎಂಬ ಪರಿಭಾಷೆಯಡಿಯಲ್ಲಿ ಚರ್ಚಿಸಲಾಗಿದೆ. ಡೆರಿಡಾನ ಪ್ರಕಾರ, ಎಲ್ಲ ಚಿಂತನೆಗಳು ಕೇಂದ್ರ ಬದ್ಧವಾದುವು. ಯಾವ ಚಿಂತನೆಯೇ ಆಗಲಿ ಅದಕ್ಕೆ ಒಂದು ಮೂಲ, ನಿರ್ದಿಷ್ಟ ಆರಂಭವಿರುತ್ತದೆ. ಈ ಕೇಂದ್ರ ಬದ್ಧ ಚಿಂತನೆಗಳಲ್ಲಿ ಅವಳಿ ವಿರೋಧಗಳಿರುತ್ತವೆ. ಈ ಅವಳಿ ವಿರೋಧಗಳಲ್ಲಿ ಒಂದು ಕೇಂದ್ರದಲ್ಲಿರುತ್ತದೆ, ಮತ್ತೊಂದು ಅಂಚಿಗೆ ತಳ್ಳಲ್ಪಟ್ಟಿರುತ್ತದೆ. ಈ ಕೇಂದ್ರದ ಕಲ್ಪನೆಯನ್ನೆ ಮೊದಲು ನಿರಚನೆ ಮಾಡಬೇಕು ಎನ್ನುತ್ತಾರೆ ಡೆರಿಡಾ.

'ಅ' ಎಂದರೆ ಯಾವುದು 'ಇ' ಅಲ್ಲವೋ ಅದು ಎಂದು ಸಸ್ಸೂರ್‌ನ ಭಾಷಿಕ ವಿಚಾರ ಹೇಳುತ್ತದೆ. ಆದರೆ, 'ಅ' ಎಂಬುದರ ಅಸ್ತಿತ್ವವೇ 'ಇ'ಯನ್ನು ಅವಲಂಬಿಸಿರುವಾಗ ಅದಕ್ಕೆ ಪ್ರತ್ಯೇಕ ನೆಲೆಯೇ ಇಲ್ಲ. ಹಾಗೆ 'ಇ'ಗೂ ಕೂಡಾ. ಇಲ್ಲಿ 'ಅ' ಮತ್ತು 'ಇ'ಗಳ ನಡುವೆ ಶ್ರೇಣೀಕರಣವೊಂದು ನಿರ್ಮಾಣವಾಗುತ್ತದೆ. ಆದ್ದರಿಂದ, ಕೇಂದ್ರಬದ್ಧವಾದ ಚಿಂತನೆಗಳನ್ನು ನಿರಚನೆ ಮಾಡಬೇಕೆಂಬುದು ಡೆರಿಡಾನ ವಾದ. ಆಗ ಪ್ರತಿಯೊಂದಕ್ಕೂ ಸ್ವತಂತ್ರ ಅಸ್ತಿತ್ವ ಉಂಟಾಗುತ್ತದೆ ಎನ್ನುತ್ತಾನೆ.

ಈ ಹಿಂದೆಯೇ ಹೇಳಿದಂತೆ ಸಸ್ಸೂರ್ ಭಾಷೆಯನ್ನು ಸಂಜ್ಞೆಗಳ ವ್ಯವಸ್ಥೆ ಎಂದು ವ್ಯಾಖ್ಯಾನಿಸಿದ. ಸಂಜ್ಞೆಯಲ್ಲಿ ಸೂಚಕ(Signifier) ಮತ್ತು ಸೂಚಿತ(Signified) ಎಂಬ ಎರಡು ಭಾಗಗಳಿರುತ್ತವೆ. ಇಲ್ಲಿ ಡೆರಿಡಾ ಸಸ್ಸೂರ್‌ನ ಇಡೀ ಚಿಂತನೆಯಲ್ಲಿ ಒಂದು ಮೂಲಭೂತ ಸಮಸ್ಯೆಯಿರುವುದನ್ನು ಗಮನಿಸುತ್ತಾರೆ. ಸಸ್ಸೂರ್ ಸಂಜ್ಞೆಯನ್ನು ಸೂಚಕ ಮತ್ತು ಸೂಚಿತ ಎಂದು ವಿಂಗಡಿಸಿದಾಗ ಆತನಿಗೆ ಸೂಚಕಕ್ಕಿಂತ ಸೂಚಿತವೇ ಮುಖ್ಯ ಎಂಬ ಭಾವನೆಯಿದೆ ಎಂದು ಡೆರಿಡಾನ ಅಭಿಪ್ರಾಯ. ಆಗ ಸಹಜವಾಗಿಯೇ ಶಾಬ್ದಿಕ ಅಥವಾ ಚಾಕ್ಷುಷ ರೂಪಕ್ಕೆ ಅಂತಹ ಪ್ರಾಧಾನ್ಯ ಇರುವುದಿಲ್ಲ. ಸಸ್ಸೂರ್‌ನ ಪ್ರಕಾರ ಶಬ್ದ ಕೇವಲ ಅರ್ಥವನ್ನಷ್ಟೇ ಕೊಡುತ್ತದೆ. ಪದವು ಹೊರಗಿನದಾದರೆ, ಅರ್ಥ ಒಳಗಿನದು ಎನ್ನುತ್ತಾನೆ. ಈ ಅರ್ಥದಲ್ಲಿಯೇ ಡೆರಿಡಾ ಹೇಳುತ್ತಿರುವುದು ಸಸ್ಸೂರ್‌ನ ಚಿಂತನೆಯಲ್ಲಿ ಒಳ ಅರ್ಥ ಮತ್ತು ಹೊರಗಿನ ಶಬ್ದದ ನಡುವೆ ಸಹಜ ಸಂಬಂಧವನ್ನು ಕಲ್ಪಿಸಲಾಗಿದೆ ಎಂಬುದು. ಇಲ್ಲಿಯೂ 'ಒಳ ಅರ್ಥ' ಎಂಬುದು ಕೇಂದ್ರವಾಗಿದೆ ಎನ್ನುತ್ತಾರೆ.

ಸ್ತ್ರೀವಾದಿಗಳಾದ ಎಲೆನ್ ಸೀಕ್ಸೂ ಮತ್ತು ಲೂಯಿ ಇರಿಗೆರೆಯವರು, ನಿರಚನೆಯ ನೆಲೆಯಲ್ಲಿ ಎರಡು ಪ್ರಶ್ನೆಗಳನ್ನು ಮುಂದಿಡುತ್ತಾರೆ. ಈ ಪ್ರಶ್ನೆಗಳು ಹೆಣ್ಣು ಗಂಡು ಎಂಬ ದ್ವಿಮಾನ ಕಲ್ಪನೆ ಮತ್ತು ಅದಕ್ಕೆ ಸಂಬಂಧಿಸಿದ ಇತರ ವಿರುದ್ಧ ನೆಲೆಗಳಿಗೆ ಸಂಬಂಧಿಸಿವೆ. ಉದಾ: ಒಳಿತು-ಕೆಡುಕು, ಬುದ್ಧಿ-ಭಾವ ಇತ್ಯಾದಿ. ಮೊದಲನೆಯದಾಗಿ ಸಮುದಾಯದ ಮೌಲ್ಯಗಳು, ವಿಚಾರಗಳು, ನಿಯಮಗಳು, ಯಾವುದನ್ನೇ ತೆಗೆದುಕೊಂಡರೂ ಗಂಡು ಕೇಂದ್ರದಲ್ಲಿರುತ್ತಾನೆ. ಹೆಣ್ಣು ಅಂಚಿನಲ್ಲಿರುತ್ತಾಳೆ. ಪ್ರತಿಯೊಂದಕ್ಕೂ

ಪುರುಷನೇ ಮಾನದಂಡವಾಗಿರುತ್ತಾನೆ. ಈ ರೀತಿಯ ಪುರುಷ ಕೇಂದ್ರಬದ್ಧ ಆಲೋಚನಾ ಕ್ರಮಗಳನ್ನು ಇರಿಗೆರೆ ಪ್ರಶ್ನಿಸುತ್ತಾರೆ. ಹೆಣ್ಣು ಎಂಬುದನ್ನು ಗಂಡು ಅಲ್ಲದುದು ಎಂದು ಹೇಳುವುದೇ ಸರಿಯಲ್ಲ ಎನ್ನುತ್ತಾರೆ. ಎರಡನೆಯದಾಗಿ, ಹೆಣ್ಣನ್ನು ಗಂಡಿಗೆ ವಿರುದ್ಧವಾಗಿ ಇರಿಸಿ ನೋಡುವಾಗಲೇ ಆ ಹೆಣ್ಣುತನಕ್ಕೆ ಯಾವ ಮೌಲ್ಯವನ್ನು ನೀಡಲಾಗಿದೆ ಎಂಬುದನ್ನು ಕುರಿತು ಪ್ರಶ್ನಿಸುತ್ತಾರೆ. ಗಂಡು-ಹೆಣ್ಣು ಎನ್ನುವಾಗ ನಾವು ರಚಿತವಾದ ಭಿನ್ನತೆಯನ್ನಷ್ಟನ್ನೇ ಗಮನಿಸುತ್ತಿಲ್ಲ, ಅದರೊಡನೆ ಒಂದು ಶ್ರೇಣೀಕರಣವೂ ಅಡಗಿದೆ. ಮೊದಲು ಇದರ ನಿರಚನೆಯಾಗಬೇಕು[೩೩] ಎನ್ನುತ್ತಾರೆ.

ಒಟ್ಟಾರೆ ಡೆರಿಡಾ ನಿರಚನವಾದವನ್ನು ಒಪ್ಪುವ ಸ್ತ್ರೀವಾದಿಗಳು ಮಾನವ ಗ್ರಹಿಕೆಯೇ ಮೂಲಭೂತವಾಗಿ ತಾರತಮ್ಯದ ನೆಲೆಯಲ್ಲಿ ರಚಿತವಾಗಿದೆ. ಭಾಷೆಯೂ ಪುರುಷನನ್ನೇ ಕೇಂದ್ರವನ್ನಾಗಿರಿಸಿಕೊಂಡು ರಚಿತವಾಗಿದೆ. ಅವನೇ ಪ್ರಮಾಣಬದ್ಧನಾಗಿದ್ದಾನೆ, ಸ್ತ್ರೀ ನಗಣ್ಯಳಾಗಿದ್ದಾಳೆ. ಭಾಷೆಯಲ್ಲಿನ ಈ ತಾರತಮ್ಯವನ್ನು ನಿವಾರಿಸಬೇಕಾದರೆ, ಪುರುಷಕೇಂದ್ರವಾದ ಭಾಷೆಯನ್ನು ನಿರಚಿಸಬೇಕಾಗಿದೆ ಎಂಬ ವಾದವನ್ನು ಮಂಡಿಸುತ್ತಾರೆ. ಆದರೆ ಏಕಾಏಕೀ ಈಗಿರುವ ಭಾಷೆಯನ್ನು ನಿರಚಿಸಲು ಸಾಧ್ಯವೇ? ಎಂಬ ಅಂಶವನ್ನು ಕೂಡ ಪರಿಗಣಿಸಬೇಕಾಗುತ್ತದೆ.

**೨.೬.೫. ಲಕಾನ್, ಫ್ರಾಯ್ಡ್ ಮತ್ತು ಜೂಲಿಯಾ ಕ್ರಿಸ್ಟೇವಾರವರ ಮನಃಶಾಸ್ತ್ರೀಯ ಹಾಗೂ ಭಾಷಿಕ ವಿಚಾರಗಳು**

ಫ್ರಾಯ್ಡ್, ಲಕಾನ್ ಮತ್ತು ಜೂಲಿಯಾ ಕ್ರಿಸ್ಟೇವಾ ಈ ಮೂವರು ಮನಃಶಾಸ್ತ್ರಜ್ಞರು. ಮನಃಶಾಸ್ತ್ರೀಯ ಹಿನ್ನೆಲೆಯಲ್ಲಿ ಭಾಷೆ ಮತ್ತು ಲಿಂಗ ಸಂಬಂಧದ ಸ್ವರೂಪವನ್ನು ಕುರಿತು ಚರ್ಚಿಸುತ್ತಾರೆ. ಇವರ ಈ ಚರ್ಚೆಯನ್ನು ಒಟ್ಟು ಮೂರು ಹಂತಗಳಲ್ಲಿ ಗುರುತಿಸಬಹುದು.

೧. ಮಗುವಿನ ಭಾಷಿಕ ಪೂರ್ವ ಸ್ಥಿತಿಯ ಹಂತ.

೨. ಮಗು ಭಾಷೆಯನ್ನು ಕಲಿಯುವ, ಭಾಷಿಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವ ಹಂತ.

೩. ಮಗು ಸಾಮಾಜೀಕರಣ ಪ್ರಕ್ರಿಯೆಗೆ ಒಳಗಾಗುವ ಹಂತ.

ಲಕಾನ್‌ನ ಮನೋವಿಶ್ಲೇಷಣಾ ಸಿದ್ಧಾಂತದ ಪ್ರಕಾರ ಮೊದಲು ಶಿಶು ಸಾಂಕೇತಿಕ ವ್ಯವಸ್ಥೆಯಲ್ಲಿ ಪ್ರವೇಶ ಪಡೆಯದೆ, ಒಂದು ಕಾಲ್ಪನಿಕ ಅವಸ್ಥೆಯಲ್ಲಿರುತ್ತದೆ. ಈ ಹಂತದಲ್ಲಿ ಶಿಶು ತಾಯಿಯ ದೇಹದೊಡನೆ ಒಂದಾಗಿರುವುದರಿಂದ ಅದಕ್ಕೆ ಕೊರತೆ, ಪೂರ್ಣತೆ, ಭಿನ್ನತೆ, ಅಸಂತೃಪ್ತತೆ ಇವು ಯಾವುವೂ ಇರುವುದಿಲ್ಲ. ತಾಯಿ ಮಗುವಿನ ಜೋಡಿ ಭಗ್ನವಾದಾಗಲೇ ಲಿಂಗವೆಂಬ ಸಂಕೇತದಿಂದಾಗಿ ಹೊಸ ಭಯಗಳು ಹುಟ್ಟಿಕೊಳ್ಳುತ್ತವೆ. ಈ ಪರಿಸ್ಥಿತಿಯಿಂದಾಗಿ ಶಿಶುವಿನಲ್ಲಿ ಲಿಂಗದ ಬಗ್ಗೆ ಎರಡು ಶಕ್ತಿಯುತ ಅರ್ಥ ಪರಂಪರೆಗಳು ಹುಟ್ಟಿಕೊಳ್ಳುತ್ತವೆ.

ಮೊದಲನೆಯದು 'ಕೊರತೆ' ಇದು ತಾಯಿಯ ದೇಹವನ್ನು ಕಳೆದುಕೊಂಡ ಭಾವ. ಮಾತೃ ಗಮನದ ನಿಷಿದ್ಧತೆ ಮತ್ತು ತಂದೆಯ ಭಯದಿಂದಾಗಿ ತಾಯಿ ಮಗುವಿನ ನಡುವೆ ಮೊದಲಿನ ಸಂಬಂಧ ಮರಳಲಾರದು. ಎರಡನೆಯದಾಗಿ, ಲಿಂಗವು ನಿಷೇಧಗಳನ್ನು ಮತ್ತು ಅದರಿಂದ ಮಗು ಅನುಭವಿಸುವ

ದಿಗಿಲನ್ನು ಸಂಕೇತಿಸುತ್ತದೆ. ಇದು ವಾಸ್ತವವಾಗಿ ಸಾಮಾಜಿಕ ನೆಲೆಯ ನಿಯಮವನ್ನು ಸೂಚಿಸುತ್ತದೆ. ಪರೋಕ್ಷವಾಗಿ ಪಿತೃಪ್ರಧಾನತೆಯ ನೆಲೆಯನ್ನು ಬಿಂಬಿಸುತ್ತದೆ.[೩೪] ಇದು ಮೊದಲನೆಯ ಹಂತ.

ನಂತರ ಲಕಾನ್ ಸಾಂಕೇತಿಕ ವ್ಯವಸ್ಥೆಯಲ್ಲಿ ಮಕ್ಕಳು ತಮ್ಮ ಸ್ಥಾನವನ್ನು ಕಂಡುಕೊಳ್ಳುವ ಕ್ರಮವನ್ನು ವಿವರಿಸುತ್ತಾರೆ. ಹೀಗೆ ಸ್ಥಾನ ಕಂಡುಕೊಂಡು ಸಮಾಜದ ಸದಸ್ಯರಾಗಿ ಮನುಷ್ಯ ಜೀವಿಗಳಾಗುತ್ತಾರೆ. ಹಲವು ಹಂತಗಳ ಈ ಪ್ರಕ್ರಿಯೆಯನ್ನು ಆತ 'ಭಗ್ನತೆ' ಎನ್ನುತ್ತಾನೆ. ಮೊದಲು ಮಗು ತಾಯಿಯ ದೇಹದಿಂದ ಬೇರೆಯಾಗಿ ತಾನು ಸ್ವತಂತ್ರ ಘಟಕವೆಂಬ ನೆಲೆಗೆ ಬರಬೇಕು. ಲಕಾನ್ ಇದನ್ನು 'ಕನ್ನಡಿ ಹಂತ' ಎನ್ನುತ್ತಾನೆ. ಈ ಹಂತದಲ್ಲಿ ಮಗು ತಾನು ಕಂಡದ್ದೆಲ್ಲ ತನ್ನದೇ ಬಿಂಬವೆಂದುಕೊಳ್ಳುತ್ತದೆ. ಜೊತೆಗೆ ತನಗೂ(ನಾನು) ಮತ್ತು ತನ್ನೆದುರಿಗೆ ಇರುವವರಿಗೂ(ನೀನು) ಹಾಗೂ ಯಾರನ್ನು ಕುರಿತು ಮಾತಾಡುತ್ತೇವೆಯೋ ಅವರಿಗೂ(ಅವನು/ಳು) ಇರುವ ವ್ಯತ್ಯಾಸವನ್ನು ಅರಿತುಕೊಳ್ಳಬೇಕು. ಭಾಷೆಯ ಕಟ್ಟುಗಳನ್ನು ಅರಿತಾಗಲೇ ಈ ಕೊನೆಯ ಹಂತದ ಪಡೆಯುವಿಕೆ ಸಾಧ್ಯ. ಅಂದರೆ, ಭಾಷೆಯ ಕಲಿಕೆಯಲ್ಲಿ ವ್ಯಕ್ತೀಕರಣ ಮತ್ತು ಸಾಮಾಜೀಕರಣಗಳು ಒಟ್ಟಿಗೆ ನಡೆಯುತ್ತವೆ[೩೫] ಎನ್ನುತ್ತಾರೆ.

ಜೂಲಿಯಾ ಕ್ರಿಸ್ಟೇವಾ ಎಂಬ ಫ್ರೆಂಚ್ ವಿಮರ್ಶಕಿ ಕೂಡ ಭಾಷಾ ಪೂರ್ವದ ಅವ್ಯವಸ್ಥಿತ ಸೂಚನಾ ಪ್ರಕ್ರಿಯೆಯನ್ನು ಗುರುತಿಸುತ್ತಾರೆ. ಮಗುವಿನ ಬೆಳವಣಿಗೆಯ ಪ್ರಾರಂಭಿಕ ಹಂತದಲ್ಲಿ ನಡೆಯುವ ಈ ಪ್ರಕ್ರಿಯೆಯ ಕೇಂದ್ರದಲ್ಲಿ ತಾಯಿ ಇರುತ್ತಾಳೆ. ತಾಯಿ ಕೇಂದ್ರಿತವಾದ ಈ ಭಾಷೆ 'ಸಿಮಿಯಾಟಿಕ್' ಆದದ್ದು ಅಥವಾ 'ಸೂಚಕ' ಪ್ರಧಾನವಾದದ್ದು. ಕ್ರಮೇಣ ಈ ಸೂಚಕ ಪ್ರಧಾನವಾದ ಭಾಷೆ ದಮನಕ್ಕೆ ಒಳಗಾಗಿ ತಂದೆ ಕೇಂದ್ರಿತವಾದ, ತಂದೆಯಿಂದ ನಿಯಂತ್ರಿತವಾದ, ವ್ಯಾಕರಣ ಮತ್ತು ತರ್ಕಬದ್ಧವಾದ ಭಾಷೆಯ ಅಧಿಪತ್ಯ ಶುರುವಾಗುತ್ತದೆ. ಈ ಭಾಷೆಯನ್ನು 'ಸಿಂಬಾಲಿಕ್' ಆದದ್ದು ಅಥವಾ 'ಸಂಕೇತ' ಪ್ರಧಾನವಾದದ್ದು ಎಂದು ಕ್ರಿಸ್ಟೇವಾ ಗುರುತಿಸುತ್ತಾರೆ. ನಮ್ಮ ಎಲ್ಲ ಅಂಗೀಕೃತ ಸಂಕಥನಗಳು ತಂದೆ ಭಾಷೆಯಿಂದ ನಿಯಂತ್ರಿತವಾದವುಗಳು ಎನ್ನುತ್ತಾರೆ.

ಶೈಶವಾವಸ್ಥೆಯ ಅವ್ಯವಸ್ಥಿತ ಭಾಷಾ ಪೂರ್ವ ವಾಕ್‌ಪ್ರವಾಹದ ಚಲನೆಗಳೂ, ಆಂಗಿಕ ಸನ್ನೆಗಳು, ಸದ್ದು ಮುಂತಾದವು ಪ್ರೌಢಾವಸ್ಥೆಯ ಪರಿಪಕ್ವ ಭಾಷಿಕ ಪ್ರಯತ್ನದಡಿಯಲ್ಲಿ ಸುಪ್ತವಾಗಿ ಕ್ರಿಯಾಶೀಲವಾಗಿ ಇರುತ್ತವೆ. ಈ ಬಗೆಯ ಭಾಷಿಕ ಸಾಮಾಗ್ರಿಯನ್ನು ಕ್ರಿಸ್ಟೇವಾ 'ಶಬ್ದಾರ್ಥ' ಸ್ವರೂಪದ್ದೆಂದು ಪರಿಗಣಿಸುತ್ತಾರೆ.[೩೬] ಅದು ಅವ್ಯವಸ್ಥಿತ ಅರ್ಥ ಸೂಚಕ ಕ್ರಿಯೆಯನ್ನು ಹೋಲುತ್ತದೆ.

ಶೈಶವ ಹಂತದ ಅವ್ಯವಸ್ಥಿತ 'ಶಬ್ದಾರ್ಥ' ಸ್ವರೂಪವೂ ಕ್ರಮವಾಗಿ ವ್ಯವಸ್ಥೆಗೊಂಡಂತೆಲ್ಲ ವಾಕ್ಯ ರಚನೆಯು ತರ್ಕಬದ್ಧವೂ, ಸುಸಂಗತವೂ ಆಗುತ್ತದೆ. ಈ ಹಂತದ ವೈಚಾರಿಕತೆಯನ್ನು ಕ್ರಿಸ್ಟೇವಾ 'ಸಂಕೇತಾತ್ಮಕತೆ' ಎಂದು ಗುರುತಿಸುತ್ತಾರೆ. ಶಬ್ದಾರ್ಥದ ಜೊತೆ ಸಂಕೇತಾತ್ಮಕತೆ ಕೆಲಸ ಮಾಡುತ್ತಾ, ಸಂಕೇತಾತ್ಮಕತೆ ಶಬ್ದಾರ್ಥದ ಮೇಲೆ ಕೌಶಲ್ಯಪೂರ್ಣವಾಗಿ ಅಧಿಕಾರವನ್ನು ಸ್ಥಾಪಿಸುತ್ತದೆ. ಈ ಸಂಕೇತಾತ್ಮಕತೆ ತನಗೆ ತಾನೇ ಸ್ವಂತ ಸೂಚಕ ಗುಣವನ್ನು ಉತ್ಪಾದಿಸಲಾರದು. ಮಾತಾಡುವವರನ್ನು ಹಾಗೂ ಕೇಳುವವರನ್ನು ಅವರವರ ಸ್ಥಾನದಲ್ಲಿರಿಸಿ ಅವು ತಮ್ಮದೇ ಗುರುತನ್ನು ಪಡೆಯಲು ಸಂಕೇತಾತ್ಮಕತೆ ಸಹಾಯ ಮಾಡುತ್ತದೆ.

ಈ ಹಂತದಲ್ಲಿ ಪುರುಷ ಪ್ರಧಾನ ಸಮಾಜದಲ್ಲಿ ಗಂಡು ಹೇಳುವವನಾಗಿ ಮೇಲ್‌ಸ್ತರದಲ್ಲಿದ್ದರೆ, ಹೆಣ್ಣು ಕೇಳುವವಳಾಗಿ ಕೆಳಸ್ತರದಲ್ಲಿರುತ್ತಾಳೆ. ಅವನು ಸಬ್ಜೆಕ್ಟ್, ಅವಳು ಆಬ್ಜೆಕ್ಟ್ ಆಗಿರುತ್ತಾಳೆ ಎನ್ನುತ್ತಾರೆ.

ಕ್ರಿಸ್ತೇವಾ ನಿರೂಪಿಸುವ ಶಬ್ದಾರ್ಥ ಮತ್ತು ಸಂಕೇತಾತ್ಮಕತೆಗಳ ಸ್ವರೂಪಕ್ಕೆ ಸಂವಾದಿಯಾಗಿ ಲಕಾನ್‌ನ ಪ್ರತಿಮಾತ್ಮಕತೆ(Imaginary) ಮತ್ತು ಪ್ರತೀಕಾತ್ಮಕತೆ(Symbalic)ಯ ಪರಿಕಲ್ಪನೆಯನ್ನು ಚರ್ಚೆಗೆ ತೆಗೆದುಕೊಳ್ಳಬಹುದು.

೧. ಭಾಷಾ ಪೂರ್ವಸ್ಥಿತಿ– ಪ್ರತಿಮಾತ್ಮಕತೆ (ಕಾಲ್ಪನಿಕ)

೨. ಭಾಷಿಕ ಸ್ಥಿತಿ– ಪ್ರತೀಕಾತ್ಮಕತೆ (ಸಾಂಕೇತಿಕ)[೩೭]

ಪ್ರತಿಮಾತ್ಮಕತೆಯ ಸ್ಥಿತಿಯಲ್ಲಿ ವ್ಯತ್ಯಾಸವನ್ನು ಕಲ್ಪಿಸುವ ಕೇಂದ್ರ 'ಸ್ವ'ತ್ವವೂ ಇರುವುದಿಲ್ಲ. ಭಾಷಾ ಪೂರ್ವದ ಘಟ್ಟದಲ್ಲಿ ಮಗುವಿನ 'ಸ್ವ' ಪ್ರತಿಮೆಯು ತುಂಡು ತುಂಡಾಗಿರುತ್ತದೆ. ಕ್ರಮೇಣ ಅದು ತನ್ನನ್ನು ತಾನು ಸಮಗ್ರವೆಂದು ನೋಡಿಕೊಳ್ಳಲಾರಂಭಿಸುತ್ತದೆ. ಆ ಮೂಲಕ ಕಾಲ್ಪನಿಕ ಆದರ್ಶವಾದ 'ಅಹಂ' ಉತ್ಪಾದಿತವಾಗುತ್ತದೆ. ಈ ಬಗೆಯ ದರ್ಶನಾತ್ಮಕ ಪ್ರತಿಮೆಯು ಆಂಶಿಕವಾಗಿ ಪ್ರತೀಕಾತ್ಮಕವಾಗಿ ಉಳಿಯುತ್ತದೆ ಹಾಗೂ ಆಂಶಿಕವಾಗಿ ತಾನು 'ಬೇರೆ' ಎನ್ನುವುದು ಅರಿವಿಗೆ ಬರುತ್ತದೆ.

ತನ್ನನ್ನು ತಾನು ಸಮಗ್ರ, ಏಕೀಕೃತ, ಸ್ವ ಎಂಬ ತಿಳಿವಳಿಕೆಯು ತನ್ನಿಂದ ಹೊರತಾದ ಅನ್ಯದ ಕಲ್ಪನೆಯ ಮೇಲೆಯೇ ಆಧಾರಿತವಾದುದಾಗಿರುತ್ತದೆ. ಮಗುವು 'ಅನ್ಯ'ರಿಂದ ತನ್ನನ್ನು ಭಿನ್ನವಾಗಿ ಗುರುತಿಸಿಕೊಳ್ಳಲು ಕಲಿಯುತ್ತದೆ. ತಂದೆ ವಿಧಿಸಿದ ನಿಷೇಧದೊಂದಿಗೆ ಮಗು ಪ್ರತೀಕಾತ್ಮಕ ಜಗತ್ತಿನಲ್ಲಿ ಬಂದು ಬೀಳುತ್ತದೆ. ಈ ಜಗತ್ತು ಗಂಡು–ಹೆಣ್ಣು, ಮೇಲು–ಕೀಳು ಇತ್ಯಾದಿ ವೈರುಧ್ಯಗಳನ್ನು ಒಳಗೊಳ್ಳುತ್ತದೆ. ಒಂದು ಸಲ ಮಗು ಭಾಷೆಯ ಪ್ರತೀಕಾತ್ಮಕ ವ್ಯವಸ್ಥೆಯೊಳಗೆ ಪ್ರವೇಶಿಸಿದ ಕೂಡಲೇ ಲಿಂಗ ವ್ಯವಸ್ಥೆಯೊಳಗಿನ ಸಂಬಂಧಗಳಲ್ಲಿ ನಿರ್ದಿಷ್ಟ ಸ್ಥಾನವನ್ನು ಪಡೆಯುತ್ತದೆ ಎನ್ನುತ್ತಾರೆ.

ಫ್ರಾಯ್ಡ್ ಚಿಂತನೆಗಳ ಪ್ರಕಾರ ಲಿಂಗ ವ್ಯವಸ್ಥೆ ಮೂಲಭೂತವಾಗಿ ಭಾಷೆಯ ಕಲಿಕೆಯ ಮೂಲಕ ರೂಪುಗೊಳ್ಳುತ್ತದೆ. ಮಗು ಮಾತನಾಡುವ ಪಿತೃಪ್ರಧಾನ ವ್ಯವಸ್ಥೆಯ ತಂದೆಯ ಕಾನೂನಿನಿಂದ ರೂಪಿತವಾದ ಸಂಕೇತ ವ್ಯವಸ್ಥೆಯನ್ನು ಪ್ರವೇಶಿಸಲೇಬೇಕು. ಫ್ರಾಯ್ಡ್‌ನ ಆಲೋಚನೆಯಂತೆ "ಲಿಂಗ ಪ್ರಜ್ಞೆಯ ನಿಯಂತ್ರಣದಲ್ಲಿ ಭಾಷಾ ಬಳಕೆಯೂ ರೂಪುಗೊಳ್ಳುತ್ತದೆ. ಪಿತೃಪ್ರಧಾನ ಸಂಕೇತ ವ್ಯವಸ್ಥೆ ಹಾಗೂ ಲಿಂಗ ಪ್ರಜ್ಞೆಯ ನಿಯಂತ್ರಣಗಳೆರಡೂ ಸೇರಿ 'ಅವನು' ಮತ್ತು 'ಅವಳು' ಕುರಿತ ಕಲ್ಪನೆಯನ್ನು ಭಾಷಿಕ ನೆಲೆಯಲ್ಲಿ ಸೃಷ್ಟಿಮಾಡುತ್ತವೆ"[೩೮] ಎನ್ನುತ್ತಾರೆ.

ಒಟ್ಟಾರೆ ಈ ಮನಃಶಾಸ್ತ್ರಜ್ಞರ ವಿಚಾರಗಳ ಪ್ರಕಾರ ಗಂಡು ಮತ್ತು ಹೆಣ್ಣು ಮಕ್ಕಳು ಸಾಂಕೇತಿಕ ವ್ಯವಸ್ಥೆಯೊಳಗೆ ಭಿನ್ನವಾಗಿ ಪ್ರವೇಶ ಪಡೆಯುತ್ತಾರೆ ಎಂಬುದು ಹಾಗೂ ಕರ್ತೃತ್ವ, ಅಸ್ಮಿತೆ, ಲಿಂಗಭಿನ್ನತೆಗಳು ಇವೆಲ್ಲವೂ ಭಾಷೆಯ ಮೂಲಕ ರಚಿತವಾಗುತ್ತವೆಂದು ಈ ಸಿದ್ಧಾಂತಗಳು ಹೇಳುತ್ತವೆ.

ಲಕಾನ್ ಸಿದ್ಧಾಂತವು 'ನಾನು' ಎನ್ನುವುದನ್ನು ಹಾಗೂ 'ಕರ್ತೃತ್ವ' ಎಂಬ ಕಲ್ಪನೆಯನ್ನು ಪುರುಷನಿಗೆ ಮಾತ್ರ ಮೀಸಲಿಡುತ್ತದೆ. ಇವು ಸ್ತ್ರೀಯನ್ನು ಒಳಗೊಳ್ಳುವುದಿಲ್ಲ. ಈ ಸಿದ್ಧಾಂತಗಳನ್ನು ಕಾಲದ ವ್ಯಾಪ್ತಿಯ

ಮಿತಿಯೊಳಗೆ ಅರ್ಥೈಸಿಕೊಳ್ಳಬೇಕಾಗುತ್ತದೆ. ಬದಲಾದ ಕಾಲದಲ್ಲಿ ಸಾಮಾಜೀಕರಣ ಪ್ರಕ್ರಿಯೆಗೆ ಒಳಗಾಗುವಲ್ಲಿ ಗಂಡು ಮತ್ತು ಹೆಣ್ಣಿನ ಪಾತ್ರ ಬದಲಾಗಿದೆ. ಇಂದು ಇಬ್ಬರಿಗೂ ಸಮಾನಾವಕಾಶಗಳಿವೆ ಎಂಬುದನ್ನು ಪರಿಗಣಿಸಬೇಕಾಗುತ್ತದೆ.

**೨.೭. ಕನ್ನಡದಲ್ಲಿನ ಭಾಷಿಕ ಲಿಂಗ ಸಂಬಂಧಿ ಆಯಾಮಗಳ ಚರ್ಚೆಗಳು**

ಕನ್ನಡದಲ್ಲಿನ ಲಿಂಗ ಮತ್ತು ಭಾಷೆಯ ಸಂಬಂಧದ ಸ್ವರೂಪದ ಕುರಿತು ನಡೆದಿರುವ ಚರ್ಚೆಗಳನ್ನು ಗಮನಿಸುವುದಾದರೆ, ಮೊದಲಿಗೆ ಕೆ.ವಿ.ನಾರಾಯಣರವರ ವಿಚಾರಗಳನ್ನು ಪರಿಶೀಲಿಸಬಹುದು. ಹೆಣ್ಣು ಮತ್ತು ಭಾಷೆ ಪುಸ್ತಕದಲ್ಲಿ ಅವರ ಒಟ್ಟು ನಾಲ್ಕು ಲೇಖನಗಳಿವೆ. ಅವುಗಳೆಂದರೆ,

೧. ಭಾಷಾ ಕಲಿಕೆ ಮತ್ತು ಬಳಕೆಗಳಲ್ಲಿ ಹೆಣ್ಣಿಗೆ ಇರುವ ಸವಾಲುಗಳು.

೨. ಹೆಣ್ಣಿನ ಭಾಷೆ ಮೌನವಾಗುವ ಬಗೆ.

೩. ಹೆಣ್ಣಿನ ಮೌನವು ಸ್ವಗತವಾಗುವ ಬಗೆ.

೪. ಹೆಣ್ಣಿನ ಭಾಷಾ ಸಾಮರ್ಥ್ಯ ಕಳೆದು ಹೋಗುವ ಬಗೆ.

ಲೇಖಕರು ಎರಡು ನೆಲೆಗಳಲ್ಲಿ ತಮ್ಮ ಚರ್ಚೆಯನ್ನು ಪ್ರಾರಂಭಿಸುತ್ತಾರೆ. ಅವುಗಳೆಂದರೆ,

೧. ಭಾಷೆಯಲ್ಲಿ ಗಂಡುತನ ಮತ್ತು ಹೆಣ್ಣುತನ ಎಂಬ ವಿಭಜನೆಯನ್ನು ಕುರಿತ ಚರ್ಚೆ.

೨. ಚರ್ಚಿತವಾದ ನೆಲೆಯಲ್ಲಿ ಅವೆರಡರ ನಡುವೆ ತರತಮಭಾವ ಇದೆಯೋ ಇಲ್ಲವೋ ಎಂಬುದನ್ನು ಗುರುತಿಸುವಿಕೆ.

ಕೆ.ವಿ.ನಾರಾಯಣರವರು ಕಾಳಿದಾಸನಿಂದ ಹಿಡಿದು ಆಧುನಿಕ ಭಾಷಾಶಾಸ್ತ್ರಜ್ಞರು ವಿಂಗಡಿಸಿರುವ ಭಾಷೆಯಲ್ಲಿನ ಹೆಣ್ಣು ಮತ್ತು ಗಂಡುತನದ ನೆಲೆಗಳನ್ನು ಕುರಿತು ಚರ್ಚಿಸುತ್ತಾರೆ. ಮೊದಲಿಗೆ ರೋಮನ್ ಯಾಕೊಬ್ಸನ್ ಹೇಳಿದ ಭಾಷಾ ಬಳಕೆಯ ಮೆಟಫಾರಿಕ್(ಸಾದೃಶ್ಯ ಮೂಲ) ಮತ್ತು ಮೆಟಾನಮಿಕ್(ಸಂಬಂಧ ಮೂಲ) ಚಿಂತನಾ ಕ್ರಮಗಳನ್ನು ಕುರಿತು ಚರ್ಚಿಸುತ್ತಾರೆ. ಅಂದರೆ, ಯಾವುದಾದರೂ ಎರಡು ಸಂಗತಿಗಳ ನಡುವೆ ಇರುವ ಸಾದೃಶ್ಯದ ಮೂಲಕ ಚಿಂತನೆಗಳನ್ನು ಮಾಡುವಂತಹುದು. ಅದು ಮೆಟಫಾರಿಕ್ ಚಿಂತನೆ. ಇನ್ನೊಂದು ಮೆಟನಾಮಿಕ್ ಚಿಂತನೆ. ಇದು ಸಂಬಂಧ ಮೂಲವಾದಂತಹುದು. ಎರಡು ಸಂಗತಿಗಳ ನಡುವೆ ಸಾದೃಶ್ಯ ಇರಬೇಕೆಂದಿಲ್ಲ. ಒಂದು ಇನ್ನೊಂದರೊಡನೆ ಯಾವುದೋ ಒಂದು ಬಗೆಯ ಸಂಬಂಧವನ್ನು ಕಲ್ಪಿಸಿಕೊಂಡಿರುತ್ತದೆ. ಮಾನವನ ಈ ಎರಡು ರೀತಿಯ ಗ್ರಹಿಕೆ ಮತ್ತು ಅಭಿವ್ಯಕ್ತಿಯ ಸಾಧ್ಯತೆಗಳನ್ನು ಕುರಿತು ಯಾಕೊಬ್ಸನ್ ಚರ್ಚಿಸಿದ್ದಾರೆ. ಈ ಎರಡು ಬಗೆಯ ಚಿಂತನೆಗಳನ್ನು ಸ್ತ್ರೀವಾದಿಗಳು ಸಂಬಂಧ ಮೂಲ ಚಿಂತನಾ ಕ್ರಮವನ್ನು ಹೆಣ್ಣು ಚಿಂತನಾ ಕ್ರಮವೆಂದು (ಗೈನೋ-ಸೆಂಟ್ರಿಕ್) ಸಾದೃಶ್ಯ ಮೂಲ ಚಿಂತನಾ ಕ್ರಮವನ್ನು ಪುರುಷ ಚಿಂತನಾ ಕ್ರಮವೆಂದು (ಆಂಡ್ರೋ ಸೆಂಟ್ರಿಕ್) ವಾದವನ್ನು ಮಂಡಿಸಲು ಮುಂದಾದರು. ಅವೆರಡರ ನಡುವೆ ವಿರೋಧಿ ನೆಲೆ ಇಲ್ಲ. ಪೂರಕ ನೆಲೆಗಳಿವೆ. ಇವುಗಳನ್ನು ಗಂಡಸಾದರೂ ಬಳಸಬಹುದು, ಇಲ್ಲವೇ ಹೆಂಗಸಾದರೂ ಬಳಸಬಹುದು. ಇವುಗಳನ್ನು ಶೋಷಕ ಮತ್ತು ಶೋಷಿತ ನೆಲೆಗಳೆಂದು ಸರಳೀಕರಿಸಿ ಹೇಳಲು ಬರುವುದಿಲ್ಲ[೫೯] ಎನ್ನುತ್ತಾರೆ.

ಕೆ.ವಿ.ನಾರಾಯಣರವರು ಎರಡು ಪ್ರಶ್ನೆಗಳನ್ನು ಮುಂದಿಡುತ್ತಾರೆ. ಅವುಗಳೆಂದರೆ;

೧. ಗಂಡಸರು ಬಳಸುವ ಭಾಷಾ ಪ್ರಭೇದವನ್ನೇ ಹೆಂಗಸರು ಬಳಸಬೇಕೆನ್ನುವ ಒತ್ತಾಯ ಸಮಾಜದಲ್ಲಿದೆ. ಅದರಿಂದಾಗಿ ಈ ಪರಿಸ್ಥಿತಿಯನ್ನು ಹೆಂಗಸು ಹೇಗೆ ನಿಭಾಯಿಸುತ್ತಾಳೆ?

೨. ಈ ವ್ಯತ್ಯಾಸವನ್ನು ಕಾಯ್ದುಕೊಳ್ಳುವುದು ಮತ್ತು ಕಳೆದುಕೊಳ್ಳುವುದು.

ಹೆಂಗಸರು ಮಾತನಾಡುವಾಗ ಅವರ ಮಾತು ಕೆಲವು ನಿರ್ದಿಷ್ಟವಾದ ಅರ್ಥ ಕಟ್ಟುಪಾಡುಗಳಿಗೆ ಅನುಗುಣವಾಗಿ ಬಳಕೆಯಾಗುತ್ತದೆ. ಇದನ್ನು ಶಿಷ್ಟ ಮತ್ತು ಪರಿಶಿಷ್ಟ ಎಂತಲೂ ನೋಡಬಹುದು. ಶಿಷ್ಟವಾಗಿರುವಂತಹುದು ಗಂಡಿನ ಭಾಷೆ, ಅದು ಸರ್ವತಂತ್ರ ಸ್ವತಂತ್ರ (ಅನ್‌ಮಾರ್ಕ್‌ಡ್). ಅವನು ಮಾತನಾಡುತ್ತಾ ಇದ್ದರೆ ಅದು ಗಂಡಸರ ಮಾತು ಎಂಬುದನ್ನು ವಿಶೇಷವಾಗಿ ಗಮನಿಸುವ ಅಗತ್ಯವಿರುವುದಿಲ್ಲ. ಹೆಣ್ಣಿನ ಭಾಷೆ ಅಧೀನ (ಮಾರ್ಕ್‌ಡ್). ಅಂದರೆ ಅದು ಕೆಲವು ಕಟ್ಟುಪಾಡುಗಳಲ್ಲಿ ಮಾತ್ರ ನಿರ್ದಿಷ್ಟ ಅರ್ಥಪಡೆದುಕೊಂಡಿರುತ್ತದೆ. ಕಟ್ಟುಪಾಡುಗಳಿಗೆ ಅನುಗುಣವಾಗಿ ಬಳಕೆಯಾಗುತ್ತದೆ. ಇದನ್ನು ಶಿಷ್ಟ ಮತ್ತು ಪರಿಶಿಷ್ಟ ಸಂಬಂಧದಲ್ಲಿ ನೋಡಬೇಕಾಗುತ್ತದೆಂದು ಹೇಳಿದೆ. ಶಿಷ್ಟವಾಗಿರುವುದು ಗಂಡಿನ ಭಾಷೆ. ಸಾರ್ವತ್ರಿಕವಾದದ್ದು ಯಾವುದೇ ನಿರೂಪಣೆಯಾದರೂ ಅದು ನೇರವಾಗಿ ಗಂಡಸಿಗೆ ಅನ್ವಯವಾಗುತ್ತದೆ. ಹೆಂಗಸಿಗೆ ಅನ್ವಯವಾಗುವುದಿಲ್ಲ. ಮತ್ತೆ ಹೆಂಗಸಿಗೆ ಅನ್ವಯವಾಗುವಂತೆ ವ್ಯಾಖ್ಯಾನ ಮಾಡಬೇಕಾಗುತ್ತದೆ. ಅದು ಪರಿಶಿಷ್ಟ ಸೇರ್ಪಡೆ ಆಮೇಲೆ ಬಂದು ಸೇರಬೇಕಾಗಿರುವಂತಹುದು, ಜೋಡಣೆಯಾಗಿರಬೇಕಾದಂತಹುದು[೬೦] ಎನ್ನುತ್ತಾರೆ.

ಮೇಲಿನ ವಿಚಾರಗಳ ಹಿನ್ನೆಲೆಯಲ್ಲಿ ಸಾಮಾಜಿಕವಾಗಿ ಹೆಣ್ಣಿಗೆ ಇರುವ ಅವಕಾಶಗಳ ಕೊರತೆಯನ್ನು ಗಮನಿಸಬೇಕು. ಮೊದಲು ಹೆಣ್ಣಿಗೆ ಎಲ್ಲ ಕ್ಷೇತ್ರಗಳಲ್ಲೂ ಪಾಲ್ಗೊಳ್ಳುವಿಕೆಯ ಅವಕಾಶಗಳು ಇರಲಿಲ್ಲ. ಬದಲಾದ ಕಾಲಘಟ್ಟದಲ್ಲಿ ಪಾಲ್ಗೊಳ್ಳುವಿಕೆ ಸಾಧ್ಯವಾಗಿದೆ. ಆದಕಾರಣ ಭಾಷೆಯಲ್ಲೂ ಸ್ತ್ರೀವಾಚಕಗಳು ಸೇರ್ಪಡೆಯಾಗುತ್ತಿವೆ. ಲೇಖಕರು ಇದನ್ನೇ ಪರಿಶಿಷ್ಟ ಸೇರ್ಪಡೆ ಎನ್ನುತ್ತಿದ್ದಾರೆ.

ಭಾಷಿಕ ಸಾಮರ್ಥ್ಯವನ್ನು ಪಡೆದುಕೊಳ್ಳುವ ಹಂತದಲ್ಲಿ ಹೆಣ್ಣು ಮತ್ತು ಗಂಡು ಎಂಬ ವ್ಯತ್ಯಾಸವಿಲ್ಲದೆ ಇರಬಹುದು. ಆದರೆ, ಸಾಮರ್ಥ್ಯವನ್ನು ಪಡೆದುಕೊಂಡ ಮೇಲೆ ಅದರ ಬಳಕೆಯ ನೆಲೆಗೆ ಬಂದಾಗ ಹೆಂಗಸಿನ ಪ್ರಯಾಣ ಶಬ್ದದಿಂದ ಮೌನದ ಕಡೆಗೆ ಎನ್ನುತ್ತಾರೆ. ಭಾಷಾ ಕಲಿಕೆ ಮತ್ತು ಬಳಕೆಯ ಎರಡು ನೆಲೆಗಳನ್ನು ಔಪಚಾರಿಕ ಮತ್ತು ಅನೌಪಚಾರಿಕ ವಲಯಗಳೆರಡರಲ್ಲೂ ಚರ್ಚಿಸುತ್ತಾರೆ. ಅನೌಪಚಾರಿಕ ವಲಯದಲ್ಲಿ ಹೆಣ್ಣು ಭಾಷೆಯನ್ನು ಬಳಸದೆ ಇರುವುದು ಒಂದು ನಿರ್ಬಂಧವಾದರೆ, ಬಳಸಿದರೆ ಸಾಮಾಜಿಕ ನಿರೀಕ್ಷೆ ಮತ್ತು ನಿರ್ದೇಶನಕ್ಕೆ ತಕ್ಕಂತೆ ಬಳಸಬೇಕೆಂಬ ಒತ್ತಡವಿರುವುದು ಮತ್ತೊಂದು ನಿರ್ಬಂಧ. ಇಲ್ಲಿ ಬಳಕೆಗೆ ನಿಯಂತ್ರಣಗಳಿದ್ದರೂ ಅದರ ಉಲ್ಲಂಘನೆ ಸಾಧ್ಯ ಎಂದು ಕೂಡ ಹೇಳುತ್ತಾರೆ. ಹೆಣ್ಣು ಮೌನದ ನೆಲೆಗೆ ದಾಟುವ ಹಾಗೆ ಸಾಮಾಜಿಕ ರಚನೆಗಳು ಸದಾ ಕೆಲಸ ಮಾಡುತ್ತಿರುತ್ತವೆ ಎಂಬುದನ್ನು ಗುರುತಿಸುತ್ತಾರೆ.

ಭಾಷೆಯ ಸ್ವರೂಪಕ್ಕೂ, ಅವನು ತಾಯಿಯಿಂದ ಬಿಡುಗಡೆಯನ್ನು ಪಡೆದ ಮೇಲೆ ತಂದೆ ಮತ್ತು ಕುಟುಂಬದ ಪುರುಷ ಪರಿಸರ ಅವನನ್ನು ಒಪ್ಪಿಕೊಂಡು ಸ್ವೀಕರಿಸಿದ ಮೇಲೆ ಪಡೆಯುವ ಭಾಷೆಯ ಸ್ವರೂಪಕ್ಕೂ ಖಚಿತವಾದ ವ್ಯತ್ಯಾಸಗಳಿರುತ್ತವೆ[೪೨] ಎನ್ನುತ್ತಾರೆ.

ಮಗನು ಭಾಷೆಯ ವಾಚ್ಯನೆಲೆಯ ಬಳಕೆಯಿಂದ ಸಾಂಕೇತಿಕವಾದ ಭಾಷೆಯ ಬಳಕೆಯ ನೆಲಗೆ ತಲುಪುತ್ತಾನೆ. ಯಾವುದನ್ನು ನಾವು Figurative use of language ಎಂದು ಕರೆದಿರುವೆವೋ ಆ ಕಡೆಗೆ ಅವನು ಚಲಿಸುತ್ತಾನೆ. ಭಾಷೆಗೆ ಮೇಲು ನೋಟದ ಅರ್ಥ ಒಂದಿದೆ. ಐಂದ್ರಿಯಿಕವಾದ ಒಂದು ಅರ್ಥ ಇದೆ. ಇದರ ಆಚೆಗೆ 'ಧ್ವನಿ' ಎಂದು ಕರೆಯಬಹುದಾದ, ಸಾಂಸ್ಕೃತಿಕ ಎನ್ನಬಹುದಾದ, ಅಮೂರ್ತ ಎನ್ನಬಹುದಾದ ಇನ್ನೊಂದು ನೆಲೆ ಇದೆಯೆಂದು ಹೇಳಲಾಗಿದೆಯಲ್ಲ ಅದರ ಕಡೆಗೆ ಅವನು ಚಲಿಸುತ್ತಾನೆ. ಇದನ್ನು ತಾತ್ಕಾಲಿಕವಾಗಿ 'ಹೊರಚಲನೆ' ಎಂದು ಕರೆಯುತ್ತೇನೆ.[೪೩] ಹೀಗೆ ಮಗನಿಗೆ ಒಂದು ರೀತಿಯ ಲಿಫ್ಟ್ ಸಿಗುತ್ತದೆ. ಆಗ ಅವನು ಭಾಷೆಯನ್ನು ಬಳಸುವ ರೀತಿ ಬೇರೆಯಾಗುತ್ತದೆ ಎನ್ನುತ್ತಾರೆ.

ಮಗಳಿಗೆ ತಾಯಿಯಿಂದ ಆ ರೀತಿಯ ಬಿಡುಗಡೆಯನ್ನು ಪಡೆಯಬೇಕಾದ ಒತ್ತಾಯಗಳು, ಒತ್ತಡಗಳು ಇರುವುದಿಲ್ಲ. ಆದ್ದರಿಂದಲೇ ಮಗಳು ಬಳಸುವ ಭಾಷೆಯ ಸ್ವರೂಪದಲ್ಲಿ ಹೆಚ್ಚಿನ ಬದಲಾವಣೆಗಳು ಆಗುವುದಿಲ್ಲ. ಮಗನಲ್ಲಿ ನಡೆಯುವ ಭಾಷಿಕವಾದ ಉನ್ನತೀಕರಣವು(?) ಮಗಳಲ್ಲಿ ನಡೆಯುವುದಿಲ್ಲ. ಹಾಗಾದರೆ, ಅದು ವಾಚ್ಯವಾಗಿಯೇ ಉಳಿಯುತ್ತದೆಯೇ? ಹೆಣ್ಣು ಬಳಸುವ ಭಾಷೆಯು ವಾಚ್ಯಕ್ಕೆ ಹತ್ತಿರವಾಗಿ, ಲೋಕಕ್ಕೆ ಹತ್ತಿರವಾಗಿ, ಐಂದ್ರಿಯಿಕ ಅನುಭವಗಳಿಗೆ ಹತ್ತಿರವಾಗಿ ಉಳಿಯುತ್ತದೆಯೇ? ಅದರಲ್ಲಿ ಮೂರ್ತತೆಯು ಜಾಸ್ತಿಯಾಗಿ ಅಮೂರ್ತ ಸಂಗತಿಗಳು ದೂರ ಉಳಿಯುತ್ತವೆಯೇ? ಎಂಬ ಪ್ರಶ್ನೆಗಳನ್ನು ಎತ್ತುತ್ತಾರೆ.

ತಾಯಿಯಿಂದ ದೂರ ಸರಿದು ತಂದೆಯ ಕಡೆಗೆ ಚಲಿಸುವಾಗ ಮಗನ ಭಾಷೆ ವಾಚ್ಯದಿಂದ ಸಾಂಕೇತಿಕತೆಯ ಕಡೆಗೆ ಚಲಿಸುತ್ತದೆ. ಇದನ್ನು ಭಾಷಿಕವಾದ ಉನ್ನತೀಕರಣ ಎನ್ನುತ್ತಾರೆ. ಭಾಷಿಕ ಉನ್ನತೀಕರಣ ಮಗಳಲ್ಲಿ ನಡೆಯುವುದಿಲ್ಲ. ಅದು ವಾಚ್ಯವಾಗಿಯೇ ಉಳಿಯುತ್ತದೆ. ಮಗನು ಸಹಜವಾಗಿಯೇ ತರ್ಕನಿಕಟವೂ ಬೌದ್ಧಿಕವೂ ಆದ ಭಾಷೆಯ ಬಳಕೆಗೆ ಅಭ್ಯಸ್ಥನಾಗುತ್ತಾನೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಈ ಚರ್ಚೆಯ ಪ್ರಕಾರ, ಮಗು ಭಾಷಿಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವಲ್ಲಿ ಎರಡು ಹಂತಗಳನ್ನು ಗುರುತಿಸಬಹುದು.

೧. ತಾಯಿ ಬಳಿಯಲ್ಲಿರುವಾಗಿನ ಭಾಷೆ– ವಾಚ್ಯವಾದದ್ದು.

೨. ತಂದೆಯ ಸಂಪರ್ಕ ಪಡೆದ ನಂತರದ ಭಾಷೆ– ಸಾಂಕೇತಿಕವಾದದ್ದು.

ಇಲ್ಲಿ ಎಚ್.ಎಸ್.ರಾಘವೇಂದ್ರ ರಾವ್ ಅವರು ಸಾಮಾಜೀಕರಣ ಪ್ರಕ್ರಿಯೆಯಲ್ಲಿ ತೊಡಗಿಕೊಳ್ಳುವ ಅವಕಾಶಗಳು ಪುರುಷನಿಗೆ ಮೊದಲು ದೊರಕುವುದರಿಂದ ಅವನ ಭಾಷೆ ಹೆಣ್ಣಿನ ಭಾಷೆಗಿಂತ ಭಿನ್ನವಾಗುತ್ತದೆ

ಎಂದು ಹೇಳುತ್ತಿದ್ದಾರೆ. ಆದರೆ, ಕಾಲದ ಮಿತಿಯಲ್ಲಿ ಈ ವಿಚಾರಗಳನ್ನು ಪರಿಶೀಲಿಸಬೇಕು. ಸಾಮಾಜಿಕ ವಿನ್ಯಾಸ ಬದಲಾಗುತ್ತಿರುವಲ್ಲಿ ಇಂದು ಗಂಡು-ಹೆಣ್ಣು ಇಬ್ಬರಿಗೂ ಎಲ್ಲ ರೀತಿಯ ಅವಕಾಶಗಳು ಸಮನಾಗಿ ಲಭ್ಯವಾಗುತ್ತಿವೆ ಎಂಬುದನ್ನು ಪರಿಗಣಿಸಬೇಕಾಗುತ್ತದೆ.

ಆದರೂ ಈ ಸಿದ್ಧಾಂತದಲ್ಲಿ ಕೆಲವು ಪ್ರಶ್ನೆಗಳು ಎದುರಾಗುತ್ತವೆ. ಅವುಗಳೆಂದರೆ, ಭಾಷಾ ಉನ್ನತೀಕರಣವನ್ನು ಅಳೆಯುವ ಮಾನದಂಡಗಳು ಯಾವುವು? ತರ್ಕನಿಕಟವಾಗಿ ಮಾತಾಡುವುದೇ ಭಾಷೆಯ ಉನ್ನತೀಕರಣವೇ? ವಾಚ್ಯ ನೆಲೆಯಲ್ಲಿ ಉಳಿಯುವ ಮಾತುಗಾರಿಕೆಯನ್ನು ಏನೆಂದು ವ್ಯಾಖ್ಯಾನಿಸಬೇಕು? ಹೆಣ್ಣು ತರ್ಕನಿಕಟವಾಗಿ ಮಾತನಾಡುವುದಿಲ್ಲವೇ? ಯಾವ ವರ್ಗದ ಹೆಣ್ಣಿನ ಮಾತುಗಾರಿಕೆಯನ್ನು ಗಮನಿಸುತ್ತಾ ಈ ರೀತಿಯ ಹೇಳಿಕೆಗಳನ್ನು ನೀಡಲಾಗುತ್ತಿದೆ ಎಂಬ ಪ್ರಶ್ನೆಗಳು ಎದುರಾಗುತ್ತವೆ.

ಲಿಂಗ ವಿಶಿಷ್ಟವಾದ ಭಾಷಿಕ ರಚನೆಗಳು ಇರುತ್ತವೆಯೇ ಎಂಬುದನ್ನು ಅಧ್ಯಯನ ಮಾಡಲು ಎರಡು ನೆಲೆಗಳನ್ನು ತಿಳಿಸುತ್ತಾರೆ.

೧. ಅ-ಸಂವಹನ

೨. ತಪ್ಪು ಸಂವಹನ.[೪೪]

ಒಬ್ಬರು ಹೇಳಿದ್ದು ಇನ್ನೊಬ್ಬರಿಗೆ ತಿಳಿಯುವುದೇ ಇಲ್ಲ ಅಥವಾ ಅವರು ಅದನ್ನು ತಪ್ಪಾಗಿ ಅರ್ಥಮಾಡಿಕೊಳ್ಳುತ್ತಾರೆ. ಗಂಡ-ಹೆಂಡತಿಯರ ನಡುವೆ ಅನೇಕ ಸಲ ಮನಃಸ್ತಾಪ ಬರುವುದಕ್ಕೆ ಕಾರಣ ಭಾಷೆಯನ್ನು ಅರ್ಥ ಮಾಡಿಕೊಳ್ಳದೇ ಇರುವುದೇ ಆಗಿರುತ್ತದೆ ಎನ್ನುತ್ತಾರೆ.

ಲೇಖಕರು ಭಾಷೆಯ ವಿವಿಧ ಹಂತದಲ್ಲಿನ ಲಿಂಗರಾಜಕಾರಣವನ್ನು ಕುರಿತು ಚರ್ಚಿಸುತ್ತಾರೆ. "ಭಾಷೆ ಎನ್ನುವುದು ವಾಸ್ತವವನ್ನು ಒಂದು ವೈಚಾರಿಕತೆಗೆ ಅನುಗುಣವಾಗಿ ಕಟ್ಟಿಕೊಡುವ ಬುದ್ಧಿಪೂರ್ವಕ ಪ್ರಯತ್ನ. ಪುರುಷ ಪ್ರಧಾನತೆಯ ಐಡಿಯಾಲಜಿಯು ತನಗೆ ಬೇಕಾದಂತೆ ಭಾಷೆಯನ್ನು ಕಟ್ಟುತ್ತಾ ಕೆಡವುತ್ತಾ ಹೋಗುತ್ತದೆ. ಭಾಷೆಯ ರಚನೆಯ ಹಿಂದೆ, ಗ್ರಹಿಕೆಯ ಹಿಂದೆ ಒಂದು ರಾಜಕಾರಣ ಕೆಲಸ ಮಾಡ್ತಾ ಇರುತ್ತದೆ"[೪೫] ಎನ್ನುತ್ತಾರೆ.

ಲೇಖಕರು ಭಾಷೆಗೆ ಸಂಬಂಧಿಸಿದಂತೆ ಒಂದು ಸ್ಟೇಟ್‌ಮೆಂಟನ್ನು ನೀಡುತ್ತಾರೆ. ಅದೇನೆಂದರೆ, "ನನ್ನ ಪ್ರಕಾರ ಭಾಷೆಯು ಅಧಿಕಾರದಿಂದ ರೂಪಿತವೂ ದತ್ತವೂ ಆದ ವಾಸ್ತವದ ವಿಕೃತರೂಪ. ವಿಕೃತ ಎನ್ನುವ ಪದವನ್ನು ಬಳಸುತ್ತಿರುವುದು Distorted ಎನ್ನುವ ಅರ್ಥದಲ್ಲಿ Distorated ಎಂದರೆ ತನ್ನ ಮೂಲರೂಪಕ್ಕಿಂತ ಬದಲಾದದ್ದು. ನಾವು ಒಂದು ಐಡಿಯಾ ಇಟ್ಟುಕೊಂಡು ಅದಕ್ಕೆ ತಕ್ಕಂತೆ ಭಾಷೆಯನ್ನು ಕಟ್ಟುತ್ತೇವೆ. ಹೀಗೆ ಪುರುಷ ಪ್ರಧಾನತೆಯ ಐಡಿಯಾಲಜಿಯ ಆಧಾರದ ಮೇಲೆ ಭಾಷೆಯನ್ನು ವಿಕೃತಗೊಳಿಸುವ ರಾಜಕೀಯ ಇದೆಯಲ್ಲ, ಅದನ್ನು ನಮ್ಮ ಇಂದಿನ ಪರಿಭಾಷೆಯಲ್ಲಿ Gender Politics ಅಥವಾ Sexual Politics (ಲಿಂಗಾಧಾರಿತ ರಾಜಕೀಯ) ಎಂದು ಕರೆಯಲಾಗಿದೆ[೪೬] ಎನ್ನುತ್ತಾರೆ. ನಂತರ ಲೇಖಕರು ಲಿಂಗಸೂಚಕ ಪದಗಳ ಬಳಕೆಯ ನೆಲೆಗಳನ್ನು ಮೂರು ಭಾಗಗಳಲ್ಲಿ ಚರ್ಚಿಸುತ್ತಾರೆ.

೧. ಗಂಡಸು ಮತ್ತು ಹೆಂಗಸು ಇಬ್ಬರೂ ಸೇರಿದಂತೆ ಮಾತನಾಡಬೇಕಾದಾಗ, ಗಂಡಸರಿಗೆ ಅನುಗುಣವಾದಂತಹ ವ್ಯಾಕರಣ ನಿಯಮಗಳನ್ನು, ಪ್ರತ್ಯಯಗಳನ್ನು ಬಳಸಿ ಹೆಂಗಸು ಕೂಡ ಅದರಲ್ಲಿ ಸೇರಿಕೊಂಡಿದ್ದಾಳೆ ಎನ್ನುತ್ತೇವೆ. ಅದಕ್ಕೆ ವಿರುದ್ಧವಾದ ಒಂದು ನಿದರ್ಶನವೂ ಸಿಗುವುದಿಲ್ಲ. ಇದು ಲಿಂಗಾಧಾರಿತ ತಾರತಮ್ಯಕ್ಕೆ ಸರಳವಾದ ನಿದರ್ಶನ.

೨. ನಾವು ಯಾವಾಗಲೂ ಎರಡು ಲಿಂಗಗಳಿಗೂ ಸಂಬಂಧಪಟ್ಟಿದ್ದನ್ನು ಹೇಳಬೇಕಾದರೆ ಪುರುಷ ನೆಲೆಯಿಂದ ಪ್ರಾರಂಭ ಮಾಡಿಕೊಂಡು ಅದಕ್ಕೆ ಸರಿಸಮನಾದ, ಅನುಗುಣವಾದ ಸ್ತ್ರೀ ನೆಲೆಯ ಪದವನ್ನು ಹುಡುಕುತ್ತೇವೆಯೇ ಹೊರತು ಸ್ತ್ರೀನೆಲೆಯಿಂದ ಪ್ರಾರಂಭ ಮಾಡುವುದಿಲ್ಲ. ಸಿಂಹ, ಕುರುಡ, ಹಾವಾಡಿಗ ಮುಂತಾದ ಪದಗಳಿಗೆ ಸ್ತ್ರೀವಾಚಕ ಪ್ರತ್ಯಯಗಳನ್ನು ಸೇರಿಸುತ್ತೇವೆ.

ಸ್ತ್ರೀವಾಚಕದ ಅರ್ಥ ಸಿದ್ಧವಾಗುವುದೇ ಪುರುಷವಾಚಕದ ಅರ್ಥದ ಆಧಾರದ ಮೇಲೆ. ಈಗ ರಾಜ ಅಂದ ತಕ್ಷಣ ಅದಕ್ಕೆ ವಿರುದ್ಧವಾದ ಲಿಂಗವಾಚಕವನ್ನು ಹುಡುಕಬೇಕಾದರೆ ಅದು ರಾಜನ ಹೆಂಡತಿಯೇ ಹೊರತು ರಾಜ್ಯದ ಒಡತಿಯಾಗಬಹುದಾದ ಹೆಣ್ಣಲ್ಲ ಎನ್ನುತ್ತಾರೆ. ರಾಜ ಮತ್ತು ರಾಣಿಯನ್ನು ವಿರುದ್ಧವಾದ ನೆಲೆಯಿಂದ ಗ್ರಹಿಸುವ ಗ್ರಹಿಕೆಯೇ ತಪ್ಪು ಎನಿಸುತ್ತದೆ. ರಾಜ, ರಾಣಿ ಜೈವಿಕತೆಯ ಭಿನ್ನತೆಯ ಆಧಾರದ ಮೇಲೆ ರೂಪುಗೊಂಡಿರುವ ಲಿಂಗವಾಚಕಗಳು ಎಂಬುದನ್ನು ಗಮನಿಸಬೇಕಾಗುತ್ತದೆ.

೩. ಹೆಣ್ಣಿನ ವಿಶಿಷ್ಟ ಅನುಭವಗಳ ಗೈರುಹಾಜರಿ (Invisibility of women's experience) ಹೆಣ್ಣಿನ ವಿಶಿಷ್ಟವಾದ ಅನುಭವಗಳನ್ನು ಹೇಳುವುದಕ್ಕೆ ಕನ್ನಡದಲ್ಲಿ ಇರುವ ಪದಗಳು ಎಷ್ಟು? ಯಾವುವು? ತುಂಬ ಸರಳವಾದ ಉದಾಹರಣೆಯನ್ನು ಕೊಡುತ್ತೇನೆ. 'ಚುಡಾಯಿಸುವುದು'. ಹುಡುಗರನ್ನು ಚುಡಾಯಿಸುವುದನ್ನು ಹೇಳುವ ಯಾವುದಾದರೂ ಒಂದು ಪದ ಇದೆಯೇ? ಎಂದು ಪ್ರಶ್ನೆ ಮಾಡುತ್ತಾರೆ. 'ಚುಡಾಯಿಸುವಿಕೆ' ಹುಡುಗ ಮತ್ತು ಹುಡುಗಿ ಇಬ್ಬರಿಗೂ ಅನ್ವಯವಾಗುವ ಪದ. ಹುಡುಗಿಯರಿಗೆ ಮಾತ್ರ ಅನ್ವಯಿಸುವ ಅಗತ್ಯ ಇಲ್ಲ. ಹುಡುಗಿಯರು ಹುಡುಗರನ್ನು ರೇಗಿಸುವುದಕ್ಕೆ ಚುಡಾಯಿಸುವಿಕೆ ಎಂದೇ ಕರೆಯಲಾಗುತ್ತದೆ. ಈ ಪದವನ್ನು ಲಿಂಗ ನಿರ್ದಿಷ್ಟಗೊಳಿಸುವುದು ಅಷ್ಟು ಸಮಂಜಸ ಅಲ್ಲ ಎನಿಸುತ್ತದೆ.

ಹೆಣ್ಣಿನ ವಿಶಿಷ್ಟವಾದ ಅನೇಕ ಅನುಭವಗಳಿವೆ. ಅವಳು ಅದನ್ನು ಭಾಷೆಯಲ್ಲಿ ಹೇಳಬೇಕು ಅಂತ ಪ್ರಯತ್ನಪಟ್ಟರೂ ಆಗುವುದಿಲ್ಲ. ಉದಾ: 'ಅತ್ತೆಕಾಟ' ಪದದ ಹಾಗೆ 'ಮಾವನಕಾಟ' ಪದ ಏಕೆ ಇಲ್ಲ? ಭಾಷೆ ಅದಕ್ಕೆ ಬೇಕಾದಂತಹ ಪದಗಳನ್ನೇ ಸೃಷ್ಟಿಸಿಲ್ಲವಲ್ಲ? ಎಂದು ಪ್ರಶ್ನಿಸುತ್ತಾರೆ. ಇಂತಹ ಪದಗಳು ಕೂಡ ಸೃಷ್ಟಿಯಾಗಿರುತ್ತವೆ. ಆದರೆ ಅವು ಹೆಚ್ಚು ಬಳಕೆಗೆ ಬಂದಿರುವುದಿಲ್ಲ.

ನಂತರ Parataxis, Hypotoxis ಎಂಬ ಪರಿಕಲ್ಪನೆಗಳನ್ನು ಪರಿಶೀಲಿಸುತ್ತಾರೆ. ಇವು ವಾಕ್ಯರಚನೆಯ ವಿಭಿನ್ನ ವಿಧಾನಗಳು. ಒಂದು ಸರಳ ವಾಕ್ಯದೊಳಗೆ ಅನೇಕ ಚಿಕ್ಕ ವಾಕ್ಯಗಳು ಸೇರಿಕೊಂಡು ಒಂದು ಸಂಕೀರ್ಣವೂ ದೀರ್ಘವೂ ಆದ ವಾಕ್ಯವೂ ರಚನೆಯಾಗುವ ಬಗೆಯನ್ನು Hypotoxi ಎಂದು ಕರೆಯುತ್ತಾರೆ. ಇದು ಪುರುಷರ ವಾಕ್ಯರಚನೆಯ ಲಕ್ಷಣವೆಂದು ಹೇಳಲಾಗಿದೆ. ಗಂಡಿನ ಭಾಷೆಯಲ್ಲಿ ಒಂದು ವಾಕ್ಯದ

ಒಳಗೆ ಇನ್ನೊಂದು ಚಿಕ್ಕ ವಾಕ್ಯ ಸೇರಿಕೊಂಡು ಯಾವುದನ್ನು Compound Sentence ಅಂತ ಕರೀತಿವಿ ಅಂತಹ ರಚನೆಗಳು ಹೆಚ್ಚು. Parataxis ಎಂದರೆ, ಅನೇಕ ಸರಳ ವಾಕ್ಯಗಳು ಒಂದರ ನಂತರ ಒಂದರಂತೆ ಅಥವಾ ಒಂದು ಇನ್ನೊಂದಕ್ಕೆ ಅಂಟಿಕೊಂಡು ಬರುವ ಮಾದರಿ. ಇದರದ್ದು ಸರಪಳಿ ಶೈಲಿ. ಇದು ಹೆಂಗಸರ ವಾಕ್ಯ ರಚನೆಯ ಶೈಲಿ[೪೭] ಎನ್ನುತ್ತಾರೆ.

ಬರವಣಿಗೆಗೆ ಸಂಬಂಧಪಟ್ಟಂತೆ ಚರ್ಚೆಯನ್ನು ಮುಂದುವರೆಸಿ, ಹೆಣ್ಣಿನ ಬರವಣಿಗೆಯ ಭಾಷೆಯನ್ನು 'ಹೆಣ್ಣಿನ ಭಾಷೆಯ ಪುರುಷೀಕಿರಣ'[೪೮] ಎನ್ನುತ್ತಾರೆ. ಪುರುಷನ ಭಾಷೆಯ ಲಕ್ಷಣ ಸಂಕೀರ್ಣ ರಚನೆ. ಹೆಣ್ಣಿನ ಭಾಷೆಯ ರಚನೆ ಸರಳ ರಚನೆ ಮುಂತಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಆದರೆ, ಈ ಎರಡೂ ರೀತಿಯ ಸಾಧ್ಯತೆಗಳು ಇಬ್ಬರಲ್ಲಿಯೂ ಇರುತ್ತವೆ. 'ಲಿಂಗ ರಚನೆ' ಮತ್ತು 'ಲಿಂಗ ಸಹಜತೆ' ಇವೆರಡರ ನಡುವಿನ ವ್ಯತ್ಯಾಸಗಳನ್ನು ಕುರಿತು ಚರ್ಚಿಸುತ್ತಾರೆ. ಈ ಎರಡಕ್ಕೂ ಸೂಕ್ತವಾದ ಸ್ಥಾನಗಳಿವೆಯೆಂದು ಹೇಳುತ್ತಾರೆ.

ಲಿಂಗದೇವರು ಹಳೆಮನೆಯವರು ಹೆಣ್ಣು ಮತ್ತು ಭಾಷೆ ಎಂಬ ಪುಸ್ತಕದಲ್ಲಿರುವ 'ಕಲಿಕೆ, ಬಳಕೆ ಮತ್ತು ಭಾಷೆ' ಎಂಬ ಲೇಖನದಲ್ಲಿ ಸ್ತ್ರೀವಾದದ ಚಿಂತನೆಯ ನೆಲೆಯಲ್ಲಿ ಭಾಷೆಯ ಪಾತ್ರವೇನು? ಎಂಬ ನೆಲೆಯಲ್ಲಿ ತಮ್ಮ ಚರ್ಚೆಯನ್ನು ಪ್ರಾರಂಭಿಸುತ್ತಾರೆ. ಇದುವರೆಗೆ ನಡೆದಿರುವ ಒಟ್ಟು ಚರ್ಚೆಗಳನ್ನು ನಾಲ್ಕು ಹಂತಗಳಲ್ಲಿ ಚರ್ಚಿಸುತ್ತಾರೆ.

೧. ಭಾಷೆ ಪುರುಷ ನಿರ್ಮಿತ ಎಂಬಂತಹ ಚರ್ಚೆ.

೨. ಗಂಡಸಿನ ಭಾಷೆ ಬೇರೆ ಹೆಂಗಸಿನ ಭಾಷೆ ಬೇರೆ, ಇವೆರಡಕ್ಕೂ ವ್ಯತ್ಯಾಸವಿದೆ ಎಂಬ ನೆಲೆಯ ಚರ್ಚೆ.

೩. ಭಾಷೆಯ ಒಳಗಡೆ ಇರುವಂತಹ ಲಿಂಗಭೇದವನ್ನು ನಾವು ಯಾವ ರೀತಿಯಲ್ಲಿ ಸರಿಪಡಿಸಬೇಕು ಎನ್ನುವಂತಹ ಹಂತ.

೪. ಲಿಂಗ ತಾರತಮ್ಯವನ್ನು ಮಾಡದಂತಹ ಒಂದು ತಟಸ್ಥ ಭಾಷೆಯನ್ನು ಅಥವಾ ರಾಚನಿಕ ವ್ಯವಸ್ಥೆಯನ್ನು ಸೃಷ್ಟಿ ಮಾಡಿಕೊಳ್ಳುವುದಕ್ಕೆ ಸಾಧ್ಯವೇ?[೪೯]

ಎನ್ನುವಂತಹ ವಿವಿಧ ಹಂತಗಳಲ್ಲಿನ ಚರ್ಚೆಗಳ ಬಗ್ಗೆ ವಿವರ ನೀಡುತ್ತಾರೆ. ಇದುವರೆಗೂ ನಡೆದಿರುವ ಚರ್ಚೆಗಳ ಮಿತಿಗಳನ್ನು ಗುರುತಿಸುವುದರ ಜೊತೆಗೆ ಮಾಡಬೇಕಾಗಿರುವ ಅಧ್ಯಯನಗಳ ಸಾಧ್ಯತೆಗಳ ಬಗ್ಗೆ ಸೂಚನೆ ನೀಡುತ್ತಾರೆ. ಅವುಗಳೆಂದರೆ, ಒಂದು ಸಮಾಜದ ಸಂರಚನೆಯ ಕೆಲವು ಆಯ್ಕೆಗಳನ್ನು ಮಾತ್ರ ಮಾಡಿಕೊಂಡು ಮಾತನಾಡಿದ್ದೇವೆ. ಆದರೆ ಹೆಣ್ಣಿನ ಪ್ರತಿನಿಧೀಕರಣ ಎನ್ನವುದು ಇಡೀ ಸಮಾಜದ ಒಳಗಡೆ ಎಲ್ಲ ಕಡೆ ಹಾಸುಹೊಕ್ಕಿದೆ. ಯಾವ ಯಾವ ವಲಯಗಳಲ್ಲಿ ಸ್ತ್ರೀ ಪ್ರಧಾನವಾದಂತಹ ಪಾತ್ರಗಳನ್ನು ವಹಿಸುತ್ತಿದ್ದಾಳೆ ಆ ವಲಯಗಳಲ್ಲಿ ಆಕೆ ಸೃಷ್ಟಿ ಮಾಡುತ್ತಿರುವ ಭಾಷಿಕವಾದಂತಹ ಸ್ವರೂಪಗಳು ಯಾವುವು? ನಾವು ಒಬ್ಬ ಸಾಮಾನ್ಯವಾದ ಹಳ್ಳಿಯ ಹೆಣ್ಣನ್ನು ಗಮನದಲ್ಲಿಟ್ಟುಕೊಂಡು ಚರ್ಚೆ ಮಾಡುವುದಕ್ಕೆ

ಇನ್ನೂ ಪ್ರಾರಂಭ ಮಾಡಿಲ್ಲ. ದ್ವಿಲಿಂಗಿಗಳ ಭಾಷೆ ಯಾವ ರೀತಿ ಬಳಕೆ ಆಗುತ್ತಿದೆ? ಅವರ ಸಮುದಾಯದ ಒಳಗಡೆ ಭಾಷೆಯ ಬೆಳವಣಿಗೆ ಯಾವ ರೀತಿ ಆಗುತ್ತದೆ? ಯಾವ ರೀತಿಯಲ್ಲಿ ಹುಡುಗ ಆಗಿದ್ದವನು ಹುಡುಗಿಯಾಗಿ ಪರಿವರ್ತನೆ ಆದ ಮೇಲೆ Language Transplantation ಅನ್ನುವುದು ಯಾವ ರೀತಿ ಆಗುತ್ತವೆ? ಮುಂತಾದವುಗಳನ್ನು ಅಧ್ಯಯನ ಮಾಡುವ ಅಗತ್ಯವಿದೆ ಎಂಬ ಸೂಚನೆಗಳನ್ನು ನೀಡುತ್ತಾರೆ.

ಭಾಷೆಯ ಒಳಗಡೆ ರಾಚನಿಕ ಕ್ರಮ ಇರುವುದನ್ನು ಮೊದಲಿನಿಂದ ಗಮನಿಸುತ್ತಾ ಬಂದಿದ್ದೇವೆ. ಹೀಗಾಗಿ ಬೆಳೆಯುವ ಪರಿಸರದ ಹಿನ್ನೆಲೆಯಲ್ಲಿ ಹೆಣ್ಣು ಮತ್ತು ಗಂಡು ಹೇಗೆ ಭಾಷೆಯನ್ನು ವಶಪಡಿಸಿಕೊಳ್ಳುತ್ತಾ ಗ್ರಹಿಸುತ್ತಾ ಹೋಗುತ್ತಾ ಇರುತ್ತಾರೆ ಎನ್ನುವುದನ್ನು ಇನ್ನೂ ಬಹಳ ಚೆನ್ನಾಗಿ ಮಾಹಿತಿಗಳ ಆಧಾರಗಳ ಮುಖಾಂತರ ಕಂಡುಕೊಳ್ಳುವ ಪ್ರಯತ್ನ ಮಾಡಬೇಕಾಗಿದೆ ಎನ್ನುತ್ತಾರೆ. ಹೆಣ್ಣು ಮತ್ತು ಗಂಡು ಎಂಬ ಭೇದದ ಅಂಶಗಳು ಭಾಷೆಯ ಒಳಗೆ ಹೇಗೆ ಪ್ರಕಟವಾಗುತ್ತವೆ ಎನ್ನುವುದನ್ನು ಅದರ ಸಾಂಸ್ಕೃತಿಕ, ಸಾಮಾಜಿಕ ಹಾಗೂ ರಾಜಕೀಯ ಹಿನ್ನೆಲೆಗಳಲ್ಲಿ ಆಳವಾಗಿ ಅಧ್ಯಯನ ಮಾಡಬೇಕು ಎನ್ನುತ್ತಾರೆ.

ಸಮಾಜ ಅಥವಾ ಕುಟುಂಬ ಮಹಿಳೆಯ ಮೇಲೆ ಹಾಕಿರುವ ನಿಯಂತ್ರಣ ಆ ನಿಯಂತ್ರಣದ ಸನ್ನಿವೇಶದಲ್ಲಿ ಮಹಿಳೆ ಭಾಷೆಯ ಎಲ್ಲ ರೀತಿಯ ಸಂರಚನೆಯನ್ನು ಬಳಸುವ ಪ್ರಯತ್ನ ಮಾಡುವುದಿಲ್ಲ. ಅವಳು ತನ್ನದೇ ಆದಂತಹ ಒಂದು Space ಸಿಕ್ಕಾಗ ಅಥವಾ ತನ್ನ ರೀತಿಯ ಮಹಿಳೆಯರು ಸಿಕ್ಕಾಗ ಎಲ್ಲರೂ ಸೇರಿ ತಮ್ಮ ಅಭಿಪ್ರಾಯಗಳನ್ನು ವಿನಿಮಯ ಮಾಡಿಕೊಳ್ಳುವ ಸಂದರ್ಭದಲ್ಲಿ ಭಾಷೆಯ ಎಲ್ಲ ರಚನೆಯನ್ನು ಅತ್ಯಂತ ಸ್ವಾತಂತ್ರ್ಯವಹಿಸಿ ಬಳಸುತ್ತಾಳೆ. ಅವರಿಗೆ ಬೇಕಾದ ಅವಕಾಶವನ್ನು ಒದಗಿಸಿದಾಗ ಭಾಷೆಯನ್ನು ಅವರು ಪುರುಷರಿಗೆ ಸಮಾನವಾಗಿ ಬಳಸಿಕೊಳ್ಳುವುದಕ್ಕೆ ಸಾಧ್ಯತೆ ಇದೆ. ಆದರೆ ಪ್ರತ್ಯಕ್ಷವಾಗಿ ಅವರ ಮೇಲೆ ಹಾಕಿದ ನಿಯಂತ್ರಣದಿಂದಾಗಿ ಅವರು ಆ ಭಾಷೆಯನ್ನು ಸ್ವತಂತ್ರವಾಗಿ ನಿರ್ಭಿಡೆಯಿಂದ ಎಲ್ಲ ಸಂದರ್ಭದಲ್ಲಿ ಬಳಸುವುದಕ್ಕೆ ಆಗುವುದಿಲ್ಲ ಎನ್ನುತ್ತಾರೆ.

ಲಿಂಗಭೇದ ಅನ್ನುವುದು ಒಂದು ರೀತಿಯಲ್ಲಿ ಮನುಷ್ಯನ ಬೆಳವಣಿಗೆಗೆ ಅಥವಾ ಹೆಣ್ಣಿನ ಬೆಳವಣಿಗೆಗೆ ಒಂದು ಹಂತದಲ್ಲಿ ನಾವು ನೈಸರ್ಗಿಕ ನೆಲೆಯಿಂದ ಮಾಡುವಂಥ ಭೇದವಾದರೆ, Language and Sexuality ಇನ್ನೂ ಒಂದು ಆಯಾಮ ಮುಂದಕ್ಕೆ ತೆಗೆದುಕೊಂಡು ಹೋಗಿ, ನಮ್ಮ ಸಮಾಜದ ಒಳಗಡೆ ಇರುವ Power Structure ಜೊತೆಯಲ್ಲಿ ಅದನ್ನು Relate ಮಾಡಿ ಭಾಷೆಯನ್ನು ಹೇಗೆ ಬಳಸುತ್ತೇವೆ ಎನ್ನುವುದನ್ನು ಚರ್ಚೆ ಮಾಡುವ ಅಂಶವಾಗಿ ಸಹ ನಾವು ಅದನ್ನು ಬಳಸಿಕೊಳ್ಳುತ್ತಿದ್ದೇವೆ ಎನ್ನುತ್ತಾರೆ.

ಶಿವಾನಂದ ಎಸ್.ವಿರಕ್ತಮಠ ಅವರು ಹೆಣ್ಣು ಮತ್ತು ಭಾಷೆ ಎಂಬ ಪುಸ್ತಕದಲ್ಲಿನ 'ಭಾಷೆಯಲ್ಲಿ ಹೆಣ್ಣಿನ ಪ್ರತಿನಿಧೀಕರಣ' ಎಂಬ ಲೇಖನದಲ್ಲಿ "ಭಾಷಿಕ ಲಿಂಗತಾರತಮ್ಯದ ಸ್ವರೂಪವನ್ನು ಲಿಂಗೀಯ ತತ್ವದ ನೆಲೆಯಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ"[೩೦] ಎನ್ನುತ್ತಾರೆ. ಈ ಲಿಂಗೀಯ ತತ್ವದ ನೆಲೆ ಯಾವುದು? ಸಮಾಜದ ಪೂರ್ವಸಿದ್ಧ ನೆಲೆಗಳ ಮುಖಾಂತರವೇ ಸಮಸ್ಯೆಗಳ ಒಳಪ್ರವೇಶ ಸೂಕ್ತವೇ? ಎಂಬಂತಹ ಪ್ರಶ್ನೆಗಳು ಎದುರಾಗುತ್ತವೆ.

ಭಾಷೆಯ ಬಳಕೆಯ ಹಿಂದೆ ಐಡಿಯಾಲಜಿ ಇರುತ್ತವೆ. ಯಾವುದೇ ಸಮುದಾಯದ ಭಾಷೆಯನ್ನು ನೋಡಿದಾಗಲೂ ಅಲ್ಲಿ ಆ ಸಮುದಾಯದ ವಿಚಾರಧಾರೆಗಳು ದೃಷ್ಟಿಕೋನಗಳಲ್ಲದೆ, ಸಂಸ್ಕೃತಿವಿಶಿಷ್ಟ ಸಂಗತಿಗಳಾದ ಮೌಲ್ಯವ್ಯವಸ್ಥೆ, ಅಲ್ಲಿನ ಸಂಪ್ರದಾಯಗಳು, ಆಚರಣಾಲೋಕ ವಿಧಿನಿಷೇಧಗಳು ಮುಂತಾದವುಗಳೆಲ್ಲವನ್ನು ಆ ಭಾಷಿಕ ವ್ಯವಸ್ಥೆ ಹೊತ್ತು ತಂದಿರುತ್ತದೆ. ಹೀಗಾಗಿ ಭಾಷಿಕ ಸ್ವರೂಪದಲ್ಲಿ ಕೇವಲ ಮುಕ್ತವಾದ, ದೃಷ್ಟಿಕೋನ ರಹಿತವಾದ ಸಂಪರ್ಕ ಮಾಧ್ಯಮವಾಗಿಯಷ್ಟೇ ಕೆಲಸ ಮಾಡುವುದಿಲ್ಲ. ಬದಲಾಗಿ ಸಂಸ್ಕೃತಿಯ ಗೃಹೀತಗಳು ಕೂಡಾ ಆಯಾ ಭಾಷಿಕ ಸ್ವರೂಪದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿರುತ್ತವೆ. ಆಯಾ ಸಾಮಾಜಿಕ ಗುಂಪಿನ ವಾಸ್ತವಿಕ ಬದುಕಿನಲ್ಲಿ ಯಾವ ಯಾವ ಶ್ರೇಣೀಕರಣ ವ್ಯವಸ್ಥೆಗಳು ಕೆಲಸ ಮಾಡುತ್ತಿರುತ್ತವೆಯೋ ಅವೆಲ್ಲವೂ ಇಲ್ಲಿ ನೇರವಾಗಿ ಪ್ರಕಾಶಿಸಲ್ಪಡುತ್ತವೆ ಎನ್ನುತ್ತಾರೆ.

ಗಂಡಸನ್ನು ಭಾಷಿಕ ರಚನಾ ವ್ಯವಸ್ಥೆ Protect ಮಾಡಲು ಬಯಸುತ್ತದೆ. ಇನ್ನೊಂದೆಡೆ ಹೆಣ್ಣನ್ನು ಸಾಧ್ಯವಾದ ಕಡೆಗಳಲ್ಲೆಲ್ಲ Disconnect ಮಾಡುತ್ತಾ ಸಾಗುತ್ತದೆ ಎನ್ನುತ್ತ, ಮದುವೆಯ ವೇಳೆಯಲ್ಲಿನ ಆಕೆಯ ಹೆಸರು ಬದಲಾವಣೆಯ ಪ್ರಕ್ರಿಯೆಯನ್ನು ಉದಾಹರಿಸುತ್ತಾರೆ. ತವರು ಮನೆಯ ಚಹರೆಗಳೆಲ್ಲವೂ ಪಲ್ಲಟಗೊಳ್ಳುವ ಸಾಂಕೇತಿಕತೆ ಈ ಹೆಸರು ಬದಲಾಯಿಸುವ ಪ್ರಕ್ರಿಯೆಯಲ್ಲಿ ಕೂಡಾ ಕಾಣದೊರೆಯುತ್ತದೆ. ತವರು ಮನೆಯ ಭೌತಿಕ, ಮಾನಸಿಕ ಮತ್ತು ಭಾಷಿಕ ಚಹರೆಗಳೆಲ್ಲವನ್ನು ತೊಡೆದುಹಾಕುವ ನೆಲೆಯಾಗಿಯೂ ಇದನ್ನು ಗ್ರಹಿಸಬಹುದಾಗಿದೆ. ಭಾಷಿಕ ಸಂಕೇತವೂ ಇದನ್ನೇ ಧ್ವನಿಸುತ್ತದೆ. ಹೆಣ್ಣಿನ ಹೆಸರು ಬದಲಾದ ಹಾಗೆ ಗಂಡಿನ ಹೆಸರು ಎಲ್ಲೂ ಬದಲಾಗುವುದಿಲ್ಲ ಎನ್ನುತ್ತಾರೆ.

ಲೇಖಕರು ಫ್ರೆಂಚ್ ಸ್ತ್ರೀವಾದಿಗಳ 'ಮ್ಯಾನ್ ಮೇಡ್ ಲಾಂಗ್ವೇಜ್' ಎಂಬ ವಾದವನ್ನು ಒಪ್ಪಿದಂತೆ ಕಾಣುತ್ತದೆ. ಸಮಾಜದಲ್ಲಿನ ಒಂದು ಅಧಿಕಾರ ಕೇಂದ್ರ ಮಾತ್ರವೇ ಭಾಷೆಯನ್ನು ಸೃಷ್ಟಿಸಿ, ಬಳಸಲು ಸಾಧ್ಯವಿಲ್ಲ. ಏಕೆಂದರೆ, ಇಡೀ ಸಮಾಜ ನಿರಂತರವಾಗಿ ಭಾಷೆಯ ಸೃಷ್ಟಿಕ್ರಿಯೆ ಮತ್ತು ಬಳಸುವಿಕೆಯಲ್ಲಿ ಪಾಲ್ಗೊಳ್ಳುತ್ತಿರುತ್ತದೆ. ಹೆಣ್ಣನ್ನು ಕೆಲವು ವಲಯಗಳಿಂದ ಹೊರಗಿಡಲಾಗಿತ್ತು ಎಂದ ಮಾತ್ರಕ್ಕೆ ದಿನನಿತ್ಯದ ಭಾಷೆಯನ್ನು ಬಳಸಲಿಲ್ಲವೆಂದು ಹೇಳಲಾಗದು. ಮನುಷ್ಯನ ಮೂಲ ಕುಟುಂಬ ವ್ಯವಸ್ಥೆ ಮಾತೃಸ್ಥಾನೀಯವಾದದ್ದು. ಆ ವ್ಯವಸ್ಥೆಯಲ್ಲಿ ಹೆಣ್ಣೇ ಪ್ರಧಾನ ಪಾತ್ರ ವಹಿಸಿರುತ್ತಾಳೆ. ಭಾಷಾ ಸೃಷ್ಟಿ ಕ್ರಿಯೆಯಲ್ಲೂ ಪಾಲುದಾರಳಾಗಿರುತ್ತಾಳೆ. ಅನಂತರದ ದಿನಗಳ ಸಮಾಜದಲ್ಲಿ ಪುರುಷ ಪ್ರಾಧಾನ್ಯತೆ ಹೆಚ್ಚಿದಂತೆ ಭಾಷೆಯಲ್ಲೂ ಅದರ ಪ್ರಭಾವ ಉಂಟಾಗಿರಬಹುದು. ಸಮಾಜದ ಸಂರಚನೆಯೊಳಗೆ ಕೇವಲ ಲಿಂಗ ಸಂಬಂಧಿ ನೆಲೆಯಲ್ಲಿ ಭಿನ್ನತೆಯನ್ನು ಗುರುತಿಸುವುದು ಮುಖ್ಯವಲ್ಲ. ಅದು ವರ್ಗಾಧಾರಿತ, ವರ್ಣಾಧಾರಿತ, ಉದ್ಯೋಗಾಧಾರಿತ ಹಾಗೂ ವಿದ್ಯಾಧಾರಿತವಾಗಿ ಬದಲಾವಣೆಯನ್ನು ಪಡೆಯುತ್ತಲೇ ಇರುತ್ತದೆ. ಲೇಖಕರು ಹೇಳುವಂತೆ "ಸಾಮಾಜಿಕ ಸಂರಚನೆಯಲ್ಲಿ ಹೆಣ್ಣು ಯಾವಾಗಲೂ ತನ್ನ ಗಂಡನನ್ನು ಸಂಬೋಧಿಸುವಾಗ ಗೌರವಸೂಚಕ ಮಾತ್ರವನ್ನಷ್ಟೇ ಬಳಸುತ್ತಾಳಲ್ಲದೆ, ಇದಕ್ಕೆ ವಿರುದ್ಧವಾಗಿ ಗಂಡು ಬಹುತೇಕವಾಗಿ ಹೆಂಡತಿಯ ಹೆಸರನ್ನು ಕೆಡಿಸಿಯೇ, ಕುರೂಪಗೊಳಿಸಿಯೇ ಹೇಳುವುದುಂಟು. ಗಂಡು ಹೀಗೆಯೇ ಹೇಳಬೇಕು, ಹೆಣ್ಣು ಮಾತ್ರ ಗೌರವಸೂಚಕವಾಗಿಯೇ ಸಂಬೋಧಿಸಬೇಕೆಂಬ ಅಘೋಷಿತ

ಒಪ್ಪಂದವಿರುವಂತೆ ಎಲ್ಲಾ ಕಡೆಯೂ ಗೋಚರವಾಗುತ್ತದೆ"[೫೧] ಎನ್ನುತ್ತಾರೆ. ಆದರೆ ಒಬ್ಬ ಹಳ್ಳಿಯ ಅಥವಾ ಕೆಳವರ್ಗದ ಹೆಣ್ಣನ್ನು ಗಮನದಲ್ಲಿಟ್ಟುಕೊಂಡು ಅವಳ ಭಾಷಿಕ ಅಧ್ಯಯನ ಕೈಗೊಂಡರೆ ಲೇಖಕರ ನಿಲುವುಗಳಿಗೆ ಭಿನ್ನವಾದ ಉದಾಹರಣೆಗಳು ದೊರೆಯುತ್ತವೆ.

ಕೆಳವರ್ಗದ ಹೆಣ್ಣು ತನ್ನ ಗಂಡನಿಗೆ ಏಕವಚನವನ್ನೇ ಉಪಯೋಗಿಸುತ್ತಾಳೆ. ಪ್ರೇಮ ವಿವಾಹವಾದ ಎಷ್ಟೋ ದಂಪತಿಗಳು ಕೂಡ ಪರಸ್ಪರ ಏಕವಚನವನ್ನು ಉಪಯೋಗಿಸುತ್ತಾರೆ. ಇಂತಹ ಗಂಡ ಹೆಂಡತಿಯರ ನಡುವೆ ಆಗುವಂತಹ ಸಂವಾದದ ಭಾಷಾ ಬಳಕೆ ಭಿನ್ನವಾಗಿರುತ್ತದೆ. ಸ್ತ್ರೀವಾದಿ ಭಾಷಿಕ ನಿಲುವುಗಳೆಲ್ಲವೂ ಸಮಾಜ ರಚನೆಯ ಒಂದು ಭಾಗದ ಕೆಲವು ಆಯ್ಕೆಗಳನ್ನು ಮಾತ್ರ ಮಾಡಿಕೊಂಡು ವಾದಗಳನ್ನು ಮಂಡಿಸುತ್ತಿವೆ ಎನಿಸುತ್ತದೆ.

ಒಟ್ಟಾರೆ ಈ ಲೇಖನದಲ್ಲಿ "ಭಾಷಿಕ ರಚನಾ ಸ್ವರೂಪಗಳು ಎಲ್ಲಾ ಬಗೆಯ ಹೆಣ್ಣಿನ ಹೀನ ಸ್ಥಿತಿಯನ್ನು ಕೂಡ ಪ್ರತಿನಿಧಿಸುತ್ತವೆ"[೫೨] ಎಂಬ ಲೇಖಕರ ತೀರ್ಮಾನವನ್ನು ಒಪ್ಪಲಾಗದು. ಭಾಷಾ ರಚನಾ ರೂಪ ತಾರತಮ್ಯದ ನೆಲೆಯಲ್ಲಿ ರಚಿತವಾಗಿಲ್ಲ. ಅದರ ಬಳಕೆಯ ನೆಲೆಯಲ್ಲಿ ಮಾತ್ರ ಆ ಸಮಾಜದ ಸಂರಚನೆಯಂತೆ ಲಿಂಗಭಿನ್ನತೆ ಭಾಷೆಯಲ್ಲೂ ವ್ಯಕ್ತವಾಗುತ್ತದೆ ಎಂದು ಹೇಳಬಹುದು.

ಡಿ. ಪಾಂಡುರಂಗಬಾಬು ಅವರು ಹೆಣ್ಣು ಮತ್ತು ಭಾಷೆ ಎಂಬ ಪುಸ್ತಕದಲ್ಲಿರುವ 'ಸಾಮಾಜಿಕ ಸಂವಹನ-ಲಿಂಗತಾರತಮ್ಯ, ಭಿನ್ನತೆ' ಎಂಬ ಲೇಖನದಲ್ಲಿ ಕೆಲವು ಮುಖ್ಯವಾದ ಅಭಿಪ್ರಾಯಗಳನ್ನು ಗಮನಿಸಬಹುದು; ಸಾಮಾಜಿಕವಾದ ಸಂವಹನಗಳಲ್ಲಿ, ಅವಕಾಶಗಳಲ್ಲಿ ಸಾಮಾಜಿಕ ನಿರ್ಬಂಧಗಳೂ ಇರುತ್ತವೆ. ಈ ನಿರ್ಬಂಧಗಳು ಬಹುಪಾಲು ಲಿಂಗಾಧಾರಿತವಾಗಿ ನಿಯಂತ್ರಿಸಲ್ಪಡುತ್ತವೆ. ಹೀಗೆ ರೂಪುಗೊಂಡಿರುವ ಅಂಶಗಳೆಲ್ಲ ತಾರತಮ್ಯ ನಿರ್ವಹಣೆಗಾಗಿಯೇ ರೂಪುಗೊಂಡಿಲ್ಲ. ಎಷ್ಟೋ ವೇಳೆ ಭಿನ್ನತೆಯ ಕಾರಣಕ್ಕೆ ಮತ್ತು ಸಾಮಾಜಿಕವಾದ ತಾತ್ಕಾಲಿಕ ಸಾಂದರ್ಭಿಕ ವಿಷಯ ಸ್ಥಿತಿಯಿಂದಾಗಿ ರೂಪುಗೊಂಡ ಮಾದರಿಗಳು ಕಾಲಕ್ರಮೇಣ ತಾರತಮ್ಯ ನಿರ್ವಹಣಾ ಮಾದರಿಗಳಾಗಿ ರೂಪುಗೊಂಡಿರುವ ಸಾಧ್ಯತೆಗಳನ್ನು ಗುರುತಿಸುತ್ತಾರೆ.

ಸಂವಹನದ ವಿವಿಧ ಆಕರಗಳಾದ ವ್ಯಕ್ತಿನಾಮಗಳು, ಸಂಬಂಧಸೂಚಕಗಳು, ಸಂಬೋಧನಾ ರೂಪಗಳು, ಬೈಗುಳಗಳಲ್ಲಿ ಲಿಂಗಭಿನ್ನತೆಯ ನೆಲೆಗಳನ್ನು ಗುರುತಿಸುತ್ತಾರೆ. ಸಾಮಾಜಿಕವಾಗಿ ರೂಪುಗೊಂಡಿರುವ ಲಿಂಗತಾರತಮ್ಯವು ಸಂವಹನದ ವಿವಿಧ ಆಕಾರಗಳಲ್ಲಿ ವ್ಯಕ್ತವಾಗುತ್ತದೆ. ಆದರೆ, ಸಂವಹನದ ಆಕರ ಅಥವಾ ಪರಿಕರಗಳೇ ತಾರತಮ್ಯದ ಹುಟ್ಟಿಗೆ ಮತ್ತು ಪೋಷಣೆಗೆ ಕಾರಣವಲ್ಲ ಎಂದು ಹೇಳುತ್ತಾರೆ. ಇವರ ವಾದದ ಒಟ್ಟು ಸಾರವೆಂದರೆ ಲಿಂಗತಾರತಮ್ಯದ ಮೂಲ ನೆಲೆ ಇರುವುದು ಸಾಮಾಜಿಕ ಸಂರಚನೆಯ ಒಡಲಿನಲ್ಲಿ. ಸಂವಹನ ಆಕರಗಳು ಸ್ವಯಂ ತಾರತಮ್ಯ ರೂಪಿಸುವ ಸಾಧನಗಳಲ್ಲ. ಆದರೆ, ಸಾಮಾಜಿಕ ಸಂರಚನೆಯಲ್ಲಿ ಆಗುವ ಬದಲಾವಣೆಗಳೊಂದಿಗೆ ಸಂವಹನ ಆಕರಗಳ ಸ್ವರೂಪದಲ್ಲಿ ಬದಲಾವಣೆ ಉಂಟಾಗುತ್ತದೆ ಎಂಬುದಾಗಿದೆ.

'ಲಿಂಗತಾರತಮ್ಯದ ಸ್ತ್ರೀವಾದಿ ಗ್ರಹಿಕೆ–ಭಾಷಿಕ ಆಕರಗಳ ಬಳಕೆಯ ಸವಾಲುಗಳು' ಎಂಬ ಡಿ. ಪಾಂಡುರಂಗಬಾಬುರವರ ಲೇಖನದಲ್ಲಿ ಸ್ತ್ರೀವಾದಿ ಗ್ರಹಿಕೆಯು ಭಾಷಿಕ ಆಕರಗಳನ್ನು ತಮ್ಮ ವಾದ ಮಂಡನೆಗೆ ಪೂರಕವಾಗಿ ಬಳಸಿಕೊಳ್ಳುತ್ತಿರುವ ವಿವಿಧ ನೆಲೆಗಳನ್ನು ಪರಾಮರ್ಶಿಸುತ್ತಾರೆ. ಸ್ತ್ರೀವಾದಿ ಚಿಂತನೆಗಳು ಭಾಷೆಯು ಲಿಂಗತಾರತಮ್ಯವನ್ನು ಪೋಷಿಸುವ, ನಿರ್ವಹಿಸುವ ಕಾಯ್ದುಕೊಳ್ಳುವ ಸಾಧನವಾಗಿದೆ ಎಂಬಂತಹ ವಾದಗಳನ್ನು ಲೇಖಕರು ಚರ್ಚೆಗೆ ಒಳಪಡಿಸುತ್ತಾರೆ.

ಲಿಂಗತಾರತಮ್ಯವನ್ನು ನಿರ್ವಹಿಸುವ, ಬೆಳೆಸುವ, ಕಾಯ್ದುಕೊಳ್ಳುವ ಸಾಧನವಾಗಿ ಭಾಷೆಯನ್ನು ಪರಿಭಾವಿಸುವಾಗ ತಮ್ಮ ಗ್ರಹಿಕೆಗಳನ್ನು ಸಾರ್ವತ್ರಿಕವಾಗಿ ಜಗತ್ತಿನ ಎಲ್ಲ ಭಾಷೆಗಳಿಗೂ ಏಕಾಕಾರದಲ್ಲಿ ಅನ್ವಯಿಸಿ ತಮಗೆ ಬೇಕಾದ ಉದಾಹರಣೆಗಳನ್ನು ಹುಡುಕುವ, ವಿವರಿಸುವ ಪ್ರಯತ್ನ ಮಾಡುತ್ತಿರುವುದು ಪರಿಶೀಲನೆಗೆ ಒಳಪಡಬೇಕಾಗಿದೆ. ಯಾಕೆಂದರೆ ಇಂತಹ ಉದಾಹರಣೆಗಳ ಮೂಲಕ ಸ್ತ್ರೀವಾದ ಕಟ್ಟುವ ತಾತ್ವಿಕತೆ ಒಂದು ಭಾಷೆಯ ಚೌಕಟ್ಟಿಗೆ ಲಿಂಗತಾರತಮ್ಯ, ಅಸಮಾನತೆಯ ಲಕ್ಷಣಗಳನ್ನು ಆರೋಪಿಸುತ್ತದೆ. ಇಂತಹ ನಿರ್ಣಯಗಳಿಗೆ ಬರುವಾಗ ಆ ಭಾಷೆಯ ಬಹುತ್ವದ ಸಮಾನಾಂತರ ಬಳಕೆಯ ವೈವಿಧ್ಯತೆಗಳನ್ನು ಪರಿಶೀಲಿಸಿರುವ ಸಂಭವ ಕಡಿಮೆ[೫೩] ಎನ್ನುತ್ತಾರೆ.

ಒಂದು ಭಾಷೆಯ ಕೆಲವು ಅಸಮಾನತೆಯ ಉದಾಹರಣೆಗಳನ್ನು ಒಟ್ಟಾರೆ ಆ ಭಾಷಿಕ ಸಮುದಾಯದ ಪ್ರತಿನಿಧೀಕರಣವೆಂಬಂತೆ ಮಂಡಿಸುತ್ತಿರುವುದನ್ನು ಮತ್ತು ಸ್ತ್ರೀವಾದಿಗಳ ಏಕಾಕಾರದ ನಿಲುವುಗಳನ್ನು ಪ್ರಶ್ನಿಸುತ್ತಾರೆ. "ಒಂದು ಭಾಷಿಕ ಸಮುದಾಯದ ಚಹರೆಗಳು ಸಾಂಸ್ಕೃತಿಕ ತಿಳಿವಳಿಕೆಗಳು ಲೋಕದೃಷ್ಟಿಗಳು ಬಹುತ್ವದ ನೆಲೆಯಲ್ಲಿರುತ್ತವೆ. ಒಂದು ಭಾಷಿಕ ಸಮುದಾಯ ಹಲವು ಸಮಾನಾಂತರ ಪರ್ಯಾಯ ಭಿನ್ನ ವಿಚಾರಧಾರೆಗಳ ಕಟ್ಟು ಎನ್ನುವುದನ್ನು ಸ್ಪಷ್ಟಪಡಿಸಿಕೊಳ್ಳಬೇಕು"[೫೪] ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ.

ಸ್ತ್ರೀಯರ ಭಾಷಿಕ ಕೊರತೆಗಳನ್ನು ಹೇಳುತ್ತಿರುವ ಸ್ತ್ರೀವಾದಿಗಳಿಗೆ "ಭಾಷೆಯಲ್ಲಿ ಕಾಣಿಸುತ್ತಿರುವ ತೆರವುಗಳು ಒಂದು ಸಾಮಾಜಿಕ ಸಂಗತಿಯ ಸೂಚಕಗಳಷ್ಟೇ ಹೊರತು ಭಾಷಿಕ ಕೊರತೆಯನ್ನು ಹೇಳುತ್ತಿಲ್ಲ ಹಾಗೆ ಹೊಸ ರಚನೆಗಳನ್ನು ಸೃಷ್ಟಿಸಿಕೊಳ್ಳಬೇಕಾದ ಒತ್ತಾಯಗಳು ರೂಪುಗೊಂಡಂತೆ ಸಹಜವಾಗಿಯೇ ಸರಳ ವಿಧಾನಗಳ ಮೂಲಕ ಭಾಷೆ ಇಂತಹ ರಚನೆಗಳನ್ನು ಪಡೆಯುತ್ತವೆ"[೫೫]ಎನ್ನುತ್ತಾರೆ.

ಪಿ. ಮಹದೇವಯ್ಯ ಅವರು ಹೆಣ್ಣು ಮತ್ತು ಭಾಷೆ ಪುಸ್ತಕದಲ್ಲಿರುವ 'ಭಾಷಾ ಬಳಕೆಯಲ್ಲಿ ವ್ಯತ್ಯಾಸ' ಎಂಬ ಲೇಖನದಲ್ಲಿ ಭಾಷಾ ಬಳಕೆಯ ವ್ಯತ್ಯಾಸವನ್ನು ಎರಡು ನೆಲೆಗಳಲ್ಲಿ ಗುರುತಿಸುತ್ತಾರೆ.

೧. ಹೆಣ್ಣೇ ಭಾಷೆಯನ್ನು ಬಳಕೆ ಮಾಡುವಾಗ ಕಾಣಿಸಿಕೊಳ್ಳುವ ಭಾಷಿಕ ವ್ಯತ್ಯಾಸ.

೨. ಹೆಣ್ಣನ್ನು ಕುರಿತು ಭಾಷೆಯ ಬಳಕೆಯಲ್ಲಿನ ಲಿಂಗತಾರತಮ್ಯ.[೫೬]

ವಿವಿಧ ಸಾಮಾಜಿಕ ಸಂದರ್ಭಗಳ ಪ್ರಭಾವದಿಂದ ಕಂಡುಬರುವ ಭಾಷೆಯಲ್ಲಿನ ವ್ಯತ್ಯಾಸ, ಅದರಲ್ಲೂ ಒಂದೇ ಸಾಮಾಜಿಕ ಸಂದರ್ಭದಲ್ಲಿ ಹೆಣ್ಣೇ ಬಳಕೆ ಮಾಡುವ ಭಾಷೆಯಲ್ಲಿ ಗಂಡಿನ ಭಾಷೆಗಿಂತ ಭಿನ್ನವಾಗಿರುವುದು ಮೊದಲನೆಯ ಮಾದರಿಯಲ್ಲಿ ಕಂಡುಬರುತ್ತದೆ. ಎರಡನೇ ಮಾದರಿಯಲ್ಲಿ ಹೆಣ್ಣನ್ನು ಕುರಿತು ಗಂಡು ಅಥವಾ ಹೆಣ್ಣೇ ಬಳಕೆ ಮಾಡುವಾಗ ಉಂಟಾಗುವ ಲಿಂಗ ತಾರತಮ್ಯವನ್ನು ಭಾಷಾ ಬಳಕೆಯಲ್ಲಿ ನೋಡಬಹುದಾಗಿದೆ ಎನ್ನುತ್ತಾರೆ.

ಹೆಣ್ಣಿನ ಮತ್ತು ಗಂಡಿನ ಮಾತಿನಲ್ಲಿ ಭಾಷೆಯ ವಿವಿಧ ಹಂತಗಳಾದ ಧ್ವನಿ, ಪದ, ವಾಕ್ಯ ಮತ್ತು ಶಬ್ದಕೋಶಗಳಲ್ಲಿ ಕಂಡುಬರುವ ವ್ಯತ್ಯಾಸಗಳನ್ನು ವಿವಿಧ ಅಧ್ಯಯನಗಳ ಹಿನ್ನೆಲೆಯಲ್ಲಿ ಉದಾಹರಣೆ ಸಹಿತ ವಿವರಿಸುತ್ತಾರೆ. ಒಂದು ನಿರ್ದಿಷ್ಟ ಸಮಾಜದಲ್ಲಿ ಹೆಣ್ಣು ಮತ್ತು ಗಂಡಿನ ಭಾಷಾ ಬಳಕೆಯಲ್ಲಿ ವೈವಿಧ್ಯತೆ ಕಂಡು ಬರುತ್ತದೆಯೇ ವಿನಾ ಅರ್ಥದ ನೆಲೆಯಲ್ಲೇನೂ ಬದಲಾವಣೆ ಆಗುವುದಿಲ್ಲ. ಇಂತಹ ಭಾಷಾ ವೈವಿಧ್ಯತೆಯನ್ನು ವಿವರಿಸುವುದು ಹೇಗೆ? ಈ ರೀತಿ ಭಾಷಾ ಬಳಕೆಯಲ್ಲಿ ಲಿಂಗ ಭಿನ್ನತೆ ಕಂಡುಬರುವುದಕ್ಕೆ ಕಾರಣ ಭಾಷಿಕ ಭಿನ್ನಾಂಶಗಳನ್ನು ಸಾಮಾಜಿಕ ಭಿನ್ನಾಂಶಗಳು ನಿಯಂತ್ರಿಸುತ್ತಿರುವುದು ಎಂಬಂತಹ ನಿಲುವನ್ನು ವ್ಯಕ್ತಪಡಿಸುತ್ತಾರೆ.

ಸಾಂಬಮೂರ್ತಿ ಅವರ 'ಭಾಷಾ ಬಳಕೆಯ ಲಿಂಗಸಂಬಂಧಿ ಆಯಾಮಗಳು ಅನೌಪಚಾರಿಕ ನೆಲೆಯಲ್ಲಿ' ಎಂಬ ಲೇಖನದಲ್ಲಿ ಅನೌಪಚಾರಿಕ ನೆಲೆಯಲ್ಲಿ ನಡೆಯುವ ಭಾಷೆಯ ಲಿಂಗ ಸಂಬಂಧಿ ಆಯಾಮಗಳನ್ನು ಕುರಿತು ಚರ್ಚಿಸುತ್ತಾರೆ. ಸಾಮಾಜಿಕ ಸಂರಚನೆ ಪದಪ್ರಯೋಗ ಹಾಗೂ ಭಾಷಾ ಬಳಕೆಯ ಅವಕಾಶಗಳನ್ನು ನಿಯಂತ್ರಿಸುತ್ತಿರುತ್ತದೆ. ಈ ತಾರತಮ್ಯವನ್ನು ಹೆಣ್ಣು ಮಕ್ಕಳು ಕೂಡ ಕಾಯ್ದಿಡುತ್ತಾ ಹೋಗುತ್ತಿರುತ್ತಾರೆ ಎನ್ನುತ್ತಾರೆ.

ಭಾಷೆಯಲ್ಲಿ ಗಂಡು ನೆಲೆಯ ಮತ್ತು ಹೆಣ್ಣು ನೆಲೆಯ ಭಾಷಾ ಮಾದರಿಗಳಿವೆ ಎನ್ನುತ್ತಾರೆ. ಗಂಡಸಿನ ಭಾಷಾಭಿವ್ಯಕ್ತಿ ಸವಾಲಿನ ರೀತಿಯಲ್ಲಿ ಸ್ಥಾಪಿಸುವ ರೀತಿಯಲ್ಲಿದ್ದರೆ, ಹೆಣ್ಣಿನ ಭಾಷೆ ಅಧೀನ ಸ್ವರೂಪದ್ದು. ಗಂಡಿನ ಭಾಷೆ ಖಚಿತ ಸ್ವರೂಪದ್ದಾದರೆ, ಹೆಣ್ಣಿನ ಭಾಷಾ ಬಳಕೆಯಲ್ಲಿ ಅನಿಶ್ಚಿತತೆ, ಅಸುರಕ್ಷತೆ ಕಂಡುಬರುತ್ತದೆ. ಗಂಡಸಿನ ಮಾತು ಅಧಿಕಾರಯುತವಾದದ್ದು. ಅಂದರೆ, ಬೇರೊಂದು ಅಭಿಪ್ರಾಯವನ್ನು ನಿರಾಕರಿಸುವ ಮಾದರಿಯದು ಎನ್ನುತ್ತಾರೆ. ಭಾಷೆಯ ಉತ್ಪಾದಕ ನೆಲೆಗೂ ಸಾಮಾಜಿಕ ಸಂರಚನೆಗೂ ಸಂಬಂಧವಿದೆ. ಅಂದರೆ, ಸಾಮಾಜಿಕ ಅಂಶಗಳನ್ನು ಆಧರಿಸಿ ಭಾಷೆ ರೂಪುಗೊಳ್ಳುತ್ತಾ ಹೋಗುತ್ತದೆ. ಭಾಷೆಯ ಉತ್ಪಾದಕತೆ ಆಯಾ ಸಮಾಜದ ಆಶಯದಂತೆಯೇ ಆಗುತ್ತದೆ[೫೭] ಎನ್ನುತ್ತಾರೆ.

ಅನೌಪಚಾರಿಕ ವಲಯದಲ್ಲಿನ ಭಾಷಾ ಬಳಕೆಯನ್ನು ಗಮನಿಸಿದರೆ ಪುರುಷರಿಗೆ ಮುಕ್ತ ಅವಕಾಶಗಳಿರುವುದನ್ನು ಹಾಗೂ ಈ ಅವಕಾಶಗಳನ್ನು ಪುರುಷ ಸೂಕ್ತ ರೀತಿಯಲ್ಲಿ ಬಳಸಿಕೊಳ್ಳುತ್ತಿರುವುದನ್ನು ಕಾಣಬಹುದು. ಭಾಷಾ ಬಳಕೆಯಲ್ಲಿ ಸಮಾಜದ ಕಟ್ಟುಪಾಡುಗಳು ಹೆಂಗಸಿಗೆ ಅನ್ವಯವಾಗುವಂತೆ ಗಂಡಸಿಗೆ ಅನ್ವಯವಾಗುವುದಿಲ್ಲ ಎನ್ನುತ್ತಾರೆ.

ಸಾಂಬಮೂರ್ತಿ ಅವರ ಹೆಣ್ಣು ಮತ್ತು ಭಾಷೆ ಎಂಬ ಪುಸ್ತಕದಲ್ಲಿನ 'ಹೆಣ್ಣಿನ ಭಾಷಾ ಕಲಿಕೆ, ಬಳಕೆ, ಅಭಿವ್ಯಕ್ತಿ: ಕೌಟುಂಬಿಕ ವಲಯದಲ್ಲಿ' ಎಂಬ ಲೇಖನದಲ್ಲಿ ಮಹಿಳೆಯ ಭಾಷಾ ಕಲಿಕೆ, ಬಳಕೆಯನ್ನು ಕುರಿತಂತೆ ವಿವೇಚಿಸುತ್ತಾರೆ. ಕೌಟುಂಬಿಕ ಸನ್ನಿವೇಶದಲ್ಲಿ ಹೆಣ್ಣಿನ ಭಾಷೆಯ ಬಳಕೆಯನ್ನು ಕುರಿತು ಮಾಹಿತಿಯನ್ನು ನೀಡುತ್ತಾರೆ. ಮಧ್ಯಮ ವರ್ಗದ ಕುಟುಂಬವನ್ನು ಗಮನದಲ್ಲಿಟ್ಟುಕೊಂಡು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಮಹಿಳೆಯ ಭಾಷೆಯ ಬಳಕೆಯ ವಲಯಗಳಾದ ಮಕ್ಕಳ ಲಾಲನೆ, ಪಾಲನೆ ಕುಟುಂಬಗಳ ಆಗುಹೋಗುಗಳ ಚರ್ಚೆ, ಮಕ್ಕಳು ಗಂಡನೊಂದಿಗಿನ ಸಂವಾದ ನೆರೆಹೊರೆಯ

ಮಹಿಳೆಯೊಂದಿಗಿನ ಮಾತುಕತೆ ಇತ್ಯಾದಿ ಸಂದರ್ಭಗಳಲ್ಲಿ ಅವಳ ಭಾಷಾ ಬಳಕೆಯ ಲಕ್ಷಣಗಳನ್ನು ಗುರುತಿಸುತ್ತಾರೆ. ಅವುಗಳೆಂದರೆ, ಹಿಂಜರಿಕೆ, ಒಂದು ಅಥವಾ ಎರಡು ಪದಗಳ ಉತ್ತರ, ಹೀಗೆ ಮಾಡಬಹುದಲ್ಲ ಎನ್ನುವ ಪ್ರಶ್ನಾರ್ಥಕ ರೂಪದ ಮಾತು, ದೇಹ ಭಾಷೆಗೆ ಸೀಮಿತವಾಗುವಿಕೆ ಮುಂತಾದ ಲಕ್ಷಣಗಳನ್ನು ಗುರುತಿಸುತ್ತಾರೆ. ಹೆಣ್ಣು ಹಾಗೂ ಗಂಡು ಮಕ್ಕಳು ಒಂದೇ ಬಗೆಯ ಶಿಕ್ಷಣವನ್ನು ಪಡೆದಾಗಲೂ ಸಾಮಾಜೀಕರಣದ ಫಲವಾಗಿ ಹೆಣ್ಣಿನ ಭಾಷೆಯ ಬಳಕೆಯಲ್ಲಿ ಹಿಂಜರಿಕೆ ಇರುತ್ತದೆ. ಹಾಗಾಗಿ, ಅವರ ಸಂಭಾಷಣೆಯ ಪ್ರಯತ್ನದಲ್ಲೇ ಹಿನ್ನಡೆ ಅನುಭವಿಸುತ್ತಾರೆ ಎನ್ನುತ್ತಾರೆ.

ಶ್ರೀಮತಿ ಎಚ್.ಎಸ್., ಅವರು 'ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ' ಎಂಬ ಕೃತಿಯ ಪ್ರಸ್ತಾವನೆಯಲ್ಲಿ ಇಲ್ಲಿಯವರೆಗೆ ನಡೆದಿರುವ ಸ್ತ್ರೀವಾದಿಗಳ ಭಾಷಿಕ ನಿಲುವುಗಳನ್ನು ಮೂರು ನೆಲೆಯಲ್ಲಿ ಗುರುತಿಸುತ್ತಾರೆ.

೧. ಪರೀಕ್ಷಿಸುವುದು – ಭಾಷೆಯಲ್ಲಿ ಹೆಣ್ಣಿನ ಪ್ರತಿನಿಧೀಕರಣವನ್ನು ಪರೀಕ್ಷಿಸುವುದು.

೨. ವಿಶ್ಲೇಷಣೆ – ಗಂಡು ಹೆಣ್ಣುಗಳ ತಾರತಮ್ಯಗಳನ್ನು ಭಾಷೆ ಕಾಯ್ದಿಡುತ್ತಿರುವ ಬಗೆಯನ್ನು ವಿಶ್ಲೇಷಿಸುವುದು.

೩. ಪರಿವರ್ತನೆ – ಇಂಥ ಪರಿಸ್ಥಿತಿಯಿಂದ ಹೊರಬರಲು ಭಾಷೆ ಎಂಬ ವ್ಯವಸ್ಥೆಯಲ್ಲೇ ಆಗಬೇಕಾಗಿರುವ ಪರಿವರ್ತನೆಗಳನ್ನು ಕುರಿತದ್ದು[೫೮].

ಶ್ರೀಮತಿ ಎಚ್.ಎಸ್., ಅವರು ಭಾಷಿಕ ವ್ಯತ್ಯಾಸಕ್ಕೆ ಪುರುಷಾಧಿಕಾರವನ್ನು ಗುರಿಮಾಡುವುದಿಲ್ಲ. ಭಾಷೆಗೂ, ಗಂಡಸಿಗೂ ಇರುವ ಸಂಬಂಧದ ಸ್ವರೂಪ ಭಾಷೆಯೂ ಗಂಡಸಿನ ಹಿಡಿತದಲ್ಲಿದೆ ಎಂಬುದರ ಅರ್ಥವೇನಾ? ತನ್ನ ಅಧಿಕಾರವನ್ನು ಭಾಷೆಯ ಮುಖಾಂತರ ಸ್ಥಾಪಿಸುತ್ತಿರುವುದನ್ನು ಗಂಡಸು ಸ್ವತಃ ತಾನೇ ಬಲ್ಲನೇ? ಅಥವಾ ಆತ ಕೂಡ ಒಂದು ಚಾರಿತ್ರಿಕ ವಿನ್ಯಾಸದಲ್ಲಿ ಕೇವಲ ಪಾತ್ರಧಾರಿಯೇ? ಮುಂತಾದ ಪ್ರಶ್ನೆಗಳನ್ನು ಎತ್ತುತ್ತಾರೆ.

ಈ ಹಿನ್ನೆಲೆಯಲ್ಲಿ ಅವರ ಮತ್ತೊಂದು ವಿಚಾರವನ್ನು ಗಮನಿಸುವುದಾದರೆ. "ಭಾಷೆಯಲ್ಲಿ ಹೆಂಗಸನ್ನು ಪ್ರತಿನಿಧೀಕರಿಸುತ್ತಿರುವ ರೀತಿಯನ್ನು ಗಮನಿಸಿದರೆ ಆಯಾ ಭಾಷಿಕ ಸಮುದಾಯವು ಹೆಣ್ಣಿನ ಬಗ್ಗೆ ಹೊಂದಿರುವ ನಂಬಿಕೆಗಳು, ತೀರ್ಮಾನಗಳು, ದೃಷ್ಟಿಕೋನಗಳು ತಿಳಿದು ಬರುತ್ತವೆ. ಈ ಪ್ರತಿನಿಧೀಕರಣಗಳಿಗೆ ಯಾರು ಕಾರಣರು ಎಂಬ ಪ್ರಶ್ನೆ ಅಷ್ಟು ಮುಖ್ಯವಲ್ಲ. ಆದರೆ, ಅವುಗಳನ್ನು ಬಳಸುವ ಭಾಷಾ ಸಮುದಾಯವು ಆ ಪ್ರತಿನಿಧೀಕರಣಗಳ ಹಿಂದೆ ಇರುವ ನೆಲೆಗಳಿಗೆ ತನ್ನ ಸಮ್ಮತಿಯನ್ನು ನೀಡುತ್ತಿರುತ್ತದೆ ಎಂಬುದು ಮುಖ್ಯ. ಹೀಗೆ ಬಳಕೆಯಲ್ಲಿ ಭಾಗೀದಾರರಾಗಿರುವವರಲ್ಲಿ ಹೆಂಗಸರೂ ಸೇರಿರುತ್ತಾರೆ. ತಮಗೆ ಅರಿವಿಲ್ಲದಂತೆ ತಮ್ಮ ವಿರುದ್ಧವೇ ಇರುವ ಭಾಷಿಕ ನೆಲೆಗಳನ್ನು ಭದ್ರಗೊಳಿಸುವಲ್ಲಿ ತಾವು ಪಾಲುದಾರರಾಗಿ ಬಿಡುತ್ತಾರೆ"[೫೯] ಎನ್ನುತ್ತಾರೆ.

ಲಿಂಗತಾರತಮ್ಯಕ್ಕೆ ಭಾಷೆಯೇ ಕಾರಣವೆಂದು ತಿಳಿಯಬಾರದು. ಸಾಮಾಜಿಕ, ಸಾಂಸ್ಕೃತಿಕ ನೆಲೆಯ ಲಿಂಗತಾರತಮ್ಯದ ನಂಬಿಕೆ ಮತ್ತು ಆಚರಣೆಗಳನ್ನು ಭಾಷೆಯೂ ಪ್ರತಿನಿಧಿಸುತ್ತದೆ. ಮತ್ತು ಬಳಕೆಯಿಂದ ಸ್ಥಿರೀಕರಿಸುತ್ತದೆ ಎಂದು ತಿಳಿಯಬೇಕು ಎನ್ನುತಾರೆ. ಶ್ರುತಿಯನ್ನು ಹೊರತುಪಡಿಸಿ ಉಳಿದ ಭಾಷಿಕ

ಅಂಶಗಳನ್ನು ಬಳಸುವಲ್ಲಿ ದೈಹಿಕ ನೆಲೆಯಲ್ಲಿ ಗಂಡು-ಹೆಣ್ಣುಗಳನ್ನು ಬೇರೆಯಾಗಿಡುವ ಅಂಶಗಳು ಯಾವುವೂ ಇಲ್ಲ. ಅಂದರೆ ಈ ವ್ಯತ್ಯಾಸಗಳನ್ನು ಒಂದು ಸಮುದಾಯ ತಾನೇ ಸೃಷ್ಟಿಸಿ ಹೆಂಗಸಿನ ಮೇಲೆ ಆರೋಪಿಸುತ್ತದೆ ಎನ್ನುತ್ತಾರೆ.

ಶ್ರೀಮತಿ ಎಚ್.ಎಸ್., ಅವರ ಸ್ತ್ರೀವಾದ: ತಾತ್ತ್ವಿಕತೆ ಎಂಬ ಪುಸ್ತಕದಲ್ಲಿರುವ 'ಹೆಣ್ಣಿನ ಅರಿವು ತಿಳಿವುಗಳು ಎದುರಿಸುವ ಭಾಷಿಕ ಸವಾಲುಗಳು' ಎಂಬ ಲೇಖನದಲ್ಲಿ ಜ್ಞಾನ, ತಿಳಿವು, ಅರಿವು ಎಂದರೆ ಏನು? ಎಂಬ ಪ್ರಶ್ನೆಯನ್ನು ಎತ್ತುತ್ತಾರೆ. ಈವರೆಗೂ ನಮಗೆ ಪರಿಚಿತವಾಗಿರುವ ಜ್ಞಾನ ಮೀಮಾಂಸೆಯ ಒಟ್ಟು ಮೊತ್ತವೇ ಪುರುಷನ ಜ್ಞಾನವನ್ನು ಕುರಿತದ್ದು. ಇದುವರೆಗೆ ಹೆಣ್ಣಿಗೆ ತನ್ನ ಮೂಲಕವೇ ಪುರುಷ ಚಿಂತನೆಗಳೂ ಅಭಿವ್ಯಕ್ತಿ ಯಾಗುವ ಪರಿಯಾಗಲೀ ತಿಳಿಯುವುದೇ ಇಲ್ಲ. ಹೆಣ್ಣು ಹೆಣ್ಣಿಗಾಗಿ ಅರ್ಥಪೂರ್ಣವಾದ ಒಂದು ತಿಳಿವಳಿಕೆಯನ್ನು ಕಟ್ಟಲು ಇನ್ನೂ ಸಾಧ್ಯವಾಗಿಲ್ಲ[೬೦] ಎನ್ನುತ್ತಾರೆ.

ಸಮಾಜ ಚರಿತ್ರೆಯ ಆರಂಭದಲ್ಲಿ ಆಲೋಚನೆಗಳು, ಪ್ರತಿಮೆಗಳು ಹಾಗೂ ಸಂಕೇತಗಳನ್ನು ಸಾಕಾರಗೊಳಿಸುವ ಸಾಧನವಾಗಿ ಭಾಷೆಯು ಗಂಡಸಿಗೆ ಒದಗಿ ಬಂದಷ್ಟು ಪ್ರಮಾಣದಲ್ಲಿ ಹೆಂಗಸಿಗೆ ಒದಗಿ ಬಾರದಿರುವುದಕ್ಕೂ ಅವಳ ಸಾಮಾಜಿಕ ಬದುಕು ಅಧೀನ ನೆಲೆಯಲ್ಲಿ ಉಳಿದಿರುವುದಕ್ಕೂ ಗಾಢವಾದ ಸಂಬಂಧವಿದೆ. ಅವಳಿಗೂ ಭಾಷೆ ಗೊತ್ತಿದೆ ನಿಜ. ಆದರೆ, ಅವಳಿಗೆ ತಿಳಿದಿರುವುದು ಪುರುಷರು ಕಟ್ಟಿದ ಭಾಷೆ. ಅದನ್ನೇ ಅವಳು ತನ್ನದೆಂದು ನಂಬಿ ಭಾವುಕಳಾಗಿದ್ದಾಳೆ. ಅವಳ ಅಂತರ್ ಸಾಮರ್ಥ್ಯವನ್ನು ದಿಗ್ಬಂಧನದಲ್ಲಿರಿಸಬಲ್ಲ ಸಾಮಾಜೀಕರಣ ಪ್ರಕ್ರಿಯೆಯಲ್ಲಿ ಉತ್ಪನ್ನಗೊಳ್ಳುವ ಆಲೋಚನೆಗಳು, ಪ್ರತಿಮೆಗಳು ಹಾಗೂ ಸಂಕೇತಗಳು ಅವಳಿಗೆ ಸದ್ಯ ಲಭ್ಯವಿರುವ ಗಂಡು ಭಾಷೆಯಲ್ಲೇ ಆಕಾರ ತಳೆಯಬೇಕು[೬೧] ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.



ಗಂಡಸಿನ ಅಭಿವ್ಯಕ್ತಿಯು ಸಹಜವಾಗಿ ಮಹತ್ವದ್ದಾಗಿಯೂ ಕಾಣುತ್ತದೆ. ಯಾವುದೇ ಗಂಡಸಿಗೆ ಇತರ ಗಂಡಸರೊಂದಿಗೆ ಸೃಜನಶೀಲ ಸಂವಾದ ಸಂವಹನಗಳು ಸುಸಂಗತವಾಗಿ ಸಾಧ್ಯವಾಗುತ್ತದೆ. ಆದರೆ, ಹೆಣ್ಣಿನ ಅಭಿವ್ಯಕ್ತಿಗೆ ಸ್ವಾಯತ್ತ ಗುಣವೇ ಇಲ್ಲವಾಗಿ ಅವಳು ಇತರ ಗಂಡಸರೊಂದಿಗೆ ಮಾತನಾಡಿದ್ದು ವಿಕಲವಾಗಿ ಕಾಣುತ್ತದಾದರೆ, ಇತರ ಹೆಂಗಸರೊಂದಿಗೇ ಮಾತನಾಡಿದಾಗಲೂ ಅಸಂಬದ್ಧವಾಗಿ ಕಂಡುಬಿಡಬಹುದು. ಅವಳು ಕಲಿತ ಮಾತಿಗೆ ಧ್ವನಿಯೇ ಇಲ್ಲವಾಗುವ ಸ್ಥಿತಿ ಇದೆ[೬೨] ಎನ್ನುತ್ತಾರೆ.

ಶ್ರೀಮತಿ ಎಚ್.ಎಸ್., ಅವರ ಮೇಲಿನ ಎರಡು ಲೇಖನಗಳನ್ನು ಗಮನಿಸಿದಾಗ ಪರಸ್ಪರ ವಿರೋಧಿಯಾದ ನಿಲುವುಗಳನ್ನು ವ್ಯಕ್ತಪಡಿಸುತ್ತಾರೆ. ಒಂದು ಲೇಖನದಲ್ಲಿ ಗಂಡು ಹೆಣ್ಣಿನ ಭಾಷೆಯಲ್ಲಿ ದೈಹಿಕ ಭಿನ್ನತೆಗಳಿಂದ ಉಂಟಾದ ವ್ಯತ್ಯಾಸಗಳಷ್ಟೇ ಇರುವುದು ಎನ್ನುತ್ತಾರೆ. ಮತ್ತೊಂದು ಲೇಖನದಲ್ಲಿ ಭಾಷೆ ಗಂಡಸಿಗೆ ಒದಗಿ ಬಂದಷ್ಟು ಹೆಣ್ಣಿಗೆ ಒದಗಿಬರುವುದಿಲ್ಲ. ಭಾಷೆಗೂ ಅವಳ ಸಾಮಾಜಿಕ ಬದುಕು ಅಧೀನದಲ್ಲಿರುವುದಕ್ಕೂ ಸಂಬಂಧ ಕಲ್ಪಿಸುತ್ತಾರೆ.

ಅಶೋಕ ಕುಮಾರ ರಂಜೇರೆ ಅವರು 'ಕನ್ನಡದ ಲಿಂಗ ಸಂಬಂಧಿ ಆಯಮಗಳು: ಔಪಚಾರಿಕ ಬಳಕೆ' ಎಂಬ ಲೇಖನದಲ್ಲಿ ಭಾಷೆಯ ಬಳಕೆಯಲ್ಲಾಗುವ ಭಿನ್ನಾಂಶಗಳನ್ನು ನಾಲ್ಕು ಮಾದರಿಗಳಲ್ಲಿ ಚರ್ಚಿಸುತ್ತಾರೆ.

೧. ಜೈವಿಕ ನೆಲೆಯಿಂದ.

೨. ಭಾಷೆಯನ್ನು ಬಳಸುವಾಗ ಕಂಡು ಬರುವ ಆಟಿಟ್ಯೂಡ್ ಹಿನ್ನೆಲೆಯಲ್ಲಿ.

೩. ಭಾಷೆಯ ರಾಚನಿಕ ದೃಷ್ಟಿಯಿಂದ.

೪. ಅರ್ಥದ ದೃಷ್ಟಿಯಿಂದ ಅಥವಾ ಬಳಕೆಯ ದೃಷ್ಟಿಯಿಂದ[೬]

ಯಾವುದೇ ಭಾಷೆಯನ್ನು ಬಳಸುವಾಗ ಗಂಡು ಮತ್ತು ಹೆಣ್ಣುಗಳಲ್ಲಿನ ಧ್ವನಿ ವ್ಯತ್ಯಾಸಗಳಿಂದಲೇ ಅವರ ಭಾಷಾ ಭಿನ್ನತೆಯನ್ನು ಗುರುತಿಸಲು ಸಾಧ್ಯ ಎನ್ನುತ್ತಾರೆ. ಎರಡನೆಯದಾಗಿ ಆಟಿಟ್ಯೂಡ್‌ಗೆ ಸಂಬಂಧಿಸಿದ ವ್ಯತ್ಯಾಸ. ಗಂಡಿನ ಭಾಷೆ ವಾದ ಹೂಡುವ ಮಾದರಿಯದ್ದಾದರೆ, ಹೆಣ್ಣಿನ ಭಾಷೆ ನಿರೂಪಣಾ ಮಾದರಿಯನ್ನು ಒಳಗೊಂಡಿರುತ್ತದೆ. ಹೆಣ್ಣು ಮಕ್ಕಳು ಯಾವುದೇ ವಿಷಯದ ಬಗ್ಗೆ ಖಚಿತವಾದ ನಿರ್ಧಾರ ತೆಗೆದುಕೊಳ್ಳಲಾರರು. ಭಾಷೆಯನ್ನು ಕ್ರಾನ್ತಿಯಸ್ಸಾಗಿ ಬಳಸುವವರನ್ನು ಬಿಟ್ಟರೆ ಸಾಮಾನ್ಯ ಜನರ ಭಾಷಾ ಬಳಕೆಯಲ್ಲಿ ಇದನ್ನು ಕಾಣಲು ಸಾಧ್ಯ ಎನ್ನುತ್ತಾರೆ.

ಮೂರನೆಯದಾಗಿ ಭಾಷಾ ರಚನೆಯಲ್ಲಿ ಕಾಣುವ ವ್ಯತ್ಯಾಸ, ಸಮಾಜದಲ್ಲಿ ಹೆಣ್ಣಿನ ಪಾತ್ರ ಅಮುಖ್ಯವಾಗಿದ್ದಾಗ ಸಹಜವಾಗಿಯೇ ಭಾಷಾ ರಚನೆ ಪುರುಷಮೂಲೀಯವಾಗುತ್ತದೆ. ಉದಾ: ಸಮಾಜದಲ್ಲಿನ ಪ್ರಮುಖ ಹುದ್ದೆಗಳನ್ನು ಮೊದಲು ಪುರುಷ ಅಲಂಕರಿಸಿದ್ದರಿಂದ ಹುದ್ದೆಗಳ ಹೆಸರು ಸಾಮಾನ್ಯವಾಗಿ ಪುರುಷನನ್ನು ಸೂಚಿಸುತ್ತವೆ ಎನ್ನುತ್ತಾರೆ. ಕೊನೆಯದಾಗಿ ಭಾಷೆಯನ್ನು ಬಳಸುವಾಗ ಅದರ ಬಳಕೆಯ ಪದಕೋಶ ಮತ್ತು ಅರ್ಥದ ದೃಷ್ಟಿಯಲ್ಲಿ ಲಿಂಗ ಭಿನ್ನಾಂಶಗಳನ್ನು ಗುರುತಿಸಲು ಸಾಧ್ಯವಿದೆ ಎಂದು ಚರ್ಚಿಸುತ್ತಾರೆ.

ಔಪಚಾರಿಕ ಸಂದರ್ಭದಲ್ಲಿ ಬಳಸುವ ಮೌಖಿಕ ಮತ್ತು ಬರವಣಿಗೆಯಲ್ಲಿ ಲಿಂಗಭಿನ್ನತೆಯನ್ನು ಗುರುತಿಸುತ್ತಾರೆ. ಈ ರೀತಿಯಲ್ಲಿ ಭಿನ್ನತೆಗೆ ಸಾಮಾಜಿಕ ಸಂದರ್ಭವೂ ಕಾರಣ ಎನ್ನುತ್ತಾರೆ. ಉದಾ: ವಿದ್ಯಾರ್ಥಿ ಎನ್ನುವ ಪದ ಪುರುಷವಾಚಕವೂ ಅಲ್ಲ ಸ್ತ್ರೀವಾಚಕವೂ ಅಲ್ಲ. ವಿದ್ಯಾರ್ಥಿ ಎಂಬ ಪದದ ಎದುರಿಗೆ ವಿದ್ಯಾರ್ಥಿನಿ ಎಂಬ ಪದ ಬಳಕೆಗೆ ಬಂದ ನಂತರ 'ವಿದ್ಯಾರ್ಥಿ' ಪುರುಷ ಸೂಚಕವಾಗುವ ಸಾಧ್ಯತೆ ಹೆಚ್ಚು ಎನ್ನುತ್ತಾರೆ. ಹೀಗೆ ಭಾಷೆ ಪುರುಷ ರೂಪಿಯಾಗಿ ಕಾಣಲು ಸಾಮಾಜಿಕ ಸನ್ನಿವೇಶವೇ ಮುಖ್ಯಕಾರಣ ಎಂಬುದನ್ನು ಗುರುತಿಸುತ್ತಾರೆ.

ಶ್ರೀಮತಿ ಎಚ್.ಎಸ್., ಅವರ ಸ್ತ್ರೀವಾದಿ: ತಾತ್ತ್ವಿಕತೆ ಎಂಬ ಪುಸ್ತಕದಲ್ಲಿನ 'ಹೆಣ್ಣಿನ ಭಾಷೆ' ಎಂಬ ಲೇಖನದಲ್ಲಿ ಸಮುದಾಯದಲ್ಲಿನ ಭಾಷಿಕ ವಿಕಲ್ಪಗಳಲ್ಲಿ ಲಿಂಗಭೇದವು ಒಂದು ಎಂದು ತಮ್ಮ ಚರ್ಚೆಯನ್ನು ಆರಂಭಿಸುತ್ತಾರೆ. ಸಮಾಜದಲ್ಲಿ ಹೆಣ್ಣು ಮತ್ತು ಗಂಡುಗಳ ಬಗ್ಗೆ ಇರುವ ಕೆಲವು ಅಭಿಪ್ರಾಯಗಳು, ಅವರಿಗೆ ಸಮಾಜವು ನೀಡುವ ಹಲವು ನಿರ್ದೇಶನಗಳು ಹಾಗೂ ಅವರನ್ನು ಕುರಿತು ಸಮಾಜವು ವ್ಯಕ್ತಮಾಡುವ ನಿರ್ವಚನಗಳನ್ನು ಭಾಷೆಯಲ್ಲಿ ನೋಡಬಹುದಾಗಿದೆ ಎನ್ನುತ್ತಾರೆ. ಹೆಣ್ಣು ಮತ್ತು ಗಂಡು ಒಂದೇ ಭಾಷೆಯನ್ನು ಹೇಗೆ ವಿಭಿನ್ನವಾಗಿ ಬಳಸುತ್ತಾರೆ. ಈ ವಿಭಿನ್ನ ರೀತಿಯ ಭಾಷೆಯ ಬಳಕೆಯು ಸಮಾಜದ ಯಾವ ನಿಲುವುಗಳನ್ನು, ಯಾವ ಮೌಲ್ಯಗಳನ್ನು ಸೂಚಿಸುತ್ತಿದೆ ಎಂಬುದನ್ನು ಪರಿಶೀಲಿಸಲು ತೊಡಗುತ್ತಾರೆ.

ವಿವಿಧ ವರ್ಗ, ಜಾತಿ, ಶಿಕ್ಷಣ ಇತ್ಯಾದಿ ಸಂದರ್ಭಗಳಲ್ಲಿ ಹೆಣ್ಣು ಗಂಡುಗಳ ಭಾಷೆಯ ಬಳಕೆಯು ವಿಭಿನ್ನವಾಗಿರುತ್ತವೆನ್ನುವುದು ಹೌದಾದರೂ ವ್ಯಕ್ತಿಯು ಹೆಣ್ಣು ಅಥವಾ ಗಂಡು ಎಂಬುದರಿಂದಾಗಿಯೇ ವ್ಯಕ್ತವಾಗುವ ವಿಶಿಷ್ಟ ಭಾಷಾ ವೈವಿಧ್ಯಗಳು ಕಾಣಬರುತ್ತವೆ ಎನ್ನುತ್ತಾರೆ. ಭಾಷೆಯ ಬಳಕೆಯ ವಿಧಾನದಲ್ಲೂ ಸಮಾಜವು ಹೆಣ್ಣು ಗಂಡುಗಳಿಗೆ ನೀಡಿರುವ ನಿರ್ದೇಶನಗಳನ್ನು ಹೇಳುತ್ತಾರೆ. ಉದಾಹರಣೆಗೆ: ವಿರುದ್ಧ್ವನಿ, ಅಶ್ಲೀಲ ಪದಗಳ ಬಳಕೆ, ಅನುನಯವಿಲ್ಲದ ಮಾತುಗಾರಿಕೆಗಳು ಹೆಣ್ಣಿನ ಭಾಷೆಯ ದೋಷಗಳೆನಿಸಿದರೆ, ಇವು ಗಂಡಿನ ಭಾಷೆಯ ಗುಣಾತ್ಮಕ ಅಂಶಗಳೆನಿಸುತ್ತವೆ ಎನ್ನುತ್ತಾರೆ.[೬೮] ಅಶ್ಲೀಲ ಪದಗಳ ಬಳಕೆ ಗಂಡಿನ ಗುಣಾತ್ಮಕ ಅಂಶ ಎಂಬ ಇವರ ವಾದವನ್ನು ಮತ್ತೊಂದು ರೀತಿಯಲ್ಲಿ ಗ್ರಹಿಸಲು ಸಾಧ್ಯವಿದೆ. ಭಾಷೆಯ ಮಡಿವಂತಿಕೆಯ ನಿಯಮಗಳು ಇಡೀ ಮಾನವರ ಕುಲಕ್ಕೆ ಅನ್ವಯಿಸುತ್ತವೆ. ಗಂಡಿಗೆ ಅಶ್ಲೀಲ ಪದಗಳನ್ನು ಬಳಸುವಂತೆ ಸಮಾಜ ಪ್ರೋತ್ಸಾಹಿಸುವುದಿಲ್ಲ. ಅವನಿಗೂ ನಿರ್ಬಂಧಗಳಿರುತ್ತವೆ. ಆದರೆ, ಅವನಿಗೆ ಹೆಣ್ಣಿಗಿಂತ ಸ್ವಲ್ಪ ಮಟ್ಟದ ಸ್ವಾತಂತ್ರ್ಯ ಹೆಚ್ಚಾಗಿರಬಹುದು. ನಗರವಾಸಿ ಗಂಡಸರು, ವಿದ್ಯಾವಂತ ಗಂಡಸರು ಅಶ್ಲೀಲ ಪದಗಳನ್ನು ಬಳಸಲು ಹಿಂಜರಿಯುವುದನ್ನು ಗಮನಿಸಬಹುದು. ಹೆಣ್ಣಿಗೆ ಅಶ್ಲೀಲ ಪದಗಳ ಬಳಕೆ ಸಂಪೂರ್ಣ ನಿಷೇಧವಾಗಿಲ್ಲ. ಗ್ರಾಮೀಣ ಪರಿಸರದ ಹೆಣ್ಣು ಮಕ್ಕಳು ನಿರ್ಭೀತಿಯಿಂದ ಅಶ್ಲೀಲ ಪದಗಳನ್ನು ಬಳಸುತ್ತಾರೆ.

"ಭಾಷೆಯು ಪುರುಷನಿಂದ ನಿರ್ಮಿತವಾಗಿ ಅವನ ಮೇಲ್ಮೈಯನ್ನು ತೋರುವ ಮತ್ತು ಸ್ತ್ರೀಯನ್ನು ಯಾವುದೇ ಲೆಕ್ಕಕ್ಕೂ ಇಡದಿರುವ ಸೂಚಕವಾಗಿದೆ"[೬೯] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಭಾಷೆ ಪುರುಷ ನಿರ್ಮಿತವಲ್ಲ. ಸಾಮಾಜಿಕವಾಗಿ ಪುರುಷನ ಪಾಲ್ಗೊಳ್ಳುವಿಕೆ ಮೊದಲು ಉಂಟಾದ್ದರಿಂದ ಅವನ ಚಹರೆಯನ್ನು ಹೆಚ್ಚಾಗಿ ಕಾಣುತ್ತೇವೆ. ನಂತರ ಲೇಖಕರು ಗಂಡು ಮತ್ತು ಹೆಣ್ಣಿನ ಪರಸ್ಪರ ಸಂಬೋಧನೆ ಮತ್ತು ವಚನ ಪ್ರಯೋಗಗಳನ್ನು ವಿವರಿಸುತ್ತಾರೆ. ಪುರುಷನು ತನ್ನ ಹೆಂಡತಿ, ತಾಯಿ, ಸೊಸೆ, ಮಗಳು ಯಾರನ್ನೇ ಆದರೂ ವಯಸ್ಸಿನ ಅಂತರದ ಪರಿವೆಗೆ ಒಳಗಾಗದೆ ಏಕವಚನದಲ್ಲಿ ಸಂಬೋಧಿಸಬಹುದು. ಆದರೆ, ಮಹಿಳೆ ಮಾತ್ರ ಗಂಡ, ತಂದೆ, ಮಾವ, ಅಳಿಯ ಎಲ್ಲರನ್ನು ವಯಸ್ಸಿನ ಕಾರಣವಿಲ್ಲದೆಯೂ ಬಹುವಚನದಲ್ಲೇ ಸಂಬೋಧಿಸುತ್ತಾಳೆ ಎನ್ನುತ್ತಾರೆ. ಲೇಖಕರ ಈ ವಿವರಣೆ ಸಂಬೋಧನೆಯಲ್ಲಿ ಒಂದು ಮಾದರಿ ಅಷ್ಟೇ. ಗಂಡ ಹೆಂಡತಿ ಪರಸ್ಪರ ಏಕವಚನದಲ್ಲಿ ಸಂಬೋಧಿಸಿಕೊಳ್ಳುವ ಮಾದರಿಗಳಿವೆ. ತಂದೆ ಮಗಳನ್ನು ಏಕವಚನದಲ್ಲಿ ಸಂಬೋಧಿಸದೇ ಬಾಪುಟ್ಟ, ಬಾಮ್ಮ ರೀತಿಯಲ್ಲಿ ಸಂಬೋಧಿಸುವ ಮಾದರಿಗಳು ಸಮಾಜದಲ್ಲಿವೆ. ಅತ್ತೆಯಂದಿರು ಅಳಿಯಂದಿರನ್ನು ಏಕವಚನದಲ್ಲಿ ಸಂಬೋಧಿಸುವ ಮಾದರಿಗಳು ಇವೆ. ಇಡೀ ಕನ್ನಡ ಸಮುದಾಯಕ್ಕೆ ಅನ್ವಯವಾಗುವ ಏಕಮಾದರಿಯ ಸಂಬೋಧನಾ ರೂಪಗಳು ಇಲ್ಲ. ಅದರಲ್ಲಿ ಬಹುತ್ವದ ನೆಲೆಗಳನ್ನು ಗುರುತಿಸಲು ಸಾಧ್ಯವಿದೆ.

ಶ್ರೀಮತಿ ಎಚ್.ಎಸ್., ಅವರ ಸ್ತ್ರೀವಾದಿ: ತಾತ್ತ್ವಿಕತೆ ಎಂಬ ಪುಸ್ತಕದಲ್ಲಿನ 'ಅಧಿಕಾರದ ಚಹರೆಯಾಗಿ ಭಾಷೆ ಮತ್ತು ಹೆಣ್ಣಿನ ಸಂದರ್ಭ' ಎಂಬ ಲೇಖನದಲ್ಲಿ ವ್ಯಕ್ತಿಯಲ್ಲಿರುವ ಭೌತಿಕ ಚಹರೆಗಳ ಜೊತೆಗೆ ಸಾಮಾಜಿಕವಾಗಿ ಪಡೆಯುವ ಚಹರೆಗಳಿರುತ್ತವೆ. ಈ ಚಹರೆಗಳಿಂದ ಉಂಟಾಗುವ ಬಲಾಬಲಗಳು ತಾರತಮ್ಯಗಳಾಗುತ್ತವೆ. ಇವೇ ಯಾಜಮಾನ್ಯ ಮತ್ತು ಅಧೀನ ನೆಲೆಯ ಚಹರೆಗಳು ಎನ್ನುತ್ತಾರೆ. ಇವು

ಸಹಜ ಪ್ರಾಕೃತಿಕ ಚಹರೆಗಳಲ್ಲ ಅಥವಾ ವ್ಯಕ್ತಿಯ ಅಪೇಕ್ಷೆಯ ಆಯ್ಕೆಯೂ ಆಗಿರುವುದಿಲ್ಲ ಎನ್ನುತ್ತಾರೆ. ಗಂಡು ಹೆಣ್ಣುಗಳ ಸಂಬಂಧ ಯಾಜಮಾನ್ಯ ನೆಲೆಯಲ್ಲೇ ಸಾಗಿಬಂದಿವೆ ಎನ್ನುತ್ತಾರೆ. ಅಧಿಕಾರ ಸಂಬಂಧಗಳು ಭಾಷೆಯ ಕಲಿಕೆ, ಬಳಕೆ, ಸಂವಹನಗಳ ನೆಲೆಗಳನ್ನು ಹೇಗೆ ಪ್ರಭಾವಿಸುತ್ತವೆ ಎಂಬುದನ್ನು ಚರ್ಚಿಸುತ್ತಾರೆ.

"ಭಾಷೆಯೇ ನೇರವಾಗಿ ಅಧಿಕಾರ ಸಂಬಂಧಗಳಿಗೆ ಕಾರಣವಲ್ಲದಿರಬಹುದು. ಆದರೆ, ಭಾಷೆಯಲ್ಲಿ ಸಾಮಾಜಿಕ, ಸಾಂಸ್ಕೃತಿಕ ನೆಲೆಯ ಸಂಗತಿಗಳು ಬೆರೆತಿವೆ. ಸ್ತ್ರೀಪುರುಷರಿಬ್ಬರಿಗೂ ಸಾಮಾಜಿಕ ಹಾಗೂ ಸಾಂಸ್ಕೃತಿಕ ಚಹರೆಗಳು ಭಿನ್ನ ಸ್ವರೂಪದವಾಗಿವೆ. ಎಂದರೆ ಅವರಿಬ್ಬರ ಭಾಷೆ ಒಂದೇ ಎಂಬ ಸಂಗತಿಯೇ ನಿಜವಲ್ಲ"[೬೬] ಎನ್ನುತ್ತಾರೆ. ಗಂಡಿನ ಭಾಷೆ ಹೆಣ್ಣಿನ ಭಾಷೆ ಬೇರೆ ಬೇರೆ ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ. ಹೆಣ್ಣಿನ ಮಾತು ಮತ್ತು ಮೌನಗಳನ್ನು ವಿವರಿಸುತ್ತಾ ಹೆಣ್ಣಿನ ಮೌನ ಎಂದರೆ ಅದು ಅವಳು ಪಡೆದುಕೊಂಡಿರುವ ಸಾಮಾಜಿಕ ಭಾಷೆಯ ಚಹರೆಯೇ ಆಗಿದೆ ಎನ್ನುತ್ತಾರೆ. ಹೆಣ್ಣಿನ ಮೌನವನ್ನು ಅವಳ ಮಾತಿನ ಲಕ್ಷಣವೆಂದು ಪರಿಗಣಿಸುತ್ತಾರೆ. ಗಂಡಸರ ಗುಂಪಿನ ಮಾತುಕತೆಯನ್ನು ವಸ್ತುನಿಷ್ಠವಾದದು. ಹೆಂಗಸರ ಗುಂಪಿನ ಮಾತುಕತೆಯನ್ನು ವ್ಯಕ್ತಿನಿಷ್ಠವಾದುದು ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ. ತರ್ಕಬದ್ಧತೆ, ವಿಶ್ಲೇಷಣೆ, ಅಂತಿಮ ನಿರ್ಣಯಗಳೆಂಬ ಯಾವ ತಾಂತ್ರಿಕತೆಗೂ ಹೆಂಗಸರ ಸಂವಾದ ಕಟ್ಟು ಬೀಳುವುದಿಲ್ಲ ಎನ್ನುತ್ತಾರೆ.

ಗಂಡಸಿನದು ಅಧಿಕಾರದ ಭಾಷೆ, ಹೆಂಗಸಿನದು ಅಧೀನ ಭಾಷೆ ಎಂದು ಹೇಳುತ್ತ ಗಂಡಸಿನ ಭಾಷೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಹೆಂಗಸಿಗೆ ಸಮಸ್ಯೆಯೇನಿಲ್ಲ. ಗಂಡಸಿಗೆ ಮಾತ್ರ ಹೆಂಗಸು, ಹೆಂಗಸಿನ ಭಾಷೆ ಎಂದೂ ಅರ್ಥವಾಗುವುದಿಲ್ಲ. ಅಧಿಕಾರದ ಭಾಷೆಗೆ ಆ ವ್ಯಕ್ತಿಗೆ ಅಧೀನರನ್ನು ಅವರ ಭಾಷೆಯನ್ನು ಅನುಸರಿಸಿ ಅರ್ಥಮಾಡಿಕೊಳ್ಳಬೇಕೆಂಬ ಒತ್ತಾಯಗಳಿರುವುದಿಲ್ಲ ಎನ್ನುತ್ತಾರೆ. "ಭಾಷೆಯು ಲಿಂಗ ತಟಸ್ಥವಲ್ಲ. ಬದಲಿಗೆ ಅದು ಲೈಂಗಿಕತಾವಾದಿಯೇ ಆಗಿದೆ. ಸೂಕ್ಷ್ಮವಾಗಿ ನಮ್ಮ ಅಗತ್ಯಗಳಿಗೆ ತಕ್ಕಂತೆ ಅದನ್ನು ಭಾಗಿಸಿ ಪಳಗಿಸಿ ಬಳಸಬೇಕೆಂಬ ವಿವೇಚನೆ ಇಲ್ಲದಿದ್ದರೆ ಗಂಡು ಕಟ್ಟಿದ ಭಾಷೆಯಲ್ಲಿ ಹೆಣ್ಣು ಅನುಭವಲೋಕವು ಕಳೆದೇ ಹೋಗುತ್ತದೆ. ಕೊನೆಗೂ ಅಲ್ಲಿ ಉಳಿದುಕೊಳ್ಳುವುದು ಗಂಡು ವ್ಯಾಖ್ಯಾನದ ಹೆಣ್ಣು"[೬೭] ಎನ್ನುತ್ತಾರೆ.

ಒಟ್ಟಾರೆ ಇವರ ವಾದದಲ್ಲಿ ಭಾಷೆಯನ್ನು ಪ್ರಜ್ಞಾಪೂರ್ವಕವಾಗಿ ಪುನರ್ರಚಿಸಿಕೊಳ್ಳುವ ಶ್ರಮವನ್ನು ವಹಿಸಬೇಕಾಗುತ್ತದೆ ಎನ್ನುತ್ತಾರೆ. ಇದುವರೆಗೆ ಸಾಮಾಜಿಕವಾಗಿ ಕಲಿತು ಬಳಸುತ್ತಾ ಬಂದಿರುವ ಭಾಷೆಯನ್ನು ಇರುವ ಸ್ಥಿತಿಯಲ್ಲೇ ಬಳಸದೇ ಅದನ್ನು ಒಡೆದು ಹೊಸ ಹೆಣ್ಣು ಭಾಷೆಯೊಂದನ್ನು ಕಟ್ಟಿಕೊಳ್ಳಬೇಕಾಗುತ್ತದೆ ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ.

ಕೃಷ್ಣಪರಮೇಶ್ವರ ಭಟ್ಟರ ಭಾಷೆ ಮತ್ತು ಸಾಮಾಜಿಕ ಸಂದರ್ಭ ಎಂಬ ಪುಸ್ತಕದಲ್ಲಿನ 'ಭಾಷೆಯಲ್ಲಿ ವಯಸ್ಸು ಹಾಗೂ ಲಿಂಗ ಸೂಚನೆ' ಎಂಬ ಲೇಖನದಲ್ಲಿ ಭಾಷೆಯಲ್ಲಿ ವ್ಯಕ್ತವಾಗುವ ಲಿಂಗಭೇದವನ್ನು ಎರಡು ನೆಲೆಗಳಲ್ಲಿ ಗುರುತಿಸುತ್ತಾರೆ. ಅವುಗಳೆಂದರೆ:

೧. ಲಿಂಗ ವಿಶಿಷ್ಟವಾದ ಭಾಷಾ ಪ್ರಯೋಗಗಳು

೨. ಆದ್ಯತೆಯಲ್ಲಿ ವ್ಯತ್ಯಾಸ ಇರುವ ಭಾಷಾ ಪ್ರಯೋಗಗಳು[೬೮]

ಮೊದಲನೆಯದು ಸ್ತ್ರೀ-ಪುರುಷರ ಭಾಷಾ ಪ್ರಯೋಗಗಳಲ್ಲಿ ಎರಡೂ ವರ್ಗಗಳಿಗೆ ವಿಶಿಷ್ಟವಾದ ಪ್ರತ್ಯೇಕವಾದ ಭಾಷಿಕ ಅಂಶಗಳು. ಧ್ವನಿ, ಶಬ್ದ, ಪ್ರತ್ಯಯ ಇತ್ಯಾದಿ ಇರುವುದನ್ನು ಹೇಳುತ್ತದೆ. ಎರಡನೆಯದು ಯಾವುದೋ ಕೆಲವು ಭಾಷಾಂಶಗಳ ವಿಷಯದಲ್ಲಿ ಅವು ಎರಡೂ ವರ್ಗದವರ ಪ್ರಯೋಗಗಳಲ್ಲಿ ಕಂಡುಬಂದರೂ ಸಂಖ್ಯಾ ಪ್ರಮಾಣದಲ್ಲಿ ಭಿನ್ನತೆ ಇರುವುದನ್ನು ಒಂದು ನಿರ್ದಿಷ್ಟ ಭಾಷಾಂಶವನ್ನು ಒಂದು ವರ್ಗದವರು ಸಾಪೇಕ್ಷವಾಗಿ ಹೆಚ್ಚು ಬಳಸುವುದನ್ನು ಹೇಳುತ್ತದೆ ಎನ್ನುತ್ತಾರೆ. ಧೋರಣೆ ಮತ್ತು ಬಳಕೆ ಎರಡರಲ್ಲಿಯೂ ಲಿಂಗಭೇದ ವ್ಯಕ್ತವಾಗುವುದನ್ನು ಗುರುತಿಸಬಹುದು ಎನ್ನುತ್ತಾರೆ.

ಸ್ತ್ರೀವಾದಿಗಳು ಸ್ತ್ರೀ-ಪುರುಷ ವಾಚಕ ಶಬ್ದಗಳಲ್ಲಿ ಒಂದರಿಂದ ಇನ್ನೊಂದು ರೂಪ ಸಿದ್ಧವಾಗಿದ್ದರೆ ಅಲ್ಲಿಯೂ ಪುರುಷವಾಚಕ ಶಬ್ದವೇ ಮೂಲರೂಪವಾಗಿದ್ದು, ಅದರಿಂದ ಸ್ತ್ರೀವಾಚಕ ಶಬ್ದಗಳನ್ನು ನಿಷ್ಪನ್ನಗೊಳಿಸಲಾಗಿದೆ ಎಂಬುದು ಪಕ್ಷಪಾತ ಸಮರ್ಥನೆಗೆ ಉದಾಹರಣೆಯಾಗಿ ಬಳಸುತ್ತಿರುವ ಅಂಶವನ್ನು ಲೇಖಕರು ವ್ಯಕ್ತಿನಾಮಗಳ ಹಿನ್ನೆಲೆಯಲ್ಲಿ ಚರ್ಚಿಸುತ್ತಾರೆ. ಹವ್ಯಕ ಸಮುದಾಯದಲ್ಲಿ ಬಳಕೆಯಲ್ಲಿರುವ ಕೆಲವು ವ್ಯಕ್ತಿನಾಮಗಳನ್ನು ಉದಾಹರಿಸುತ್ತಾರೆ. ಗಣಪ>ಗಣಪಿ, ಪರಮೇಶ್ವರ>ಪರಮೇಶ್ವರಿ ಇರುವಂತೆ ಗೌರಿ>ಗೌರ್ಯ, ಮಾರಿ>ಮಾರ್ಯ ರೂಪಗಳು ಸ್ತ್ರೀವಾಚಕಗಳಿಂದ ಪಡೆದ ಪುರುಷವಾಚಕಗಳೆಂದು ಗುರುತಿಸುತ್ತಾರೆ.

ಪುರುಷರ ಮತ್ತು ಸ್ತ್ರೀಯರ ಭಾಷೆಯ ಬಳಕೆಯ ಕೆಲವು ಲಕ್ಷಣಗಳನ್ನು ಚರ್ಚಿಸುತ್ತಾರೆ. ಉದಾ: ಆಜ್ಞಾರ್ಥಕ ವಾಕ್ಯಗಳು ಮತ್ತು ಪ್ರಶ್ನಾರ್ಥಕ ವಾಕ್ಯಗಳು. ಹುಡುಗರು, ನಾಯಕ, ಉಪನಾಯಕ ಎಂಬ ಶ್ರೇಣಿಯಿಂದ ಕೂಡಿದ ಪಂಗಡಗಳಾಗಿ ಕಾಣಿಸಿಕೊಳ್ಳುವ ಕಡೆ ಒಲವು ತೋರುತ್ತಾರೆ. ನಾಯಕನಿಂದ ಆಜ್ಞಾರೂಪಕ ವಾಕ್ಯಗಳು ಹೆಚ್ಚಾಗಿ ಬಳಕೆಯಾಗುತ್ತವೆ. ಯಜಮಾನ ಸಂಸ್ಕೃತಿ ಭಾಷೆಯಲ್ಲಿ ವ್ಯಕ್ತವಾಗುತ್ತದೆ. ಆದರೆ, ಹುಡುಗಿಯರು ಇಬ್ಬರು ಮೂವರಿಂದ ಕೂಡಿದ ತೀರ ಆಪ್ತವಲಯವನ್ನು ಅಪೇಕ್ಷಿಸುತ್ತಾರೆ. ಭಿನ್ನಾಭಿಪ್ರಾಯ ಬಂದಾಗ ಚರ್ಚೆಯ ಮೂಲಕ ಬಗೆಹರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಆದ್ದರಿಂದ ಆಜ್ಞಾರ್ಥಕ ವಾಕ್ಯಗಳ ಬಳಕೆಯೂ ಕಡಿಮೆ. ಸ್ತ್ರೀಯರು ಸಂಭಾಷಣೆಯಲ್ಲಿ ಹೆಚ್ಚು ಪ್ರಶ್ನಾರ್ಥಕ ವಾಕ್ಯಗಳನ್ನು ಬಳಸುತ್ತಾರೆ. ಗಂಡಸರು ಹೆಂಗಸರ ಮಾತುಗಳನ್ನು ಮೊಟಕು ಮಾಡುವ ರೀತಿಯ ಪ್ರತಿಕ್ರಿಯೆ ನೀಡುತ್ತಾರೆ ಎಂದು ಭಾಷೆ ಬಳಕೆಯ ವಿವಿಧ ನೆಲೆಗಳನ್ನು ವಿವರಿಸುತ್ತಾರೆ.

ಪಿ. ಮಹದೇವಯ್ಯ ಅವರ ದಿನದಿನ ೩ ಎಂಬ ಪುಸ್ತಕದಲ್ಲಿ ಪತ್ರಿಕೆಗಳಲ್ಲಿ ಬಳಸಲಾಗುತ್ತಿರುವ ಪದಗಳನ್ನು ಲಿಂಗ ಸಂಬಂಧಿ ನೆಲೆಯಲ್ಲಿ ಚರ್ಚಿಸುತ್ತಾರೆ. ಮಹಿಳಾಪರ ಚಿಂತನೆಗಳು ಪ್ರಾರಂಭವಾದ ಮೇಲೆ ಭಾಷೆಯಲ್ಲಿ ಮಹಿಳಾ ಅಸ್ಮಿತೆಯನ್ನು ಗುರುತಿಸುವ ಉದ್ದೇಶದಿಂದ ಪುರುಷ ಕೇಂದ್ರಿತ ಪದಗಳನ್ನು ಸ್ತ್ರೀ ಕೇಂದ್ರಿತ ಪದಗಳನ್ನಾಗಿ ಸೃಷ್ಟಿಸಲಾಗುತ್ತಿದೆ. ಇಂತಹ ಹೊಸರಚನೆಗಳನ್ನು ಪತ್ರಿಕೆಗಳಿಂದ ಸಂಗ್ರಹಿಸಿ ವಿವರಣೆ ಸಹಿತ ಈ ಪುಸ್ತಕದಲ್ಲಿ ಚರ್ಚಿಸಲಾಗಿದೆ. ಅಂದರೆ, ಯಾವ ಯಾವ ಸ್ತ್ರೀಸೂಚಕ ಪ್ರತ್ಯಯಗಳನ್ನು (ಣಿ, ಗಿತ್ತಿ, ತ್ತಿ, ಇ, ಎ) ಬಳಸಿಕೊಂಡು ಯಾವ ಮಾದರಿಯಲ್ಲಿ ಪದಗಳನ್ನು ನಿರ್ಮಾಣ ಮಾಡಲಾಗುತ್ತಿದೆ. ಹಾಗೂ ಈ ಪ್ರಕ್ರಿಯೆ ಎಷ್ಟರ ಮಟ್ಟಿಗೆ ನಡೆಯುತ್ತಿದೆ ಎಂದರೆ ಪದಗಳೆಲ್ಲವೂ ಪುರುಷ ಕೇಂದ್ರಿತ ಪದಗಳೆಂದು ತಿಳಿದು ಅಂತಹುಗಳನ್ನೆಲ್ಲ ಸ್ತ್ರೀ ಕೇಂದ್ರಿತ ಪದಗಳನ್ನಾಗಿ ಬಳಕೆ ಮಾಡಲಾಗುತ್ತಿದೆ ಎಂಬುದನ್ನು ಕೂಡ ಚರ್ಚಿಸಿದ್ದಾರೆ.

ಉದಾ: ಉದ್ಯೋಗಿ–ಉದ್ಯೋಗಿಣಿ
ಉಗ್ರಗಾಮಿ–ಉಗ್ರಗಾಮಿಣಿ
ಸ್ಟಾರ್–ಸ್ಟಾರಿಣಿ
ಪಾದಚಾರಿ–ಪಾದಚಾರಿಣಿ ಇತ್ಯಾದಿ.

ಗಂಗಪ್ಪ ಕೆ., ಅವರ 'ಮಹಿಳಾ ಪುರವಣಿಗಳ ಭಾಷಿಕ ಅಧ್ಯಯನ' ಎಂಬ ಎಂ.ಫಿಲ್., ಸಂಪ್ರಬಂಧದಲ್ಲಿ ಮಹಿಳಾ ಪುರವಣಿಗಳ ಭಾಷಾ ವೈವಿಧ್ಯತೆ, ಪದಗಳ ಪ್ರಯೋಗ ಹಾಗೂ ಬಳಕೆ ಮುಂತಾದ ವಿಷಯಗಳ ಮಾಹಿತಿ ಕಲೆ ಹಾಕುವುದರೊಂದಿಗೆ ಚರ್ಚೆಗೆ ಒಳಪಡಿಸಲಾಗಿದೆ. ಈ ಅಧ್ಯಯನದ ಉದ್ದೇಶ ಸಂಶೋಧಕರೇ ಹೇಳುವ ಪ್ರಕಾರ, ಸಹಜವಾಗಿ ಬಳಸುವ ಬರವಣಿಗೆಯ ಕನ್ನಡಕ್ಕೂ ಮಹಿಳಾ ಪುರವಣಿಗಳಲ್ಲಿ ಬಳಸುವ ಕನ್ನಡಕ್ಕೂ ಇರುವ ವ್ಯತ್ಯಾಸ ಮತ್ತು ಭಾಷಿಕ ರಚನೆಯಲ್ಲಿ ಆಗುವ ಪಲ್ಲಟಗಳನ್ನು ಕುರಿತು ಅಧ್ಯಯನ ಮಾಡುವುದಾಗಿದೆ.

ಇತ್ತೀಚಿನ ದಿನಗಳಲ್ಲಿ ಮಹಿಳಾಪರ ಚಿಂತನೆ ಆರಂಭವಾದ ನಂತರ ಮೇಲೆ ಹೆಣ್ಣಿನ ಪರ ಭಾಷೆಯ ಬಳಕೆ ಹೇಗೆ ಆಗಿದೆ? ಅದರ ಸ್ವರೂಪ ಎಂತಹುದು? ಎಂಬುದನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಎರಡು ನೆಲೆಯಲ್ಲಿ ಭಾಷಾ ಬಳಕೆಯನ್ನು ಗುರುತಿಸಬಹುದು ಎನ್ನುತ್ತಾರೆ.

೧. ಪುರುಷ ಕೇಂದ್ರಿತ ನೆಲೆಯಲ್ಲಿ ಮಹಿಳೆಯ ಸಮಸ್ಯೆಗಳನ್ನು ವಿವರಿಸುವುದು.

೨. ಮಹಿಳೆಯೇ ತನ್ನ ಸಾಮಾಜಿಕ ಸಮಸ್ಯೆಗಳನ್ನು ವಿವರಿಸುವಾಗ ಬಳಕೆಯಾಗುವ ಭಾಷೆ.

ಭಾಷಾ ಬಳಕೆಯ ಸಂಶೋಧನೆ ಹಂತದಲ್ಲಿ ಹೆಣ್ಣಿನ ಪ್ರತಿನಿಧೀಕರಣ ಇಲ್ಲವಾಗಿದೆ ಎನ್ನುತ್ತಾರೆ. ಹೆಣ್ಣು ಬಹುವಚನದಲ್ಲಿ ಸಂಬೋಧನೆ ಮಾಡಿದರೆ, ಗಂಡು ಹೆಣ್ಣನ್ನು ಕುರಿತು ಏಕವಚನದಲ್ಲಿ ಸಂಬೋಧನೆ ಮಾಡುತ್ತಾನೆ ಎನ್ನುತ್ತಾರೆ. ಏಕವಚನ ಬಳಸಿದ ಮಾತ್ರಕ್ಕೆ ಹೆಣ್ಣಿನ ಪ್ರತಿನಿಧೀಕರಣ ಭಾಷೆಯಲ್ಲಿ ಇಲ್ಲ ಎನ್ನುವಂತಹ ತೀರ್ಮಾನಕ್ಕೆ ಬರಲಾಗದು. ಹಾಗಾದರೆ, ಕೇವಲ ಬಹುವಚನವಷ್ಟೇ ಪ್ರತಿನಿಧೀಕರಣದ ಮಾನದಂಡವೇ? ಎನ್ನುವಂತಹ ಪ್ರಶ್ನೆ ಎದುರಾಗುತ್ತದೆ. ವಾಕ್ಯರಚನೆಯ ನೆಲೆಯಲ್ಲಿ ಕೂಡ ಭಿನ್ನತೆಯನ್ನು ಗುರುತಿಸುತ್ತಾರೆ. ಉದಾ: ಭಾರತದ ಮಹಿಳಾ ಕ್ರಿಕೆಟ್ ಆಟಗಾರ್ತಿಯರು ಜಯಗಳಿಸಿದರು. ಈ ವಾಕ್ಯದಲ್ಲಿ ಮಹಿಳೆಗೆ ಹೆಚ್ಚು ಒತ್ತು ನೀಡುವ ಉದ್ದೇಶದಿಂದ ಒಂದೇ ವಾಕ್ಯದಲ್ಲಿ ಎರಡು ಸ್ತ್ರೀ ಸೂಚಕ ಪದಗಳನ್ನು ಬಳಸಿರುವುದನ್ನು ಗುರುತಿಸುತ್ತಾರೆ.

'ಮಹಿಳಾ ಅಭಿವ್ಯಕ್ತಿಯಾಗಿ ಕನ್ನಡ ಜನಪ್ರಿಯ ಕಾದಂಬರಿಗಳು' ಎಂಬ ಶಶಿಕಲಾ ಎಂ ಮೊರಬದ ಅವರ ಪಿಎಚ್.ಡಿ., ಮಹಾ ಪ್ರಬಂಧದ ಅಧ್ಯಾಯ ೫ರಲ್ಲಿ ವ್ಯಕ್ತಪಡಿಸುವ ಕೆಲವು ಭಾಷಿಕ ಸಂಬಂಧಿ ನಿಲುವುಗಳನ್ನು ಪರಿಶೀಲಿಸಬಹುದು; "ಮಹಿಳೆ ಬಳಸುತ್ತಿರುವ ಭಾಷೆ ಗಂಡು ಭಾಷೆ, ಅವಳ ಎಲ್ಲಾ ಭಾವಗಳು ಭಾಷೆಯಾಗುವಾಗಿನ ಸಂದರ್ಭದಲ್ಲಿ ಆ ಭಾಷೆಯೆಂಬ ಪರಿಕರವೇ ಅವಳದು ಆಗಿಲ್ಲದಿರುವುದು ಅವಳ ಅಭಿವ್ಯಕ್ತಿಗೆ ಬಹುದೊಡ್ಡ ತೊಡಕಾಗುತ್ತದೆ. ಬಳಸಿದರೂ ಅನಿವಾರ್ಯವಾಗಿ ಪುರುಷನ ಆಲೋಚನೆಗಳನ್ನೇ ಕೃತಿಗಳಲ್ಲಿ ತರಬೇಕಾಗುತ್ತದೆ"[೬] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಮನುಷ್ಯರ ಆಲೋಚನೆಗಳನ್ನು ಪುರುಷ–ಸ್ತ್ರೀ ಎಂದು ವಿಭಾಗಿಸಿ ನೋಡುವ ಕ್ರಮವೇ ತಪ್ಪು ಎಂಬ ತಿಳಿವಳಿಕೆ ಮೂಡಿರುವ ಸಂದರ್ಭದಲ್ಲಿ ಸಂಶೋಧಕರು ಮತ್ತದೇ ನಿಲುವುಗಳನ್ನು ನಿರೂಪಿಸಲು ಪ್ರಯತ್ನಿಸುತ್ತಿದ್ದಾರೆ ಎನಿಸುತ್ತದೆ. ಗೆಲುವು, ನುಗ್ಗು, ಹಿಡಿ, ಕ್ರಮಿಸು ಮುಂತಾದವು ಯುದ್ಧಕ್ಕೆ ಸಂಬಂಧಿಸಿದ ಪದಗಳು. ಯುದ್ಧ ಪುರುಷನ ಕ್ಷೇತ್ರ, ಆದ್ದರಿಂದ ಇವುಗಳು ಪುರುಷ ಪದಕೋಶಗಳು. ಸೀರೆ, ಅಡುಗೆ, ಅಲಂಕಾರ ಮುಂತಾದವುಗಳು ಹೆಣ್ಣಿನ ಕ್ಷೇತ್ರ, ಅದಕ್ಕೆ ಇಲ್ಲಿ ಬಳಕೆಯಾಗುವ ಭಾಷೆ ಹೆಣ್ಣಿನ ಭಾಷೆ ಎಂಬ ನಿಲುವು ಕೂಡ ಅಸಮರ್ಪಕ ವಿಂಗಣೆಯ ಮಾದರಿ ಎಂದು ಹೇಳಬಹುದು.

ಸಂಶೋಧಕರ ಅಧ್ಯಾಯ ಎರಡರ ನಿಲುವುಗಳಿಗೂ ಅಧ್ಯಾಯ ಐದರ ನಿಲುವುಗಳಿಗೂ ಪರಸ್ಪರ ವೈರುಧ್ಯಗಳಿವೆ ಎನಿಸುತ್ತದೆ. ಅಧ್ಯಾಯ ಎರಡರಲ್ಲಿ ಗುಣಗಳನ್ನು ಸ್ತ್ರೀ–ಪುರುಷ ಗುಣಗಳೆಂದು ವಿಂಗಡಿಸುವಿಕೆಯನ್ನು ಸಂಶೋಧಕರು ವಿರೋಧಿಸುತ್ತಾರೆ. ಆದರೆ ಐದನೇ ಅಧ್ಯಾಯದಲ್ಲಿ ಅದೇ ಮಾದರಿಯಲ್ಲಿ ವಿಂಗಡಿಸುವ ಕೆಲಸವನ್ನು ಭಾಷಾ ಲಕ್ಷಣಗಳನ್ನು ಗುರುತಿಸುವಿಕೆಯಲ್ಲಿ ಮಾಡಿದ್ದಾರೆ.

ಒಟ್ಟಾರೆ ಭಾಷೆ ಮತ್ತು ಲಿಂಗ ಸಂಬಂಧವನ್ನು ಕುರಿತ ಪಾಶ್ಚಾತ್ಯರ ಸಂದರ್ಭಗಳಲ್ಲಿನ ಚರ್ಚೆಗಳು ಹಾಗೂ ಕನ್ನಡದ ಸಂದರ್ಭಗಳಲ್ಲಿನ ಚರ್ಚೆಗಳೆರಡನ್ನೂ ಪರಿಶೀಲಿಸುವುದಾದರೆ, ಎಲ್ಲ ಸ್ತ್ರೀವಾದಿಗಳು ಸಮಾಜದಲ್ಲಿನ ಲಿಂಗತಾರತಮ್ಯದ ಪೂರ್ವಗ್ರಹಗಳಿಂದಲೇ ಭಾಷೆ ಮತ್ತು ಲಿಂಗ ಸಂಬಂಧಗಳ ಕುರಿತ ಚರ್ಚೆಗೆ ತೊಡಗುತ್ತಾರೆ ಎನಿಸುತ್ತದೆ. ಅಲ್ಲದೆ ಅವುಗಳ ಸಮರ್ಥನೆಗಾಗಿ ಪೂರಕವಾದ ಉದಾಹರಣೆಗಳನ್ನು ಮಾತ್ರ ಚರ್ಚೆಗೆ ಬಳಸಿಕೊಳ್ಳುತ್ತಿದ್ದಾರೆ ಎನಿಸುತ್ತದೆ. ಭಾಷೆಯ ಬಹುಮುಖ ಆಯಾಮಗಳನ್ನು ಪರಿಗಣಿಸುತ್ತಿಲ್ಲ. ಎಲ್ಲ ಬಗೆಯ, ಎಲ್ಲ ಸಂದರ್ಭದ ಭಾಷಾ ಬಳಕೆಯನ್ನು ಏಕಮುಖವಾಗಿ ವಿಶ್ಲೇಷಿಸುತ್ತಿದ್ದಾರೆ ಎನಿಸುತ್ತದೆ. ಯಾವುದೋ ಒಂದು ಸಂದರ್ಭದ, ಯಾವುದೇ ಒಂದು ವರ್ಗದ, ಯಾವುದೋ ಒಂದು ಮಾದರಿಯ ಭಾಷಾ ಬಳಕೆಯನ್ನು ಸ್ತ್ರೀ ಸಮುದಾಯಕ್ಕೆ ಅನ್ವಯವಾಗುವ ನೆಲೆಯಲ್ಲಿ ಅವರ ಚರ್ಚೆಗಳು ಕಾಣುತ್ತಿವೆ. ಸಾಮಾಜಿಕ, ಸಾಂಸ್ಕೃತಿಕ ನೆಲೆಯ ನಂಬಿಕೆ, ಮೌಲ್ಯಗಳು, ಆಚರಣೆಗಳು ಭಾಷೆಯ ಮುಖಾಂತರ ಅಭಿವ್ಯಕ್ತಗೊಳ್ಳುವುದರಿಂದ ಮೇಲುನೋಟಕ್ಕೆ ಭಾಷೆಯಲ್ಲಿ ಲಿಂಗತಾರತಮ್ಯವಿದೆ ಎನಿಸಬಹುದಾದರೂ ಅದರ ಬಹುಮುಖಿ ಆಯಾಮಗಳನ್ನು ಪರಿಶೀಲಿಸಿದಾಗ ಬೇರೆ ರೀತಿಯ ಫಲಿತಗಳು ಹೊರಬೀಳುತ್ತವೆ. ಸಂವಹನ ಆಕರಗಳು ಲಿಂಗತಾರತಮ್ಯವನ್ನು ನಿರ್ಮಿಸುತ್ತವೆ, ಪೋಷಿಸುತ್ತವೆ ಎಂಬುದಕ್ಕಿಂತ, ಅವುಗಳು ಸಮಾಜದಲ್ಲಿನ ಲಿಂಗತಾರತಮ್ಯವನ್ನು ಪ್ರತಿಬಿಂಬಿಸುತ್ತಿರುತ್ತವೆ ಎನ್ನಬಹುದು.

**ಉಲ್ಲೇಖಗಳು**

೧. ಮೂಲ: ಸಿಮೋನ್ ದ ಬೋವಾ, ಅನು: ಶ್ರೀಮತಿ ಎಚ್.ಎಸ್, ೨೦೧೧, ದ ಸೆಕೆಂಡ್ ಸೆಕ್ಸ್, ಪು.ಸಂ. ೧೯.

೨. ಅದೇ, ಪು.ಸಂ. ೫೦.

೩. ವೆಂಕಟೇಶ ಮೂರ್ತಿ ಟಿ., ೨೦೦೯, ಕನ್ನಡ ನಾಟಕ ಯಾಜಮಾನ್ಯ ಸಂಕಥನ, ಪು.ಸಂ. ೨೭೭.

೪. ಶ್ರೀಮತಿ ಎಚ್.ಎಸ್., ೨೦೦೯, ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ, ಪು.ಸಂ. ೧೨೬.

೫. ಅದೇ, ಪು.ಸಂ. ೧೩೪

೬. ಅದೇ, ಪು.ಸಂ. ೧೩೭

೭. ಶ್ರೀಮತಿ ಎಚ್.ಎಸ್., ೨೦೦೯, ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ, ಪು.ಸಂ. ೧೩೮.

೮. ಅದೇ, ಪು.ಸಂ. ೨೯೦

೯. ಅದೇ, ಪು.ಸಂ. ೩೧೯-೩೨೦

೧೦. ಅದೇ, ಪು.ಸಂ. ೧೧೫

೧೧. ಅದೇ, ಪು.ಸಂ. ೧೨೦

೧೨. ಅದೇ, ಪು.ಸಂ. ೧೨೨

೧೩. ಅದೇ, ಪು.ಸಂ. ೧೪೨-೧೪೩

೧೪. ಅದೇ, ಪು.ಸಂ. ೨೬೮

೧೫. ಅದೇ, ಪು.ಸಂ. ೨೭೧

೧೬. ನಾಗಭೂಷಣಸ್ವಾಮಿ ಓ.ಎಲ್., ೧೯೯೮, ವಿಮರ್ಶೆಯ ಪರಿಭಾಷೆ, ಪು.ಸಂ. ೩೮೯.

೧೭. ಶ್ರೀಮತಿ ಎಚ್.ಎಸ್., ೨೦೦೯, ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ, ಪು.ಸಂ. ೨೬೯.

೧೮. ಅದೇ, ಪು.ಸಂ. ೨೬೯

೧೯. ಸುಮಿತ್ರಾ ಬಾಯಿ ಬಿ.ಎನ್., ೨೦೦೬, ಸ್ತ್ರೀವಾದ, ಪು.ಸಂ. ೯೧.

೨೦. ಅದೇ, ಪು.ಸಂ. ೯೩

೨೧. ಶ್ರೀಮತಿ ಎಚ್.ಎಸ್., ೨೦೦೯, ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ, ಪು.ಸಂ. ೨೬೮.

೨೨. ಸುಮಿತ್ರಾ ಬಾಯಿ ಬಿ.ಎನ್, ೨೦೦೬, ಸ್ತ್ರೀವಾದ, ಪು.ಸಂ. ೩೧.

೨೩. ಪೆನಲಪೆ ಎಕರ್ಟ್, ೧೯೯೨, Think practically and look locally: Language and gender as community based practice, ಪು.ಸಂ. ೪೬೪.

೨೪. ಡೊಬೆರಾ ಟೆನನ್, ೧೯೯೩, Gender and conversational Interaction, ಪು.ಸಂ. ೯.

೨೫. ಶ್ರೀಮತಿ ಎಚ್.ಎಸ್., ೨೦೦೯, ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ, ಪು.ಸಂ. ೨೯೯

೨೬. ಅದೇ, ಪು.ಸಂ. ೧೪೩

೨೭. ಅದೇ, ಪು.ಸಂ. ೨೭೩

೨೮. ಅದೇ, ಪು.ಸಂ. ೨೭೩

೨೯. ಮಾಧವ ಪೆರಾಜೆ, ೨೦೦೩, ಡೆರಿಡಾ, ಜಾಗತೀಕ ಚಿಂತಕರ ಮಾಲೆ, ಪು.ಸಂ. ೯.

೩೦. ಅದೇ, ಪು.ಸಂ.೨೦

೩೧. ಅದೇ, ಪು.ಸಂ. ೨೧

೩೨. ಶ್ರೀಮತಿ ಎಚ್.ಎಸ್., ೨೦೦೯, ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ, ಪು.ಸಂ. ೧೩೩.

೩೩. ಅದೇ, ಪು.ಸಂ. ೨೦೭

೩೪. ಅದೇ, ಪು.ಸಂ. ೩೨೭

೩೫. ಅದೇ, ಪು.ಸಂ. ೩೨೬

೩೬. ಪ್ರೀತಿ ಶುಭಚಂದ್ರ, ೨೦೦೪, ಮಹಿಳಾ ಅಧ್ಯಯನ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪು.ಸಂ. ೧೨೪.

೩೭. ಅದೇ, ಪು.ಸಂ. ೧೨೬

೩೮. ಅದೇ, ಪು.ಸಂ. ೧೫೧

೩೯. ಶ್ರೀಮತಿ ಎಚ್.ಎಸ್(ಸಂ), ೨೦೦೭, ಹೆಣ್ಣು ಮತ್ತು ಭಾಷೆ, ಪು.ಸಂ. ೬-೭.

೪೦. ಅದೇ, ಪು.ಸಂ. ೧೧

೪೧. ಅದೇ, ಪು.ಸಂ. ೧೨

೪೨. ಅದೇ, ಪು.ಸಂ. ೪೩

೪೩. ಅದೇ, ಪು.ಸಂ. ೪೩

೪೪. ಅದೇ, ಪು.ಸಂ. ೫೭

೪೫. ಅದೇ, ಪು.ಸಂ. ೬೫

೪೬. ಅದೇ, ಪು.ಸಂ. ೬೫

೪೭. ಅದೇ, ಪು.ಸಂ. ೭೫

೪೮. ಅದೇ, ಪು.ಸಂ. ೪೭

೪೯. ಅದೇ, ಪು.ಸಂ. ೯೪-೯೫

೫೦. ಅದೇ, ಪು.ಸಂ. ೧೧೫

೫೧. ಅದೇ, ಪು.ಸಂ. ೧೨೧

೫೨. ಅದೇ, ಪು.ಸಂ. ೧೧೯

೫೩. ಪಾಂಡುರಂಗ ಬಾಬು ಡಿ., ೨೦೧೨, ಲಿಂಗತಾರತಮ್ಯದ ಸ್ತ್ರೀವಾದಿ ಗ್ರಹಿಕೆ–ಭಾಷಿಕ ಆಕರಗಳ ಬಳಕೆಯ ಸವಾಲುಗಳು, ನಮ್ಮ ಕನ್ನಡ, ಸಂಚಿಕೆ–೬೭, ಪು.ಸಂ. ೧

೫೪. ಅದೇ, ಪು.ಸಂ. ೨

೫೫. ಅದೇ, ಪು.ಸಂ. ೩

೫೬. ಶ್ರೀಮತಿ ಎಚ್.ಎಸ್., ೨೦೦೭, ಹೆಣ್ಣು ಮತ್ತು ಭಾಷೆ, ಪು.ಸಂ. ೧೩೭.

೫೭. ಸಾಂಬಮೂರ್ತಿ, ೨೦೧೨, ಭಾಷಾ ಬಳಕೆಯ ಲಿಂಗಸಂಬಂಧಿ ಆಯಾಮಗಳು: ಅನೌಪಚಾರಿಕ ನೆಲೆಯಲ್ಲಿ, ನಮ್ಮ ಕನ್ನಡ, ಸಂಚಿಕೆ–೬೭, ಪು.ಸಂ. ೪

೫೮. ಶ್ರೀಮತಿ ಎಚ್.ಎಸ್., ೨೦೦೯, ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ, ಪು.ಸಂ. ೦೪.

೫೯. ಅದೇ, ಪು.ಸಂ. ೮

೬೦. ಶ್ರೀಮತಿ ಎಚ್.ಎಸ್., ೨೦೧೨, ಸ್ತ್ರೀವಾದ: ತಾತ್ತ್ವಿಕತೆ, ಪು.ಸಂ. ೪೧೮.

೬೧. ಅದೇ, ಪು.ಸಂ. ೪೧೯.

೬೨. ಅದೇ, ಪು.ಸಂ. ೪೧೯.

೬೩. ಅಶೋಕ ಕುಮಾರ ರಂಜೇರೆ, ೨೦೧೨, ಕನ್ನಡದಲ್ಲಿ ಲಿಂಗಸಂಬಂಧಿ ಆಯಾಮಗಳು: ಔಪಚಾರಿಕ ಬಳಕೆ, ನಮ್ಮ ಕನ್ನಡ, ಸಂಚಿಕೆ ೬೭, ಪು.ಸಂ. ೭

೬೪. ಶ್ರೀಮತಿ ಎಚ್.ಎಸ್., ೨೦೧೨, ಸ್ತ್ರೀವಾದ: ತಾತ್ತ್ವಿಕತೆ, ಪು.ಸಂ. ೨೦೭–೨೦೮.

೬೫. ಅದೇ ಪು.ಸಂ.೨೦೯.

೬೬. ಅದೇ ಪು.ಸಂ.೪೨೬.

೬೭. ಅದೇ ಪು.ಸಂ.೪೩೯.

೬೮. ಕೃಷ್ಣ ಪರಮೇಶ್ವರ ಭಟ್ಟ, ೨೦೧೩, ಭಾಷೆ ಮತ್ತು ಸಾಮಾಜಿಕ ಸಂದರ್ಭ, ಪು.ಸಂ. ೨೫.

೬೯. ಶಶಿಕಲಾ ಎಂ ಮೊರಬದ, ೨೦೦೯, ಮಹಿಳಾ ಅಭಿವ್ಯಕ್ತಿಯಾಗಿ ಕನ್ನಡ ಜನಪ್ರಿಯ ಕಾದಂಬರಿಗಳು, ಪು.ಸಂ.೧೯೪.

ಅಧ್ಯಾಯ–ಮೂರು

# ಕನ್ನಡ ಭಾಷೆಯ ರಚನೆ ಮತ್ತು ಬಳಕೆಯ ಲಿಂಗಸಂಬಂಧಿ ನೆಲೆಗಳು

ಅಧ್ಯಾಯ–ಮೂರು

# ಕನ್ನಡ ಭಾಷೆಯ ರಚನೆ ಮತ್ತು ಬಳಕೆಯ ಲಿಂಗಸಂಬಂಧಿ ನೆಲೆಗಳು

ಸಮುದಾಯಗಳಲ್ಲಿನ ಯಾವುದೇ ವಿಷಯದ ಸ್ವರೂಪವನ್ನು ನಿರ್ಧರಿಸುವಲ್ಲಿ ಅವುಗಳು ಅನುಸರಿಸುವ ಮಾನದಂಡಗಳು, ಅದರ ಮೂಲಕ ಬರುವ ನಿಲುವುಗಳು, ನಿರ್ವಚನಗಳು ಅದರ ಹಿಂದಿನ ತಾತ್ವಿಕತೆಯನ್ನು ತಿಳಿಯುವಲ್ಲಿ ಸಹಕಾರಿಯಾಗುತ್ತವೆ. ಈ ಹಿನ್ನೆಲೆಯಲ್ಲಿ ಸಮುದಾಯಗಳ ನಿರ್ವಚನಗಳ ಚೌಕಟ್ಟುಗಳಲ್ಲಿ ಲಿಂಗಸಬಂಧಿ ಗ್ರಹಿಕೆಗಳ ಅಭ್ಯಾಸ ಮುಖ್ಯವಾಗುತ್ತದೆ. ಭಾಷೆ ಮತ್ತು ಲಿಂಗಸಂಬಂಧವನ್ನು ಪರಿಶೀಲಿಸಲು ಭಾಷೆಯನ್ನು ಮೂರು ಸ್ತರಗಳಲ್ಲಿ ಪರಿಶೀಲಿಸಬೇಕಾಗುತ್ತದೆ. ಅವುಗಳೆಂದರೆ;

೧. ಭಾಷೆಯ ರಚನೆಯ ಸ್ತರ.

೨. ಭಾಷೆಯ ಬಳಕೆಯ ಸ್ತರ.

೩. ಸಮುದಾಯದ ಆಶಯದ ಸ್ತರಗಳು.

ರಚನೆಯ ಸ್ತರದಲ್ಲಿ ಪದ, ಪದಗಳ ಅರ್ಥ ಅನ್ವಯಗಳ ನಿಯಮಗಳು, ಬಳಕೆಯ ಸ್ತರದಲ್ಲಿ ನಿಷೇಧ, ನಿರ್ಬಂಧ ಹಾಗೂ ಇವುಗಳ ಮೀರುವಿಕೆಯ ಪ್ರಯತ್ನಗಳನ್ನು, ಆಶಯದ ಸ್ತರದಲ್ಲಿ ಲಿಂಗಸಂಬಂಧವನ್ನು ಕುರಿತ  ಸಮುದಾಯದ ನಿಲುವುಗಳನ್ನು, ಅವು ಭಾಷೆಯ ಬಳಕೆಯ ನೆಲೆಗಳನ್ನು ನಿಯಂತ್ರಿಸುತ್ತಿರುವ ರೀತಿಗಳನ್ನು ಒಳಗೊಂಡಿರುತ್ತದೆ.

ಲಿಂಗತಾರತಮ್ಯ ಮತ್ತು ಭಾಷೆಯ ಸಂಬಂಧವನ್ನು ಅರಿಯುವ ಪ್ರಯತ್ನದಲ್ಲಿ ಭಾಷೆಯ ಸ್ವರೂಪದ ಚರ್ಚೆಗೆ ಮುಂದಾದ ಸ್ತ್ರೀವಾದಿಗಳು, ಭಾಷೆಯ ಪ್ರತಿಯೊಂದು ರಾಚನಿಕ ಹಂತವೂ ಹಾಗೂ ಶಾಬ್ದಿಕ ಬಳಕೆಯೂ ಪುರುಷ ಕೇಂದ್ರಿತವಾದದ್ದು ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ. ಈ ಹಿನ್ನೆಲೆಯಲ್ಲಿ ಭಾಷೆಯ ರಚನೆಯೂ ಮೂಲತಃ ಲಿಂಗತಾರತಮ್ಯದ ನೆಲೆಯಲ್ಲಿಯೇ ರಚಿತವಾಗಿದೆಯೇ? ಅಥವಾ ಇಲ್ಲವೇ? ಎಂಬುದನ್ನು ಸ್ಪಷ್ಟಪಡಿಸಿಕೊಳ್ಳಲು ಭಾಷೆಯ ರಚನಾ ಸ್ವರೂಪವನ್ನು ವಿಶ್ಲೇಷಿಸುವುದು

ಸೂಕ್ತವೆನಿಸುತ್ತದೆ. ಈ ನೆಲೆಯಲ್ಲಿ ಭಾಷೆಯನ್ನು ಧ್ವನ್ಯಾತ್ಮಕ, ಪದಾತ್ಮಕ ಮತ್ತು ಅರ್ಥಾತ್ಮಕ ಸ್ತರಗಳಲ್ಲಿ ಪರಿಶೀಲಿಸಬೇಕಾಗುತ್ತದೆ.

ಭಾಷಿಕಾಂತಗಳಿಗೂ ಲಿಂಗಭೇದಕ್ಕೂ ಇರುವ ಸಂಬಂಧವು ಧ್ವನಿ ಉಚ್ಚಾರಣೆಯ ಹಂತದಲ್ಲಿ ಕಾಣಿಸುತ್ತದೆಯೇ? ಅಥವಾ ಸಾಮಾಜಿಕ ಗ್ರಹಿಕೆಗಳನ್ನು ಅವುಗಳಿಗೂ ಆರೋಪಿಸಲಾಗುತ್ತಿದೆಯೇ? ಎಂಬ ಪ್ರಶ್ನೆಗಳು ಉಂಟಾಗುತ್ತವೆ. ಇಲ್ಲಿ ಧ್ವನಿ ಎಂದರೆ ಉಚ್ಚಾರಣಾ ಧ್ವನಿ(Soundes) ಎಂದು ಮಾತ್ರ, ಭಾಷೆಯ ಅತಿಚಿಕ್ಕ ಘಟಕ ಧ್ವನಿಯಲ್ಲ ಎಂಬುದನ್ನು ಪರಿಗಣಿಸಬೇಕು. ಒಬ್ಬರ ಉಚ್ಚರಿತ ಧ್ವನಿಗೂ ಮತ್ತೊಬ್ಬರ ಉಚ್ಚರಿತ ಧ್ವನಿಗೂ ವ್ಯತ್ಯಾಸಗಳಿರುತ್ತವೆ. ಇವು ಜೈವಿಕ ಭಿನ್ನತೆಗೆ ಸಂಬಂಧಪಟ್ಟಂತಹ ವಿಚಾರಗಳು. ವ್ಯಕ್ತಿಗಳು ಉಚ್ಚರಿಸುವ ಧ್ವನಿಗಳ ಮುಖಾಂತರವೇ ಇವರು ಗಂಡು, ಹೆಣ್ಣು, ತೃತೀಯ ಲಿಂಗಿ ಎಂದು ಗುರುತಿಸಲು ಸಾಧ್ಯವಿದೆ.

ಪಾಶ್ಚಾತ್ಯ ರಾಷ್ಟ್ರಗಳ ಸ್ತ್ರೀವಾದಿಗಳು ಒಂದು ಧ್ವನಿಯ ಉಚ್ಚಾರಣಾ ಶೈಲಿಗೂ ಲಿಂಗಭಿನ್ನತೆಗೂ ಸಂಬಂಧವಿದೆಯೇ? ಎಂಬುದನ್ನು ಪರಿಶೀಲಿಸಲು ಮುಂದಾದರು. ಅಮೆರಿಕದ ಉತ್ತರ ರಾಜ್ಯಗಳ ಇಂಗ್ಲಿಷ್‌ನಲ್ಲಿ ನಾಲಿಗೆಯ ತುದಿಯನ್ನು ಬಳಸಿ 'ಸ್' ಧ್ವನಿಯನ್ನು ಉಚ್ಚರಿಸುತ್ತಾರೆ. ಒಂದು ವೇಳೆ ಈ ಪ್ರದೇಶದ ಜನರೇ ನಾಲಿಗೆಯ ತುದಿಯನ್ನು ಮೇಲಿನ ಹಲ್ಲಿನ ಸಾಲಿನ ಹಿಂಬದಿಯ ಹತ್ತಿರ ತಂದು ಉಚ್ಚಾರಿಸಿದರೆ ಅದನ್ನು 'ಲಿಸ್ಪ್' ಎನ್ನುತ್ತಾರೆ. ಈ ಲಿಸ್ಪ್ ಮಾದರಿಯ 'ಸ್' ಉಚ್ಚಾರಣೆಗೂ ಹೆಣ್ಣುತನಕ್ಕೂ ಸಂಬಂಧ ಕಲ್ಪಿಸಲಾಗಿದೆ. ಒಂದು ವೇಳೆ ಗಂಡಸರು 'ಸ್'ಅನ್ನು ಹೀಗೆ ಉಚ್ಚರಿಸಿದರೆ ಅವರು ಸಲಿಂಗಕಾಮಿಗಳೆಂದು ತಿಳಿಯುವ ಪರಿಪಾಠವಿದೆ.[೧]

೧೯೯೮ರಲ್ಲಿ ಎಲಿಜಬೆತ್ ಸ್ಟ್ರಾಂಡ್ ಮತ್ತು ಹೀಥ್ ಜಾನ್ಸನ್ ಎಂಬ ಧ್ವನಿ ರಚನಾ ಶಾಸ್ತ್ರಜ್ಞರು ಇಂಥದ್ದೇ ಮತ್ತೊಂದು ಪ್ರಯೋಗವನ್ನು ಮಾಡಿದರು. ಮಾತನಾಡುವವರ ಜಂಡರ್ ಬಗೆಗೆ ಕೇಳುವವರು ಹೊಂದಿರುವ ನಂಬಿಕೆಗೂ, ಅವರು ಮಾತನಾಡಿದ ಧ್ವನಿಗಳನ್ನು ಗ್ರಹಿಸುವ ಬಗೆಗೂ ಸಂಬಂಧವಿರುತ್ತದೆ ಎನ್ನುವುದು ಈ ಪ್ರಯೋಗದ ಪ್ರಮೇಯವಾಗಿತ್ತು. 'ಎಸ್' ಧ್ವನಿಯನ್ನು ಹೆಂಗಸರು ಗಂಡಸರಿಗಿಂತ ಹೆಚ್ಚಿನ ಶೃತಿಯಲ್ಲಿ ಉಚ್ಚರಿಸುತ್ತಾರೆ. ಅದು ಈ ಹೆಚ್ಚಿನ ಶೃತಿಯಿಂದಾಗಿ ಹೆಂಗಸರು sim ಮತ್ತು shim ಪದಗಳನ್ನು ಉಚ್ಚರಿಸುವಾಗ ಅವರ ಉಚ್ಚಾರಣೆಯಲ್ಲಿ ಈ ಎರಡೂ ಪದಗಳ ಮೊದಲ ಧ್ವನಿಗಳು ಒಂದೇ ಎಂಬಂತೆ ತೋರುತ್ತವೆ. ವಿವಿಧ ಜನರಲ್ಲಿ ಧ್ವನಿ ಮುದ್ರಿಸಿಕೊಂಡು ನೀವು ಕೇಳಿಸಿಕೊಂಡ ಪದ sod ಆಗಿತ್ತೋ ಇಲ್ಲವೆ shod ಆಗಿತ್ತೋ ಎಂಬುದೇ ಆ ಪ್ರಶ್ನೆ. ಈ ಪ್ರಯೋಗದಿಂದ ಕೇಳಿಸಿಕೊಳ್ಳುವವರು sod ಮತ್ತು shod ಪದಗಳ ಮೊದಲ ಧ್ವನಿಗಳ ನಡುವಣ ವ್ಯತ್ಯಾಸವನ್ನು ಗ್ರಹಿಸುವಾಗ ತಮ್ಮ ಕಿವಿಗಳಿಂತ ತಾವು ಕಣ್ಣುಗಳಿಂದ ನೋಡುತ್ತಿದ್ದ ಮಾತನಾಡುವವರು ಗಂಡಸರೋ ಇಲ್ಲವೋ ಹೆಂಗಸರೋ ಎಂಬುದನ್ನು ಹೆಚ್ಚು ಅವಲಂಬಿಸಿದ್ದು ಕಂಡುಬಂದಿತು[೨] ಎಂದಿದ್ದಾರೆ.

ಕಡಿಮೆ ಶೃತಿಯಲ್ಲಿ ಧ್ವನಿಯನ್ನು ಉಚ್ಚರಿಸಿದರೂ ನೋಡಿದ ಚಿತ್ರ ಹೆಂಗಸಿನದ್ದಾಗಿದ್ದರೆ ಅದನ್ನವರು ಹೆಚ್ಚಿನ ಶೃತಿಯ ಉಚ್ಚಾರಣೆ ಎಂದೇ ಕೇಳಿಸಿಕೊಂಡು ಅದನ್ನು shod ಎಂದು ಗುರುತಿಸಿದ್ದರು. ಈ

ಪ್ರಯೋಗದಿಂದ ಎಲಿಜಬೆತ್ ಸ್ಟ್ರಾಂಡ್ ಮತ್ತು ಹೀಥ್ ಜಾನ್ಸನ್ ಧ್ವನಿಗಳಿರುವ ಸೂಕ್ಷ್ಮ ವ್ಯತ್ಯಾಸಗಳನ್ನು ಗುರುತಿಸುವುದನ್ನು ಕಲಿತುಕೊಳ್ಳುವ ಭಾಷಿಕರು, ತಮಗೆ ಗೊತ್ತಿಲ್ಲದಂತೆ ಅದನ್ನು ಕೆಲವು ಸಾಮಾಜಿಕ ಸಂಗತಿಗಳೊಡನೆ ಅನ್ವಯಿಸಿಕೊಳ್ಳುತ್ತಾರೆ ಎಂಬ ತೀರ್ಮಾನಕ್ಕೆ ಬರುತ್ತಾರೆ.

ಪಾಶ್ಚಾತ್ಯರಲ್ಲಿ ಭಾಷೆಯ ಉಚ್ಚಾರಣೆಯನ್ನು ಉನ್ನತಮಾದರಿ, ಉನ್ನತವಲ್ಲದ ಮಾದರಿ ಎಂದು ಎರಡು ನೆಲೆಗಳಲ್ಲಿ ಗುರುತಿಸುವ ಪರಿಪಾಠವಿದೆ. ಅಲ್ಲಿನ ಅನೇಕ ಅಧ್ಯಯನಗಳು ಹೆಣ್ಣು ಹೆಚ್ಚು ಉನ್ನತಮಟ್ಟದ (Standard form) ಭಾಷೆಯನ್ನು ಬಳಸುತ್ತಾಳೆ ಎಂದು ತಿಳಿಸಿವೆ. ಹಾಗಾಗಿ ಭಾಷೆಯ ಉನ್ನತಮಟ್ಟದ ಮಾದರಿಯನ್ನು ಗಂಡು ಬಳಸಿದರೂ ಹೆಣ್ಣು ಬಳಸಿದ್ದೆಂದು ತಿಳಿಯುವ ಗೊಂದಲಗಳು ಅಲ್ಲಿ ಉಂಟಾಗಲು ಅವಕಾಶಗಳಿವೆ. ಈ ರೀತಿಯ ಪರಿಸ್ಥಿತಿ ಕನ್ನಡ ಭಾಷಿಕರಿಗಿಲ್ಲ. ಪ್ರಾದೇಶಿಕವಾಗಿ ಧ್ವನಿ ಉಚ್ಚಾರಣಾ ಭಿನ್ನತೆಯನ್ನು ಇಲ್ಲಿ ಗುರುತಿಸಲು ಸಾಧ್ಯ. ಧ್ವನಿಗಳ ಉಚ್ಚಾರಣಾ ಶೈಲಿಯಲ್ಲಿ ಪುರುಷ ಮತ್ತು ಸ್ತ್ರೀಯರಲ್ಲಿ ಭಿನ್ನತೆಗಳನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಹಾಗಾಗಿ ಧ್ವನಿಗಳ ಉಚ್ಚಾರಣಾ ಶೈಲಿಯಲ್ಲಿ ಲಿಂಗಸಂಬಂಧಿ ಗ್ರಹಿಕೆಗಳನ್ನು ಹೇರಲು ಸಾಧ್ಯವಾಗುವುದಿಲ್ಲ.

ಜಗತ್ತಿನಾದ್ಯಂತ ಎಲ್ಲ ಸ್ತ್ರೀ–ಪುರುಷರಲ್ಲೂ ಧ್ವನಿ (sound) ಭಿನ್ನತೆಗಳಿವೆ. ಇವು ಜೈವಿಕ ಕಾರಣಗಳಿಂದ ಗುರುತಿಸುವ ಭಿನ್ನತೆಗಳು. ಹೆಣ್ಣಿನ ಧ್ವನಿಯಲ್ಲಿ ಮೃದುತ್ವ, ಲಯತ್ವಗಳಿದ್ದರೆ; ಗಂಡಿನ ಧ್ವನಿಯಲ್ಲಿ ಗಡಸುತನವಿರುತ್ತದೆ. ಇದಕ್ಕೆ ಅವರ ಧ್ವನಿಪೆಟ್ಟಿಗೆಯ ರಚನೆಯ ಭಿನ್ನತೆಯೂ ಕಾರಣವಾಗಿದೆ. ಇದಕ್ಕೆ ವಿರುದ್ಧವಾದಂತಹ ಉದಾಹರಣೆಗಳೂ ದೊರೆಯುತ್ತವೆ. ಗಂಡು ಮೃದುವಾಗಿ, ರಾಗವಾಗಿ ಮಾತಾಡುವ, ಹೆಣ್ಣು ಗಡುಸಾಗಿ ಮಾತನಾಡುವ ಮಾದರಿಗಳಿಗೆ ಸಂಬಂಧಿಸಿದಂತೆ ಕೆಲವು ನಿರ್ಬಂಧಗಳು ಸಮಾಜದಲ್ಲಿವೆ. ಉದಾಹರಣೆಗೆ:

ಹೆಣ್ಣಿಗೆ – ಹೆಣ್ಣುಹುಡುಗಿ ಎಷ್ಟು ಜೋರಾಗಿ ಮಾತಾಡೋದು ಬಾಯಿ ಮುಚ್ಚು. ಗಂಡು ಬೀರಿತರ ಮಾತಾಡ್ತೀಯ.

ಗಂಡಿಗೆ– ಸಂಗನ ತರ ಮಾತಾಡ್ತೀಯ ನಾಚಿಕೆಯಾಗಲ್ವ.

ಇಲ್ಲಿ ಹೆಣ್ಣು ಗಂಡಿನ ರೀತಿ ಮಾತಾಡುವಿಕೆ, ಗಂಡು ಹೆಣ್ಣಿನ ರೀತಿ ಮಾತಾಡುವಿಕೆಯನ್ನು ಸಮಾಜ ತಿರಸ್ಕಾರದಿಂದ ನೋಡುತ್ತದೆ. ತೃತೀಯ ಲಿಂಗಿಗಳ ಧ್ವನಿ ಗಂಡಿನಂತಿದ್ದು, ಅದಕ್ಕೆ ಹೆಣ್ಣಿನಂತೆ ಲಯ, ಮೃದುತ್ವ ತಂದು ಮಾತನಾಡುತ್ತಾರೆ. ಅವರು ಸಾಮಾಜಿಕವಾಗಿ ಅಪಹಾಸ್ಯಕ್ಕೆ ಒಳಗಾಗಲು ಈ ರೀತಿಯ ಉಚ್ಚಾರಣಾ ಮಾದರಿಯೂ ಒಂದು ಕಾರಣವಾಗಿದೆ.

**೩.೧. ಪದರಚನೆ ಮತ್ತು ಅರ್ಥದ ನೆಲೆಗಳು**

ಪದರಚನೆಯಲ್ಲಿ ಧ್ವನಿಗಳು ಒಗ್ಗೂಡಿ ಅರ್ಥವುಳ್ಳ ಪದಗಳಾಗಿ ಕಟ್ಟಿಕೊಳ್ಳುತ್ತವೆ. ಪದರಚನೆಗೂ, ಅದು ವ್ಯಕ್ತಪಡಿಸುವ ಅರ್ಥಗಳಿಗೂ ಲಿಂಗತಾರತಮ್ಯಕ್ಕೂ ಸಂಬಂಧವಿದೆ ಎಂಬುದು ಸ್ತ್ರೀವಾದಿಗಳ ನಿಲುವು. ಭಾಷಾಶಾಸ್ತ್ರಜ್ಞರ ದೃಷ್ಟಿಯಿಂದ ಒಂದು ಪದದ ಅರ್ಥವನ್ನು ಅದು ಇತರ ಪದಗಳೊಡನೆ

ಹೊಂದಿರುವ ಸಮನಾರ್ಥಕ ಅಥವಾ ವಿರುದ್ಧಾರ್ಥಕ ನೆಲೆಗಳಿಂದ ಗುರುತಿಸಲಾಗುತ್ತದೆ. ಹಾಗಾಗಿ ಅರ್ಥವೆಂಬುದು ಕೇವಲ ಭಾಷಿಕ ವ್ಯಾಪಾರ. ಒಂದು ಪದದ ಅರ್ಥವನ್ನು ಸಮುದಾಯ ಹೇಗೆ ಗ್ರಹಿಸುತ್ತದೆ ಎಂಬುದು ಕೂಡ ಮುಖ್ಯವಾಗುತ್ತದೆ. ಸಮಾಜದ ಕೆಲವು ಐಡಿಯಾಲಜಿಗಳು ಪದಗಳ ಅರ್ಥಗಳನ್ನು ನಿಯಂತ್ರಿಸುತ್ತಿರುತ್ತವೆ. ಹಾಗಾಗಿ ಅರ್ಥಾನ್ವಯದ ಬಗೆಗಳ, ಅವುಗಳ ಸಾಮಾಜಿಕ ಪರಿಣಾಮಗಳನ್ನು ಪರಿಶೀಲಿಸಬೇಕಾಗುತ್ತದೆ.

ಪದರಚನೆ, ಅರ್ಥಾನ್ವಯದ ನಿಯಮಗಳು ಮತ್ತು ಲಿಂಗಸಂಬಂಧವನ್ನು ಪರಿಶೀಲಿಸುವಲ್ಲಿ ಎರಡು ಪ್ರಶ್ನೆಗಳು ಎದುರಾಗುತ್ತವೆ. ಅವುಗಳೆಂದರೆ:

೧. ಲಿಂಗತಾರತಮ್ಯ ಪದಗಳಲ್ಲಿದೆಯೇ? ಅಥವಾ ಅವುಗಳ ಸಕಾರಾತ್ಮಕ ಇಲ್ಲವೇ ನಕಾರಾತ್ಮಕ ನೆಲೆಗಳನ್ನು ನಿಯಂತ್ರಿಸುವ ಅರ್ಥರಚನೆಯ ನಿಯಮಗಳಲ್ಲಿದೆಯೇ?

೨. ಪದಗಳ ಮುಖಾಂತರ ಸಾಮಾಜಿಕ ದೃಷ್ಟಿಕೋನಗಳ ನಿರ್ಮಾಣ ಮತ್ತು ಪ್ರಸಾರಗಳ ಸ್ವರೂಪ ಯಾವ ರೀತಿಯದು?

ರೋಮನ್ ಯಾಕೋಬ್‌ಸನ್ ಭಾಷೆಯ ಹಲವಾರು ಕಾರ್ಯಗಳಲ್ಲಿ ಸಮಾಜ ಯಾವುದಕ್ಕೆ ಪ್ರಾಮುಖ್ಯತೆ ನೀಡುತ್ತದೆ ಎಂಬುದರಿಂದಲೇ ಅರ್ಥದ ಕಲ್ಪನೆಗಳು ಮೂಡುತ್ತವೆ ಎನ್ನುತ್ತಾರೆ. ಇವರ ಮಾತಿನ ಪ್ರಕಾರ, ಆ ಸಮುದಾಯದ ಪ್ರಧಾನವಾಹಿನಿಯ ಪರಿಕಲ್ಪನೆಗಳಿಗೆ ಅನುಗುಣವಾಗಿ ಭಾಷಿಕ ಅರ್ಥ ಸಂರಚಿತಗೊಳ್ಳುತ್ತಿರುತ್ತದೆ ಎಂಬುದಾಗಿದೆ. ಭಾಷೆ ನೇರವಾಗಿ ಅರ್ಥದ ನಿಯಮಗಳನ್ನು ರೂಪಿಸುತ್ತದೆಯೇ? ಅಥವಾ ಸಮಾಜ ಅರ್ಥದ ನಿಯಮಗಳನ್ನು ರೂಪಿಸಿ, ಅರ್ಥದ ಅನ್ವಯ ನೆಲೆಗಳನ್ನು ನಿಯಂತ್ರಿಸುತ್ತಿದೆಯೇ ಎಂಬುದನ್ನು ಪರಿಶೀಲಿಸಬೇಕಾಗುತ್ತದೆ.

ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಪದಗಳನ್ನು ಎರಡು ರೀತಿ ವಿಂಗಡಿಸಿಕೊಳ್ಳಲಾಗಿದೆ. ಅವುಗಳೆಂದರೆ:

೧. ಸಮುದಾಯ ಸೂಚಕ ಪದಗಳು.

೨. ಲಿಂಗಸೂಚಕ ಪದಗಳು.

**೩.೧.೧. ಸಮುದಾಯ ಸೂಚಕ ಪದಗಳು**

ಇಡೀ ಮಾನವರ ಕುಲಕ್ಕೆ ಅನ್ವಯವಾಗುವಂತಹ ಸಮುದಾಯ ಸೂಚಕಪದಗಳು ಪುರುಷಸೂಚಕಗಳಾಗಿವೆ ಎಂಬುದು ಸ್ತ್ರೀವಾದಿಗಳ ವಾದ. ಆ ಪುರುಷಸೂಚಕ ಪದಗಳ ಒಳಗೆ ಮಹಿಳೆಯೂ ಒಳಗೊಳ್ಳುತ್ತಾಳೆ. ಆದರೆ, ಅವಳ ನೇರ ನಿರ್ದೇಶನ ಸೂಚಿಸುವ ಯಾವುದೇ ಲಕ್ಷಣಗಳು ಅಲ್ಲಿರುವುದಿಲ್ಲ ಎಂಬುದು ಸ್ತ್ರೀವಾದಿಗಳ ವಾದ. ಇದನ್ನು ಕೆಲವು ಉದಾಹರಣೆಗಳ ಮೂಲಕ ಪರಿಶೀಲಿಸಬಹುದು:

ಉದಾ: ೧. ಮಾನವ ಜಗತ್ತು ಬಹುಮಟ್ಟಿಗೆ ನಿರ್ದಿಷ್ಟ ಭಾಷಾ ಬಳಕೆಯ ಚೌಕಟ್ಟಿಗೆ ಒಳಪಟ್ಟಿದೆ.

೨. ಮಾನವ ಪ್ರಾಣಿಗಿಂತ ಹೆಚ್ಚು ಬುದ್ಧಿಯುಳ್ಳ ಪ್ರಾಣಿ

೩. ಮಾನವ ಸಂಘಜೀವಿ. ಅವನು ಇತರೆ ಪ್ರಾಣಿಗಳಿಗಿಂತ ಬುದ್ಧಿವಂತ ಪ್ರಾಣಿ.

೪. ಸ್ತ್ರೀತ್ವ ಎನ್ನುವುದು ಒಂದು ಜೀವಶಾಸ್ತ್ರೀಯ ಮಾನವ ಸ್ಥಿತಿ. ಇದನ್ನು ಮತ್ತೊಂದು ಜೀವ ಶಾಸ್ತ್ರೀಯ ಮಾನವ ಸ್ಥಿತಿಯಾದ ಪುರುಷತ್ವಕ್ಕಿಂತ ಭಿನ್ನವೂ ಪ್ರತ್ಯೇಕವೂ ಎಂಬಂತೆ ನೋಡಲಾಗಿದೆ.

೫. ನಾವೆಲ್ಲರೂ ಮಾನವರಾಗೋಣ. ಮನುಷ್ಯತ್ವ ರೂಢಿಸಿಕೊಳ್ಳೋಣ.

ಮೇಲಿನ ಐದು ಉದಾಹರಣೆಗಳಲ್ಲಿ ಮಾನವ ಪದ ಬಳಕೆಯಾಗಿರುವ ವಿವಿಧ ನೆಲೆಗಳನ್ನು ಗಮನಿಸಬಹುದು. 'ಅ' ಕಾರಾಂತ್ಯವಿರುವ ಕೆಲವು ಪದಗಳನ್ನು ಪುರುಷವಾಚಕವಾಗಿ ಮಾತ್ರ ಏಕೆ ಗ್ರಹಿಸಲಾಗುತ್ತಿದೆ ಎಂಬುದಕ್ಕೆ ಎರಡು ಕಾರಣವನ್ನು ಪರಿಶೀಲಿಸಬಹುದು: ಮೊದಲಿಗೆ ಕನ್ನಡ ಭಾಷಿಕ ಪರಿಸರದಲ್ಲಿ 'ಅ' ಕಾರಾಂತ್ಯವು ಕೆಲವು ಸಂದರ್ಭಗಳಲ್ಲಿ ಪುರುಷವಾಚಕ ಪ್ರತ್ಯಯವಾಗಿ ಬಳಕೆಯಾಗುತ್ತದೆ. ಉದಾಹರಣೆಗೆ ಕುರುಡ, ಕುಂಟ, ಕಿವುಡ ಮುಂತಾದ ಪದಗಳನ್ನು ಗಮನಿಸಬಹುದು. ಎರಡನೆಯದಾಗಿ 'ಅ' ಪ್ರತ್ಯಯವು ಕೆಲವು ಸಂದರ್ಭಗಳಲ್ಲಿ ತಟಸ್ಥ ನೆಲೆಯಲ್ಲಿ ಬಳಕೆಯಾಗುತ್ತಿದೆ. ಇದು ನಿರ್ದಿಷ್ಟವಾಗಿ ಯಾವುದೇ ಲಿಂಗವನ್ನು ಸೂಚಿಸುವುದಿಲ್ಲ. 'ಅ' ಪ್ರತ್ಯಯದ ಈ ಎರಡೂ ರಿತಿಯ ಬಳಕೆಯಿಂದಾಗಿ ಭಾಷಿಕರಲ್ಲಿ ಗೊಂದಲವುಂಟಾಗಿ ಅಕಾರಾಂತವಿರುವ ಪದಗಳನ್ನು ಪುರುಷವಾಚಕಗಳೆಂದು ಭಾವಿಸಿ ಅವುಗಳಿಗೆ ವಿವಿಧ ಸ್ತ್ರೀವಾಚಕ ಪತ್ಯಯಗಳನ್ನು ಸೇರಿಸಿ ಸ್ತ್ರೀವಾಚಕ ಪದಗಳನ್ನು ರಚಿಸಲಾಗುತ್ತಿದೆ. ಈ ಕಾರಣದಿಂದಾಗಿ ಒಂದು ಜೀವ ಸಂಕುಲವನ್ನು ಸೂಚಿಸುವ ಪದಗಳಾದ ಮಾನವ, ಮನುಷ್ಯ ಪದಗಳು ಪುರುಷವಾಚಕಗಳಾಗಿ ಗ್ರಹೀತವಾಗಿರಬಹುದಾದ ಸಾಧ್ಯತೆಯಿದೆ. ಉದಾಹರಣೆ ಒಂದರಲ್ಲಿ ಮಾನವ ಪದವು ಒಂದು ಸಮುದಾಯವನ್ನು ಅಂದರೆ, ಪುರುಷ ಮತ್ತು ಸ್ತ್ರೀ ಇಬ್ಬರನ್ನೂ ಸೂಚಿಸುತ್ತಿದೆ. ಉದಾಹರಣೆ ಎರಡರಲ್ಲಿ ಮಾನವ ಪದವು ಇತರೆ ಜೀವ ಸಂಕುಲಗಳಿಗಿಂತ ಭಿನ್ನ ಜೀವಿ ಎಂದು ಸೂಚಿಸುವ ನಿಟ್ಟಿನಲ್ಲಿ ಬಳಕೆಯಾಗಿದೆ. ಉದಾಹರಣೆ ಮೂರರಲ್ಲಿ 'ಅವನು' ಎಂಬ ಪುರುಷ ಸೂಚಕ ಸರ್ವನಾಮದ ಬಳಕೆಯಿಂದ ಮಾತ್ರ ಮಾನವ ಪದವು ಪುರುಷವಾಚಕವಾಗಿ ಗೋಚರವಾಗುತ್ತಿದೆ. ಉದಾಹರಣೆ ನಾಲ್ಕರಲ್ಲಿ ಗಂಡು ಮತ್ತು ಹೆಣ್ಣು ಇಬ್ಬರಿಗೂ ಸಮಾನ ನೆಲೆಯಲ್ಲಿ 'ಮಾನವ' ಪದ ಲಿಂಗಭೇದವಿಲ್ಲದೆ ಒಂದು ಸ್ಥಿತಿಯನ್ನು ಕುರಿತು ಹೇಳುತ್ತಿದೆ. ಉದಾಹರಣೆ ಐದರಲ್ಲಿ ಮಾನವ ಪದ ವ್ಯಕ್ತಿ ಸೂಚಕವಾಗಿ ಬಳಕೆಯಾಗುತ್ತಿಲ್ಲ. ಮನಸ್ಸಿನ ಒಂದು ಒಳ್ಳೆಯ ಸ್ಥಿತಿಯನ್ನು ಕುರಿತು ಹೇಳುತ್ತಿದೆ. ಉದಾಹರಣೆ ಐದರಲ್ಲಿ ಮಾನವ ಮತ್ತು ಮನುಷ್ಯ ಎಂಬ ಪದಗಳು ಪುರುಷನನ್ನು ಮಾತ್ರ ಕುರಿತು ಹೇಳುತ್ತಿವೆ ಎಂದುಕೊಂಡರೆ ಆಭಾಸವಾಗುತ್ತದೆ.

ಸಮುದಾಯ ಸೂಚಕ ಪದಗಳು ನಿಜವಾಗಿಯೂ ಪುರುಷಮೂಲೀಯವಾಗಿ ಸೃಷ್ಟಿಯಾಗಿವೆಯೇ? ಅಥವಾ ನಮ್ಮ ಗ್ರಹಿಕೆಯಲ್ಲಿನ ಮಿತಿಗಳಿಂದ ಪುರುಷಮೂಲೀಯ ಅರ್ಥವೆಂದು ಭಾವಿಸುತ್ತಿದ್ದೇವೆಯೇ? ಎಂಬ ಪ್ರಶ್ನೆಗಳು ಎದುರಾಗುತ್ತವೆ. ಜೀವಿಯ ಉಗಮಸ್ಥಿತಿಯಲ್ಲಿ ಇತರ ಜೀವಿಗಳಿಗಿಂತ ಭಿನ್ನವಾದ ಒಂದು ಜೀವಸಮುದಾಯವನ್ನು ಗುರುತಿಸಲು 'ಮಾನವ ಜೀವಿ' ಎಂಬ ಪದ ಸೃಷ್ಟಿಯಾಗಿರಬಹುದು.

ಈ ಪದ ಮೊದಲು ಗಂಡು-ಹೆಣ್ಣು ಎಂಬ ಭೇದವಿಲ್ಲದೆ ಇಬ್ಬರನ್ನೂ ಒಳಗೊಂಡಂತೆ ಸಮಾನ ನೆಲೆಯಲ್ಲಿ ಬಳಕೆಯಾಗಿರಬಹುದು. ಸಮಾಜವು ಪುರುಷಮೂಲೀಯವಾದಂತೆ ಸಾಮಾಜಿಕ ಚಟುವಟಿಕೆಗಳಲ್ಲಿ ಪುರುಷನ ಭಾಗವಹಿಸುವಿಕೆ ಹೆಚ್ಚಾದಂತೆ ಈ ಪದದ ಅರ್ಥಗ್ರಹಿಕೆ ಪುರುಷನಿಗೆ ಮಾತ್ರ ಸೀಮಿತವಾಗಿ ಬಳಕೆಗೆ ಬಂದಿರುವ ಸಾಧ್ಯತೆಗಳಿವೆ. ಸಾಮಾಜಿಕವಾಗಿ ಮಹಿಳೆಯ ಭಾಗವಹಿಸುವಿಕೆ ಹೆಚ್ಚಾದಂತೆ, ಅವಳ ಭಾಷಿಕ ಅಸ್ಮಿತೆಯ ಪ್ರಶ್ನೆಗಳು ಎದುರಾದಾಗ ಮಾನವ, ಮನುಷ್ಯ ಪದಗಳಿಗೆ ಸ್ತ್ರೀವಾಚಕ ಪ್ರತ್ಯಯಗಳನ್ನು ಸೇರಿಸಿ ಮಾನುಷಿ, ಮಾನವಳು, ಮಾನವಿ ಎಂಬಂತ ಪದಗಳನ್ನು ರಚಿಸಿಕೊಳ್ಳಲಾಗಿದೆ.

ಸಮುದಾಯ ಸೂಚಕ ಪದಗಳಲ್ಲಿ ಮತ್ತೊಂದು ರೀತಿಯ ಗೊಂದಲವಿರುವುದನ್ನು ಗುರುತಿಸಬಹುದು. ಉದಾಹರಣೆಗೆ 'ಕನ್ನಡಿಗರು ನಾವೆಲ್ಲ ಒಂದಾಗೋಣ' ಎಂಬ ವಾಕ್ಯದಲ್ಲಿರುವ 'ಕನ್ನಡಿಗರು' ಎಂಬ ಪದವು 'ಕನ್ನಡಿಗ' ಎಂಬ ಪುರುಷ ವಾಚಕಕ್ಕೆ '-ಅರು' ಎಂಬ ಬಹುವಚನ ಪ್ರತ್ಯಯ ಸೇರಿ ಈ ಪದ ರಚನೆಯಾಗಿದೆ ಎಂಬ ತಿಳುವಳಿಕೆಯಿದೆ. ಈ ಹಿನ್ನೆಲೆಯಲ್ಲಿ ಈ ಪದದ ಪುರುಷ ವಾಚಕ, ಸ್ತ್ರೀವಾಚಕ ಹಾಗೂ ಸಮುದಾಯ ವಾಚಕ ರೂಪಗಳ ರಚನೆಯನ್ನು ಪರಿಶೀಲಿಸುವುದಾದರೆ,

೧. ಪುರುಷ ವಾಚಕ – ಕನ್ನಡ + – ಇಗ್ + – ಅ = ಕನ್ನಡಿಗ

೨. ಸ್ತ್ರೀವಾಚಕ – ಕನ್ನಡ + – ಇಗ್ + – ಅಳ್ + – ಉ = ಕನ್ನಡಿಗಳು

೩. ಸಮುದಾಯ ವಾಚಕ – ಕನ್ನಡ + – ಇಗ್ + – ಅರ್ + – ಉ = ಕನ್ನಡಿಗರು

ಮೇಲಿನ ಉದಾಹರಣೆಗಳಲ್ಲಿ ಬಳಕೆಯಾಗಿರುವ '–ಇಗ್' ಪ್ರತ್ಯಯವು ಯಾವುದೇ ನಿರ್ದಿಷ್ಟ ಲಿಂಗವನ್ನು ಸೂಚಿಸದೆ ತಟಸ್ಥ ನೆಲೆಯಲ್ಲಿ ಬಳಕೆಯಾಗಿದೆ. ಆದರೆ ಕನ್ನಡ ಭಾಷಿಕರಲ್ಲಿ '–ಇಗ' ಪ್ರತ್ಯಯವು ಪುರುಷ ವಾಚಕ ಪ್ರತ್ಯಯ ಎಂಬ ಗ್ರಹಿಕೆಯಿದೆ. ಇದಕ್ಕೆ ಪೂರಕವಾಗಿ ಗಾಣಿಗ, ಲೆಕ್ಕಿಗ ಮುಂತಾದ ಪದಗಳನ್ನು ಗಮನಿಸಬಹುದು. ಆದರೆ ಇಲ್ಲಿ '–ಇಗ್' ಎಂಬ ತಟಸ್ಥ ಪ್ರತ್ಯಯಕ್ಕೆ '–ಅ' ಎಂಬ ಪುರುಷವಾಚಕ ಪ್ರತ್ಯಯ ಸೇರಿದ ನಂತರ '–ಇಗ' ಎಂಬ ಪುರುಷವಾಚಕ ಪ್ರತ್ಯಯ ಉಂಟಾಗಿದೆ.

ಕನ್ನಡ ಎಂಬ ಮೂಲ ರೂಪಕ್ಕೆ '–ಇಗ್' ಎಂಬ ತಟಸ್ಥ ಹಾಗೂ –ಅರ್+–ಉ ಎಂಬ ಬಹುವಚನ ಪ್ರತ್ಯಯಗಳು ಸೇರಿ ಕನ್ನಡಿಗರು ಪದ ರಚನೆಯಾಗಿದೆ. ಅದೇ ರೀತಿ ಕನ್ನಡ ಎಂಬ ಮೂಲ ರೂಪಕ್ಕೆ '–ಇಗ್' ಎಂಬ ತಟಸ್ಥ ಹಾಗೂ '–ಅಳ್+–ಉ' ಎಂಬ ಪ್ರತ್ಯಯಗಳು ಸೇರಿ ಕನ್ನಡಿಗಳು ಎಂಬ ಸ್ತ್ರೀವಾಚಕ ಪದ ರಚನೆಯಾಗಿದೆ. ಸ್ತ್ರೀವಾದಿಗಳು ಹೇಳುವಂತೆ ಕನ್ನಡಿಗ ಎಂಬ ಪುರುಷವಾಚಕ ಪದದಿಂದ ಕನ್ನಡಿಗಳು, ಕನ್ನಡಿಗರು ಪದಗಳು ರಚನೆಯಾಗಿಲ್ಲ. ಈ ಮೂರು ಪದಗಳಿಗೂ ಸ್ವಾಯತ್ತ ರಚನೆ ಇರುವುದನ್ನು ಗಮನಿಸಬಹುದು.

**೩.೧.೨. ಲಿಂಗಸೂಚಕ ಪದಗಳು**

ಲಿಂಗ ಸೂಚಕ ಪದಗಳನ್ನು ಪರಿಶೀಲಿಸುವುದಾದರೆ, ಸ್ತ್ರೀವಾದಿಗಳ ಪ್ರಕಾರ ಲಿಂಗ ಸೂಚಕ ಪದಗಳಲ್ಲಿ ಪುಲ್ಲಿಂಗ ರೂಪಗಳಿಗೆ ಸ್ತ್ರೀಲಿಂಗ ಪ್ರತ್ಯಯಗಳನ್ನು ಸೇರಿಸಿಕೊಳ್ಳುವುದರ ಮೂಲಕ ಸ್ತ್ರೀಲಿಂಗ ರೂಪಗಳನ್ನು ಪಡೆದುಕೊಳ್ಳಲಾಗುತ್ತಿದೆ ಎಂಬುದು. ಈ ಪುರುಷ ಸೂಚಕ ಪದಗಳು ಗಂಡು ಮತ್ತು

ಹೆಣ್ಣು ಇಬ್ಬರನ್ನೂ ಒಳಗೊಳ್ಳುವಂತೆ ಬಳಕೆಯಾಗುತ್ತಿವೆ. ಹೆಣ್ಣನ್ನು ಸೂಚಿಸುವ ಪದಗಳಿಗೆ ಈ ಬಗೆಯ ಬಳಕೆ ಸಾಧ್ಯವಿಲ್ಲ ಎಂಬುದು ಅವರ ಮತ್ತೊಂದು ವಾದ.

ಕನ್ನಡ ಭಾಷಿಕ ಸಮುದಾಯದಲ್ಲಿ ಮೂರು ರೀತಿಯಲ್ಲಿ ಲಿಂಗಭಿನ್ನತೆಯನ್ನು ಹೊಂದಿರುವ ಪದರಚನೆಗಳನ್ನು ಗುರುತಿಸಬಹುದು.

೧. ಸ್ವತಂತ್ರ ಅಸ್ತಿತ್ವವಿರುವ ಪದಗಳು

ಉದಾ: ೧. ಅಪ್ಪ–ಅಮ್ಮ
೨. ಗಂಡ–ಹೆಂಡತಿ
೩. ಅಣ್ಣ–ತಂಗಿ
೪. ರಾಜ–ರಾಣಿ
೫. ತಾತ–ಅಜ್ಜಿ
೬. ಅತ್ತೆ–ಮಾವ

೨. ಪ್ರತ್ಯಯಗಳ ಸಹಾಯದಿಂದ ರಚಿತವಾದ ಪದಗಳು

| ಉದಾ: ಪ್ರತ್ಯಯಗಳು | – | ಪುರುಷ | – | ಸ್ತ್ರೀ |
|---|---|---|---|---|
| ೧. ಗಿತ್ತಿ | – | ಕುಂಬಾರ | – | ಕುಂಬಾರಗಿತ್ತಿ |
| ೨. ಇ | – | ಚಾಲಕ | – | ಚಾಲಕಿ |
| ೩. ಎ | – | ಯೋಧ | – | ಯೋಧೆ |
| ೪. ಗಾರ್ತಿ | – | ಬರಹಗಾರ | – | ಬರಹಗಾರ್ತಿ |
| ೫. ಣಿ | – | ಅಧಿಕಾರಿ | – | ಅಧಿಕಾರಿಣಿ |

೩. ಪದಗಳ ಪೂರ್ವದಲ್ಲಿ 'ಮಹಿಳೆ' ಎಂಬ ಪದವನ್ನು ಸೇರಿಸುವಿಕೆ

ಉದಾ: ೧. ಮಹಿಳಾ ಕೈದಿ
೨. ಮಹಿಳಾ ಬರಹಗಾರ್ತಿ
೩. ಮಹಿಳಾ ಕ್ರೀಡಾಪಟು
೪. ಮಹಿಳಾ ಅಪರಾಧಿ
೫. ಮಹಿಳಾ ನ್ಯಾಯವಾದಿ

ಮಾದರಿ ಒಂದರಲ್ಲಿರುವ ಸ್ವತಂತ್ರ ಅಸ್ತಿತ್ವ ಹೊಂದಿರುವ ಲಿಂಗಸೂಚಕ ಪದಗಳಲ್ಲಿ ಯಾವುದೇ ಗೊಂದಲಗಳಿಲ್ಲ. ಅಲ್ಲಿ ಒಂದು ಪದದಿಂದ ಮತ್ತೊಂದು ಪದವನ್ನು ಸಾಧಿಸಲಾಗಿಲ್ಲ. ಸ್ತ್ರೀವಾದಿಗಳ ಪ್ರಕಾರ ಸಮಸ್ಯೆ ಇರುವುದು ಮಾದರಿ ಎರಡರ ಪದಗಳಲ್ಲಿ. ಪ್ರತ್ಯಯಗಳ ಸಹಾಯದಿಂದ ರಚಿತವಾಗಿರುವ ಲಿಂಗ ಸೂಚಕ ಪದಗಳಲ್ಲಿ ಲಿಂಗತಾರತಮ್ಯವನ್ನು ಅವರು ಗುರುತಿಸುತ್ತಾರೆ. ಈ ರೀತಿಯ ಲಿಂಗಸೂಚಕ ಪದಗಳಲ್ಲಿ ಮೊದಲಿಗೆ ಪುಲ್ಲಿಂಗ ಸೂಚಕವು ಸೃಷ್ಟಿಯಾಗುತ್ತದೆ. ಆನಂತರದಲ್ಲಿ ಸ್ತ್ರೀವಾಚಕ ಪ್ರತ್ಯಯವನ್ನು

ಹಚ್ಚುವ ಮೂಲಕ ಸ್ತ್ರೀಲಿಂಗ ರೂಪವನ್ನು ಪಡೆಯಲಾಗುತ್ತಿದೆ ಎನ್ನುತ್ತಾರೆ. ಸ್ತ್ರೀವಾದಿಗಳ ಈ ನಿಲುವನ್ನು ಎರಡು ಮಾದರಿಯ ಉದಾಹರಣೆಗಳಲ್ಲಿ ಪರಿಶೀಲಿಸಬಹುದು. ಅವುಗಳೆಂದರೆ:

ಮಾದರಿ ೧: ೧. ಓಟ+–ಕಾರ=ಓಟಗಾರ

ಓಟ+–ಕಾರ್ತಿ=ಓಟಗಾರ್ತಿ

೨. ಗಟ್ಟಿ+–ಇಗ=ಗಟ್ಟಿಗ

ಗಟ್ಟಿ+–ಇತ್ತಿ=ಗಟ್ಟಿಗಿತ್ತಿ

ಮೇಲಿನ ಉದಾಹರಣೆಗಳಲ್ಲಿ ಓಟ ಮಾಡುವವನು ಪುರುಷನಾದರೆ ಓಡು ಎಂಬ ಕ್ರಿಯಾಪದಕ್ಕೆ 'ಕಾರ' ಪುಲ್ಲಿಂಗ ವಾಚಕವನ್ನು ಸೇರಿಸಿ ಓಟಗಾರ ಪದವನ್ನು ಸಾಧಿಸಲಾಗಿದೆ. ಓಟ ಮಾಡುವವಳು ಮಹಿಳೆಯಾದರೆ ಓಡು ಎಂಬ ಕ್ರಿಯಾಪದಕ್ಕೆ ಸ್ತ್ರೀವಾಚಕ ಪ್ರತ್ಯಯವಾದ 'ಕಾರ್ತಿ' ಎಂಬುದನ್ನು ಸೇರಿಸಿ ಓಟಗಾರ್ತಿ ಎಂಬ ಸ್ತ್ರೀವಾಚಕ ಪದವನ್ನು ಸಾಧಿಸಲಾಗಿದೆ. ಗಟ್ಟಿಗ ಮತ್ತು ಗಟ್ಟಿಗಿತ್ತಿ ಎಂಬ ಪದಗಳಲ್ಲೂ ಇದೇ ರಚನೆಯನ್ನು ಕಾಣಬಹುದು. ಇಲ್ಲಿ ಓಟಗಾರ ಎಂಬ ಪದ ಮೂಲವಲ್ಲ. ಓಟಗಾರನಿಂದ ಓಟಗಾರ್ತಿ ಪದವನ್ನು ಸಾಧಿಸಲಾಗಿಲ್ಲ. ಈ ಎರಡೂ ಪದಕ್ಕೂ 'ಓಡು' ಎಂಬ ಕ್ರಿಯಾಪದ ಮೂಲವಾಗಿದೆ. ಸ್ತ್ರೀವಾದಿಗಳ ಕೆಲವು ತಪ್ಪು ತಿಳಿವಳಿಕೆಗಳು ಭಾಷಾ ರಚನೆಯನ್ನು ಒಡೆದು ವಿಶ್ಲೇಷಿಸಿದರೆ ಗೋಚರವಾಗುತ್ತವೆ. ಹಾಗೂ ಪದರಚನೆಯೇ ಮೂಲತಃ ಲಿಂಗತಾರತಮ್ಯದಿಂದ ಕೂಡಿವೆ ಎಂಬ ಅವರ ನಿಲುವುಗಳು ಬದಲಾಗುತ್ತವೆ.

ಮಾದರಿ ೨: ೧. ಲೇಖನ + – ಅಕ್ + – ಅ = ಲೇಖಕ

ಲೇಖನ + – ಅಕ್ + – ಅ = ಲೇಖಕಿ

೨. ದಲಿತ + – ಅ (ಶೂನ್ಯ) = ದಲಿತ

ದಲಿತ + – ಎ = ದಲಿತೆ

೩. ಗೌಡ + – ಅ (ಶೂನ್ಯ) = ಗೌಡ

ಗೌಡ + – ಇತಿ = ಗೌಡ್ತಿ

ಮೇಲಿನ ಉದಾಹರಣೆಗಳನ್ನು ಪರಿಶೀಲಿಸುವುದಾದರೆ, 'ಲೇಖನ' ಎಂಬ ಮೂಲ ರೂಪಕ್ಕೆ '–ಅಕ್' ಎಂಬ ತಟಸ್ಥ ಪ್ರತ್ಯಯ ಹಾಗೂ '–ಅ' ಎಂಬ ಪುರುಷ ವಾಚಕ ಪ್ರತ್ಯಯ ಸೇರಿ 'ಲೇಖಕ' ಎಂಬ ಪುರುಷ ವಾಚಕ ಪದ ರಚನೆಯಾಗಿದೆ. ಅದೇ ರೀತಿ ಲೇಖನ ಎಂಬ ಮೂಲ ರೂಪಕ್ಕೆ '–ಅಕ್' ಎಂಬ ತಟಸ್ಥ ಪ್ರತ್ಯಯ ಹಾಗೂ '–ಇ' ಎಂಬ ಸ್ತ್ರೀಸೂಚಕ ಪ್ರತ್ಯಯ ಸೇರಿ 'ಲೇಖಕಿ' ಎಂಬ ಸ್ತ್ರೀವಾಚಕ ಪದ ರಚನೆಯಾಗಿದೆ.

ದಲಿತ ಎಂಬ ಪದ ಗುಣವಾಚಕ ಪದ. ಈ ಪದದ ಮೂಲ ರಚನೆಯೇ 'ಅ' ಕಾರಾಂತ್ಯವಾಗಿದೆ. ಇಲ್ಲಿ ಇರುವ '–ಅ' ಪ್ರತ್ಯಯ ತಟಸ್ಥ ಪ್ರತ್ಯಯ. ಯಾವುದೇ ಲಿಂಗವನ್ನು ಸೂಚಿಸುತ್ತಿಲ್ಲ. ಕನ್ನಡದಲ್ಲಿ '–ಅ' ಪ್ರತ್ಯಯ ಪುರುಷವಾಚಕವಾಗಿ ಕೂಡ ಕಾರ್ಯನಿರ್ವಹಿಸುತ್ತಿರುವುದರಿಂದ ಈ ಪದವನ್ನು

ಪುರುಷವಾಚಕವೆಂದು ಗ್ರಹಿಸಿಕೊಳ್ಳಲಾಗಿದೆ. ದಲಿತ+–ಅ=ದಲಿತ ಇಲ್ಲಿ ದಲಿತ ಪದದ 'ಅ' ಕಾರಾಂತ್ಯಕ್ಕೆ ಪುರುಷವಾಚಕ ಪ್ರತ್ಯಯ '–ಅ' ಸೇರುವುದಿಲ್ಲ. ಇಲ್ಲಿ ಅದು ಶೂನ್ಯವಾಗುತ್ತದೆ. ಅದೇ ರೀತಿ ಗೌಡ ಪದದಲ್ಲಿನ '–ಅ' ಕಾರಾಂತ್ಯ ತಟಸ್ಥ ಪ್ರತ್ಯಯಕ್ಕೆ ಸ್ತ್ರೀವಾಚಕ ಪ್ರತ್ಯಯ '–ಇತಿ' ಸೇರಿ ಗೌಡ್ತಿ ಎಂಬ ಸ್ತ್ರೀವಾಚಕ ಪದ ರಚನೆಯಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಸ್ತ್ರೀವಾದಿಗಳು ಹೇಳುವಂತೆ ಪುರುಷವಾಚಕ ಪದಗಳಿಂದ ಸ್ತ್ರೀವಾಚಕ ಪದಗಳನ್ನು ಸಾಧಿಸಲಾಗಿಲ್ಲ ಎಂಬ ಅಂಶ ಸ್ಪಷ್ಟವಾಗುತ್ತದೆ.

ಮೊದಲು ಎಲ್ಲ ಕ್ಷೇತ್ರಗಳಲ್ಲೂ ಪುರುಷನ ಭಾಗವಹಿಸುವಿಕೆ ಪ್ರಾರಂಭವಾದ್ದರಿಂದ ಜಾತಿವಾಚಕಗಳು, ವೃತ್ತಿವಾಚಕಗಳು, ಸೃಜನಶೀಲ ಕೆಲಸಗಳನ್ನು ಸೂಚಿಸುವ ಪದಗಳು ಎಲ್ಲವೂ ಪುರುಷನನ್ನೇ ಸೂಚಿಸುತ್ತವೆ ಎಂಬ ಗ್ರಹಿಕೆ ಭಾಷಿಕರಲ್ಲಿವೆ. ಕಾಲಾಂತರದಲ್ಲಿ ವೃತ್ತಿ, ಅಧಿಕಾರ ನಿರ್ವಹಿಸುವಿಕೆಯ ಸಾಮಾಜಿಕ ಸಂದರ್ಭಗಳಿಗೆ ಸ್ತ್ರೀಯರು ತೊಡಗಿಕೊಂಡಿದ್ದರಿಂದ ಅವರನ್ನು ಗುರುತಿಸುವಿಕೆಯ ಸಾಮಾಜಿಕ ಒತ್ತಡಗಳು ಏರ್ಪಟ್ಟಿದ್ದರಿಂದ ಸುಲಭವಾಗಿ ಸ್ತ್ರೀವಾಚಕಗಳನ್ನು ಸೇರಿಸಿ, ಸ್ತ್ರೀರೂಪಗಳನ್ನು ಸಾಧಿಸಿಕೊಳ್ಳುವ ಪ್ರವೃತ್ತಿ ಉಂಟಾಗಿದೆ. ಈ ಪ್ರವೃತ್ತಿಯನ್ನು ತಾರತಮ್ಯದ ಹಿನ್ನೆಲೆಯಲ್ಲಿ ಅರ್ಥೈಸಿಕೊಳ್ಳುವುದಕ್ಕಿಂತ ಕಾಲಾಂತರದಲ್ಲಿ ಸಾಮಾಜಿಕವಾಗಿ ಉಂಟಾದ ಸ್ಥಿತ್ಯಂತರಗಳ ಮುಖಾಂತರ ಅರ್ಥೈಸಿಕೊಳ್ಳಬೇಕಾಗುತ್ತದೆ. ಇಲ್ಲಿ ಭಾಷೆಯ ಮುಖಾಂತರ ತಾರತಮ್ಯವನ್ನು, ಅರ್ಥೈಸುವುದಕ್ಕಿಂತ ಸಾಮಾಜಿಕವಾಗಿ ಉಂಟಾದ ಬದಲಾವಣೆಗಳು ಭಾಷೆಯಲ್ಲೂ ಗೋಚರಿಸುತ್ತಿವೆ ಎಂಬುದನ್ನು ನೋಡಬೇಕು. ಇವು ಸಾಮಾಜಿಕ ಸಂಗತಿಗಳ ಸೂಚಕಗಳು ಭಾಷೆಯ ಕೊರತೆಗಳಲ್ಲ.

ಅರ್ಥದ ನೆಲೆಯಲ್ಲಿ ಲಿಂಗಸಂಬಂಧವನ್ನು ಪರಿಶೀಲಿಸುವುದಾದರೆ, ಒಂದು ಪದದ ಅರ್ಥ ಪುರುಷನಿಗೆ ಅನ್ವಯವಾದಾಗ ವಿಶಾಲಾರ್ಥದಲ್ಲಿಯೂ, ಸ್ತ್ರೀಗೆ ಅನ್ವಯವಾದಾಗ ಸೀಮಿತಾರ್ಥದಲ್ಲಿಯೂ ಅನ್ವಯವಾಗುತ್ತದೆ ಎಂಬುದು ಸ್ತ್ರೀವಾದಿಗಳ ಮತ್ತೊಂದು ನಿಲುವು. ಈ ಹಿನ್ನೆಲೆಯಲ್ಲಿ ರಾಷ್ಟ್ರಪತಿ ಮತ್ತು ರಾಷ್ಟ್ರಾಧ್ಯಕ್ಷೆ ಪದವನ್ನು ಪರಿಶೀಲಿಸಬಹುದು. ಕನ್ನಡ ಭಾಷಿಕ ಪರಿಸರದಲ್ಲಿ ಕೆಲವು ಪುರುಷವಾಚಕಗಳನ್ನು ಸ್ತ್ರೀವಾಚಕಗಳಾಗಿ ಬದಲಾಯಿಸುವಲ್ಲಿ 'ಇ' ಕಾರಾಂತ್ಯಗೊಳಿಸುವ ಒಂದು ಮಾದರಿ ಇದೆ. ಕೆಲವು 'ಇ' ಕಾರಾಂತ್ಯ ಪುರುಷವಾಚಕಗಳನ್ನು ಸ್ತ್ರೀವಾಚಕಗಳಾಗಿ ಬದಲಾಯಿಸುವಲ್ಲಿ ಕೆಲವು ತೊಡಕುಗಳು ಉಂಟಾಗುತ್ತವೆ. ರಾಷ್ಟ್ರಪತಿ ಪದವನ್ನು 'ಇ'ಕಾರಾಂತ್ಯ ಮಾಡಿ ಸ್ತ್ರೀವಾಚಕ ಪದ ರಚಿಸಲು ಸಾಧ್ಯವಾಗುವುದಿಲ್ಲ. ಈ ಪದದ ಮೂಲ ರೂಪವೇ 'ಇ' ಕಾರಾಂತ್ಯವಾಗಿರುವುದರಿಂದ ಇಲ್ಲಿ ಸ್ತ್ರೀವಾಚಕ ಪ್ರತ್ಯಯ 'ಇ' ಶೂನ್ಯವಾಗುತ್ತದೆ. ಅಲ್ಲದೆ ರಾಷ್ಟ್ರಪತಿ ಪದಕ್ಕೆ ಮತ್ತಾವುದೇ ಸ್ತ್ರೀ ಸೂಚಕ ಪ್ರತ್ಯಯಗಳನ್ನು ಬಳಸಿ ಸ್ತ್ರೀವಾಚಕ ಪದವನ್ನು ಸಾಧಿಸಲಾಗುವುದಿಲ್ಲ. ಇದಕ್ಕೆ ಕಾರಣವನ್ನು ಪರಿಶೀಲಿಸುವುದಾದರೆ, ಎಲ್ಲಾ ಪದಗಳು ಪುರುಷವಾಚಕಗಳು ಅವುಗಳಿಂದ ಸ್ತ್ರೀವಾಚಕ ಪದಗಳನ್ನು ಸಾಧಿಸಿಕೊಳ್ಳಬೇಕಾಗಿದೆ ಎಂಬ ತಪ್ಪು ಗ್ರಹಿಕೆಯಿಂದ ಈ ರೀತಿಯ ಕೆಲವು ಗೊಂದಲಗಳು ಸೃಷ್ಟಿಯಾಗುತ್ತಿವೆ.

'ರಾಷ್ಟ್ರಪತಿ' ಪದವನ್ನು ಮತ್ತು ಅದರ ಅರ್ಥವನ್ನು ನಾವು ಪೂರ್ಣವಾಗಿ ಗ್ರಹಿಸುತ್ತಿಲ್ಲ. ಅಲ್ಲಿರುವ 'ಪತಿ' ಎಂಬ ಪದವನ್ನು ಮಾತ್ರ ಗಣನೆಗೆ ತೆಗೆದುಕೊಂಡು ಅದನ್ನು ಸ್ತ್ರೀವಾಚಕವಾಗಿ ಬದಲಾಯಿಸಲು ಪ್ರಯತ್ನಿಸುತ್ತಿದ್ದೇವೆ. ಪತಿ ಪದದ ಸ್ತ್ರೀವಾಚಕ ರೂಪ ಪತ್ನಿ ಎಂದು ಗ್ರಹಿಕೆಯಲ್ಲಿದೆ. ಆದರೆ, 'ಪತಿ' ಎಂಬ ಪದದ ಸ್ತ್ರೀವಾಚಕ ರೂಪ 'ಪತ್ನಿ' ಅಲ್ಲ. ಅಥವಾ ಪತಿ ಎಂಬ ಪದದಿಂದ ಪತ್ನಿಯನ್ನು ಸಾಧಿಸಲಾಗಿಲ್ಲ. ಇವೆರಡೂ ಪದಗಳು ಸ್ವತಂತ್ರ ಅಸ್ತಿತ್ವವುಳ್ಳ ಪದಗಳು. ಇವುಗಳ ಅರ್ಥ ಗ್ರಹಿಕೆಗಳು ಕೂಡ ಭಿನ್ನವಾಗಿವೆ. ಹಾಗಾಗಿ ರಾಷ್ಟ್ರಪತಿ ಹುದ್ದೆಯನ್ನು ನಿರ್ವಹಿಸುವ ಮಹಿಳೆಯರಿಗೆ ರಾಷ್ಟ್ರಾಧ್ಯಕ್ಷೆ ಎಂದು ಕರೆಯಲಾಗುತ್ತಿದೆ.

ಮೇಲಿನ ವಿವರಣೆಯ ಹಿನ್ನೆಲೆಯಲ್ಲಿ ಪತಿ ಮತ್ತು ಪತ್ನಿ ಪದದ ಅರ್ಥ ಗ್ರಹಿಕೆಗಳನ್ನು ಪರಿಶೀಲಿಸುವುದು ಸೂಕ್ತವೆನಿಸುತ್ತದೆ. ನಾವು ಇಂದು ತಿಳಿದಿರುವಂತೆ ಪತಿ ಎಂಬ ಪದ ಗಂಡ ಎಂಬ ಒಂದು ಅರ್ಥಕ್ಕೆ ಸೀಮಿತವಾಗಿರಲಿಲ್ಲ. ಅದರ ವಿವಿಧ ಅರ್ಥಗಳು ಈ ಕೆಳಗಿನ ಅರ್ಥಗಳಲ್ಲೂ ಬಳಕೆಯಲ್ಲಿದ್ದವು.

ಪತಿ = ೧. ಒಡೆಯ, ಯಜಮಾನ
೨. ಆಳುವವನು, ದೊರೆ
೩. ಗಂಡ

ಪತ್ನಿ = ೧. ಗಂಡನ ಹೆಂಡತಿ, ಮಡದಿ

ಪತಿ ಎಂಬ ಪದವು ಮೂಲದಲ್ಲಿ ಒಂದು ಪ್ರದೇಶವನ್ನು ಆಳುವ ವ್ಯಕ್ತಿ ಎಂಬ ಅರ್ಥದಲ್ಲಿ ಬಳಕೆಯಾಗುತ್ತಿತ್ತು. ಉದಾಹರಣೆಗೆ ಪಶುಪತಿ, ಗಣಪತಿ, ಅಧಿಪತಿ ಎಂಬ ಪದಗಳನ್ನು ಪರಿಗಣಿಸಬಹುದು. ಈ ಪದಕ್ಕೆ ಗಂಡ ಎಂಬ ಮತ್ತೊಂದು ಅರ್ಥವೂ ಇದೆ. ಇದರ ಜೊತೆಗೆ 'ಯಜಮಾನ' ಎಂಬ ಪದವನ್ನು ಕೂಡ ಪರಿಶೀಲಿಸಬಹುದು. ಇದು 'ಯಜನ' ಪದದಿಂದ ನಿಷ್ಪನ್ನವಾಗಿದೆ. ಅಂದರೆ ಯಾಗಗಳನ್ನು ಮಾಡುವವನು, ಯಜ್ಞಕರ್ತೃ. ಇದರ ವಿವಿಧ ಅರ್ಥಗಳು ಈ ಮುಂದಿನಂತಿವೆ.

ಯಜಮಾನ = ೧. ಯಾಗಗಳನ್ನು ಮಾಡುವವನು, ಯಜ್ಞಕರ್ತೃ
೨. ಅರ್ಚಕ, ಪೂಜಾರಿ
೩. ಸಂಸಾರದ ಅಥವಾ ಸಮಾಜದ ಮುಖ್ಯಸ್ಥ, ಒಡೆಯ
೪. ಧಣಿ, ಮಾಲೀಕ
೫. ಗಂಡ
೬. ವಯಸ್ಸಾದ ವ್ಯಕ್ತಿ, ಹಿರಿಯ.

ಇಲ್ಲಿ ಗಮನಿಸಬಹುದಾದ ಮುಖ್ಯವಾದ ಅಂಶವೆಂದರೆ ಯಜಮಾನ ಪದಕ್ಕೆ ಸಂವಾದಿಯಾಗಿ ಯಜಮಾನಿ ಪದವಿದ್ದರೂ ಪುರುಷವಾಚಕಕ್ಕೆ ಇರುವಷ್ಟು ವಿಶಾಲವಾದ ಅರ್ಥವ್ಯಾಪ್ತಿ ಸ್ತ್ರೀವಾಚಕಕ್ಕೆ ಇಲ್ಲ ಎಂಬುದು. ಯಜಮಾನ ಏಕಕಾಲದಲ್ಲಿ ಒಂದು ಪ್ರದೇಶದ ಒಡೆಯ, ಮನೆಯ ಒಡೆಯ, ಹೆಂಡತಿಯ ಒಡೆಯನಾಗುತ್ತಾನೆ. ಆದರೆ ಯಜಮಾನಿ ಮನೆಯ ಒಡತಿಯಾದರೂ ಗಂಡನಿಗೆ ಒಡತಿ

ಎಂಬ ಅರ್ಥದಲ್ಲಿ ಬಳಕೆಯಾಗುವುದಿಲ್ಲ. ಉದಾಹರಣೆಗೆ ಗಂಡ ಹೆಂಡತಿಯರ ನಡುವೆ 'ನಮ್ ಯಜಮಾನ್ರು' ಎಂಬ ಪ್ರಯೋಗವಿದೆ. 'ನಮ್ ಯಜಮಾನಿ' ಎಂಬ ಪ್ರಯೋಗವಿಲ್ಲ. ನಮ್ಮಾಕೆ, ನಮ್ಮನೆಯಾಕೆ ಎಂಬ ಪ್ರಯೋಗಗಳಿವೆ. ಗಂಡಸು ನಮ್ಮ ಯಜಮಾನ್ತಿ ಎಂದು ಬಳಸಿದರೂ ಅದು ಹಾಸ್ಯ ಅಥವಾ ಲಘುವಾದ ಸಂದರ್ಭಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಇಲ್ಲಿ ಪುರುಷ ವಾಚಕಗಳಿಗೆ ಇರುವಷ್ಟು ಅರ್ಥವ್ಯಾಪ್ತಿ ಸ್ತ್ರೀವಾಚಕಗಳಿಗೆ ಇಲ್ಲ ಎಂಬುದು ತಿಳಿಯುತ್ತದೆ. ಇದಕ್ಕೆ ಕಾರಣವನ್ನು ಪರಿಶೀಲಿಸುವುದಾದರೆ, ಒಂದು ಸಮುದಾಯದಲ್ಲಿನ ಪುರುಷ ಮತ್ತು ಸ್ತ್ರೀಯರು ನಿರ್ವಹಿಸುತ್ತಿರುವ ಪಾತ್ರವಿಶಾಲತೆ ಮತ್ತು ಪಾತ್ರ ಸೀಮಿತತೆಯನ್ನು ಇದು ಪ್ರತಿನಿಧಿಸುತ್ತಿವೆ. ಪಾರಂಪರಿಕವಾಗಿ ಗಂಡು ಮತ್ತು ಹೆಣ್ಣು ನಿರ್ವಹಿಸಿಕೊಂಡು ಬರುತ್ತಿದ್ದ ಕೆಲವು ವೃತ್ತಿಗಳ ಮುಖಾಂತರ ಸಾಮಾಜಿಕಪಾತ್ರ ವಿಭಜನೆಗೆ ಪೂರಕವಾಗಿ ಭಾಷಿಕ ಅಂಶಗಳು ಸೃಷ್ಟಿಯಾಗಿರುವುದನ್ನು ಗಮನಿಸಬಹುದು. ಇದನ್ನು ಕನ್ನಡ ಭಾಷಿಕ ಪರಿಸರದಲ್ಲಿ ಬಳಕೆಯಲ್ಲಿರುವ ಕೆಲವು ಇಂಗ್ಲಿಷ್ ಪದಗಳ ಮುಖಾಂತರ ಪರಿಶೀಲಿಸಬಹುದು.

ಉದಾ: ಡಾಕ್ಟರ್ – ಲೇಡಿ ಡಾಕ್ಟರ್
ಕಂಡಕ್ಟರ್ – ಲೇಡಿ ಕಂಡಕ್ಟರ್
ನರ್ಸ್ – ಮೇಲ್ ನರ್ಸ್

ಈ ಪದಗಳ ರಚನೆ ಮತ್ತು ಬಳಕೆಯ ಎರಡೂ ನೆಲೆಗಳನ್ನು ಒಟ್ಟಿಗೆ ಪರಿಶೀಲಿಸುವುದಾದರೆ, 'ಡಾಕ್ಟರ್' ಎಂಬುದು ತಟಸ್ಥ ಪದ. ಪುರುಷ ಮತ್ತು ಮಹಿಳೆ ಇಬ್ಬರಿಗೂ ಅನ್ವಯವಾಗುವ ಪದ. ಆದರೆ, ಬಳಕೆಯ ನೆಲೆಯಲ್ಲಿ ಅದು ಕೇವಲ ಪುರುಷವಾಚಕ ಮಾತ್ರವೇ ಆಗಿದೆ. ಎಲ್ಲಿಯೂ ಮೇಲ್ ಡಾಕ್ಟರ್, ಮೇಲ್ ಕಂಡಕ್ಟರ್ ಎಂದು ಬಳಸುವುದಿಲ್ಲ. ಕಾರಣ ವೈದ್ಯ ವೃತ್ತಿಯನ್ನು ಮೊದಲು ಪ್ರಾರಂಭಿಸಿದ್ದು ಪುರುಷ. ಹಾಗಾಗಿ ಅದು ಪುರುಷವಾಚಕ ಎಂದು ಭಾಷಿಕರಿಗೆ ಅನಿಸಿದೆ. ಆ ಕ್ಷೇತ್ರಕ್ಕೆ ಮಹಿಳೆ ಕಾಲಿಟ್ಟಾಗ ಅವಳಿಗೂ ಡಾಕ್ಟರ್ ಪದ ಅನ್ವಯವಾಗುತ್ತದೆಯಾದರೂ ಅವಳ ಪ್ರತ್ಯೇಕತೆಯನ್ನು ಗುರುತಿಸುವಾಗ ಲೇಡಿ ಎಂಬ ಪದವನ್ನು ಡಾಕ್ಟರ್ ಪದದ ಹಿಂದೆ ಸೇರಿಸಿಕೊಳಲಾಗುತ್ತಿದೆ. ನರ್ಸ್ ಪದ ಕೂಡ ಈ ನೆಲೆಯಲ್ಲಿಯೆ ಬಳಕೆಯಾಗುತ್ತಿದೆ. ಪಾರಂಪರಿಕವಾಗಿ ಸೇವಕಿ, ದಾದಿ ಕೆಲಸಗಳನ್ನು ಸ್ತ್ರೀಯರು ಮಾಡುತ್ತಿದ್ದರಿಂದ ನರ್ಸ್ ಪದ ಸ್ತ್ರೀವಾಚಕ ಪದವಾಗಿ ಗ್ರಹಿಕೆಯಲ್ಲಿದೆ. ಇಂದು ಈ ಕೆಲಸಗಳನ್ನು ಪುರುಷರು ನಿರ್ವಹಿಸುತ್ತಿರುವುದರಿಂದ ನರ್ಸ್ ಪದದ ಮುಂದೆ ಮೇಲ್ (Male) ಎಂಬ ಪದವನ್ನು ಸೇರಿಸಿಕೊಳ್ಳಲಾಗುತ್ತಿದೆ.

ಭಾಷೆ ಮತ್ತು ಲಿಂಗ ಸಂಬಂಧವನ್ನು ಅರಿಯುವಲ್ಲಿ ಸಮಾಜದಲ್ಲಿನ ಪಾತ್ರವಿಭಜನೆ ಪ್ರಮುಖಪಾತ್ರ ನಿರ್ವಹಿಸುತ್ತದೆ. ಆರಂಭಿಕ ಹಂತದಲ್ಲಿ ಪುರುಷನೇ ಸಮಾಜದ ಪ್ರಮುಖವಾಹಿನಿಗಳಲ್ಲಿ ಪಾಲ್ಗೊಂಡಿದ್ದರಿಂದ, ಭಾಷಿಕ ರಚನೆಗಳು ಅದಕ್ಕೆ ಅನುಗುಣವಾಗಿ ರಚಿತವಾಗಿರುವ ಒಂದು ಸಾಧ್ಯತೆ ಇದ್ದರೆ, ಸ್ತ್ರೀ–ಪುರುಷ ಎಂಬ ತಾರತಮ್ಯದ ನೆಲೆಗಳು ಸಮಾಜದಲ್ಲಿ ಮೂಡಿರದ ಕಾಲದಲ್ಲಿ ಇಬ್ಬರಿಗೂ ಅನ್ವಯವಾಗುವಂತೆ ರಚಿತವಾದ ಪದಗಳು, ಕಾಲಾಂತರದಲ್ಲಿ ಸಮಾಜ ಪುರುಷ ಪ್ರಧಾನವಾದಂತೆ ಅವುಗಳ ವಿಶಾಲಾರ್ಥ ಸೀಮಿತಾರ್ಥವಾಗಿರುವ ಮತ್ತೊಂದು ಸಾಧ್ಯತೆಯೂ ಉಂಟು.

ಕೆಲವು ಪದಗಳು ಬಳಕೆಯ ನೆಲೆಗಳನ್ನಾಧರಿಸಿ ಸ್ತ್ರೀವಾಚಕಗಳ ಅಥವಾ ಪುರುಷ ವಾಚಕಗಳ ಅರ್ಥಗಳನ್ನು ಪಡೆಯುತ್ತವೆ. ಇದನ್ನು ಉದಾಹರಣೆಯ ಮೂಲಕ ಪರಿಶೀಲಿಸಬಹುದು:

ಉದಾ:೧. ನಾಯಕ – ನಾಯಕಿ

೨. ನಟ – ನಟಿ

೩. ನಾಯಕನಟ – ನಾಯಕನಟಿ

ಉದಾಹರಣೆ ಒಂದರಲ್ಲಿ ನಾಯಕ ಪುರುಷವಾಚಿಯಾಗಿದ್ದರೆ ನಾಯಕಿ ಸ್ತ್ರೀವಾಚಕವಾಗಿದೆ. ಉದಾಹರಣೆ ಮೂರರಲ್ಲಿ ನಾಯಕ ಪದವು ತಟಸ್ಥವಾಗಿ ಪುರುಷ ಮತ್ತು ಸ್ತ್ರೀವಾಚಕ ಎರಡೂ ಪದಗಳಲ್ಲಿಯೂ ಬಳಕೆಗೊಂಡಿದೆ. ಉದಾಹರಣೆ ಮೂರರಲ್ಲಿ ನಾಯಕ ಪದವು 'ಪ್ರಧಾನ ಪಾತ್ರ' ಎಂಬ ಅರ್ಥದಲ್ಲಿ ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಅನ್ವಯವಾಗಿದೆ. ಇದರಿಂದ ಕೆಲವು ಪದಗಳು ಬಳಕೆಯ ನೆಲೆಗಳನ್ನು ಅನುಸರಿಸಿ ಅರ್ಥಪಡೆದುಕೊಳ್ಳುತ್ತವೆ ಎಂದು ತಿಳಿದುಬರುತ್ತದೆ.

ಪದಗಳನ್ನು ಸ್ತ್ರೀವಾಚಕಗಳು, ಪುರುಷವಾಚಕಗಳು ಎಂದು ವಿಂಗಡಿಸಿ ಗುರುತಿಸುವ ಬದಲು ಇಬ್ಬರಿಗೂ ಸಮಾನವಾಗಿ ಅನ್ವಯವಾಗುವಂತಹ ಪದಗಳ ರಚನೆ ಪ್ರಕ್ರಿಯೆ ಇಂದು ಚಾಲ್ತಿಯಲ್ಲಿದೆ. ಕನ್ನಡದಲ್ಲಿ ಈ ರೀತಿಯ ಪದಗಳ ರಚನೆಯ ಪ್ರಕ್ರಿಯೆ ಇಲ್ಲದಿದ್ದರೂ ಕನ್ನಡದಲ್ಲಿ ಬಳಕೆಯಲ್ಲಿರುವ ಕೆಲವು ಇಂಗ್ಲಿಷ್ ಪದಗಳನ್ನು ಪರಿಶೀಲಿಸಬಹುದು.

ಉದಾ: ಪುರುಷ – ಸ್ತ್ರೀ – ತಟಸ್ಥ

ಚೇರ್‌ಮನ್ – ಚೇರ್‌ವುಮನ್ – ಚೇರ್‌ಪರ್ಸನ್

ಇಲ್ಲಿ 'ಚೇರ್‌ಮನ್' ಪದ ಇಂಗ್ಲಿಷ್‌ನ ಪುರುಷವಾಚಕ ಪದವಾದರೂ ಅದರ ಅರಿವಿಲ್ಲದ ಗ್ರಾಮೀಣ ಪ್ರದೇಶದ ಭಾಷಿಕರು ಚೇರ್‌ಮನಪ್ಪ ಎಂದು ಬಳಕೆ ಮಾಡುತ್ತಿದ್ದಾರೆ. ಈ ಹುದ್ದೆಗೆ ಮಹಿಳೆ ಆಯ್ಕೆಯಾದರೂ ಚೇರ್‌ವುಮನ್ ಪದದ ಬಳಕೆ ಬಹಳ ಕಡಿಮೆ ಅಥವಾ ಇಲ್ಲವೆಂದೇ ಹೇಳಬಹುದು. ಇದಕ್ಕೆ ಬದಲಾಗಿ ಚೇರ್‌ಮನಮ್ಮ ಎಂದು ಬಳಸಲಾಗುತ್ತಿದೆ. ಇಲ್ಲಿ ಚೇರ್‌ಮನ್ ಪದಕ್ಕಿರುವ ಬಳಕೆಯ ವ್ಯಾಪ್ತಿ 'ಚೇರ್‌ವುಮನ್' ಪದಕ್ಕಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಇದಕ್ಕೆ ಕಾರಣ ಮಹಿಳೆ ಹೆಚ್ಚು ಈ ಹುದ್ದೆಯನ್ನು ನಿರ್ವಹಿಸದಿರುವುದಾಗಿದೆ. ಪದಗಳ ಈ ರೀತಿಯ ಲಿಂಗಾಧಾರಿತ ವಿಂಗಡಣೆ ಬೇಡವೆಂದು 'ಚೇರ್‌ಪರ್ಸನ್' ಎಂಬ ಪದವನ್ನು ಬಳಕೆಗೆ ತಂದರೂ ಅದು ಚೇರ್‌ಪರ್ಸನಪ್ಪ, ಚೇರ್‌ಪರ್ಸನಮ್ಮಗಳಾಗುವ ಸಾಧ್ಯತೆಗಳು ಉಂಟು. ಒಂದು ಭಾಷಿಕ ಸಮುದಾಯದೊಳಗೆ ಭಾಷೆ ಮತ್ತು ಲಿಂಗದ ಸಂಬಂಧ ಸರಳವಾಗಿರುವುದಿಲ್ಲ. ಪದಗಳು ಎಲ್ಲಿ ಜೈವಿಕ ಭಿನ್ನತೆಯ ಆಧಾರದ ಮೇಲೆ ವಿಂಗಡಣೆಯಾಗುತ್ತವೆ ಹಾಗೂ ಯಾವಾಗ ಸಾಮಾಜಿಕ ಭಿನ್ನತೆಯ ಆಧಾರದ ಮೇಲೆ ವಿಂಗಣೆಗೆ ಒಳಪಡುತ್ತವೆ ಎಂಬುದನ್ನು ಗುರುತಿಸಿಕೊಳ್ಳಬೇಕು.

ಸ್ತ್ರೀವಾದಿಗಳು ಭಾಷೆಯಲ್ಲಿ ಮಹಿಳಾ ಅಸ್ಮಿತೆಯನ್ನು ಕುರಿತು ಚರ್ಚಿಸುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ತೃತೀಯ ಲಿಂಗಿಗಳನ್ನು ಕುರಿತು ಚರ್ಚಿಸುವ ಅನಿವಾರ್ಯತೆಯಿದೆ. ಸ್ತ್ರೀ, ಪುರುಷರಿಗೆ ಇರುವಂತೆ ತೃತೀಯ ಲಿಂಗದವರಿಗೆ ನಿರ್ದಿಷ್ಟ ಸೂಚಕಗಳು ಭಾಷೆಯಲ್ಲಿ ಇಲ್ಲದ ಕಾರಣ ಅವರನ್ನು ಭಾಷಿಕವಾಗಿ ಹೇಗೆ ಗುರುತಿಸಲಾಗುತ್ತಿದೆ ಎಂಬುದನ್ನು ಪರಿಶೀಲಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಅವರ ಐಡೆಂಟಿಟಿ

ಮಾರ್ಕರ್‌ಗಳನ್ನು ಪರಿಶೀಲಿಸುವುದಾದರೆ, ಸಮಾಜವು ಇವರನ್ನು ಪ್ರಾಚೀನ ಕಾಲದಿಂದಲೂ ಎರಡು ರೀತಿಯಲ್ಲಿ ಪರಿಗಣಿಸುತ್ತಿದೆ. ಒಂದು ಗೌರವಯುತವಾಗಿ ಕಾಣುವಿಕೆ. ಎರಡು ಅಗೌರವಯುತವಾಗಿ ಕಾಣುವಿಕೆ.

ತೃತೀಯ ಲಿಂಗದವರನ್ನು ಸಮಾಜವು ಗೌರವಯುತವಾಗಿ ಕಾಣುತ್ತಿರುವಿಕೆಗೆ ಪೌರಾಣಿಕ ಹಾಗೂ ಧಾರ್ಮಿಕ ಹಿನ್ನೆಲೆಗಳನ್ನು ಪರಿಶೀಲಿಸಬಹುದು. ಸಂಸ್ಕೃತ ಕೋಶಗಳಲ್ಲಿ ಶಿಖಂಡಿ ಪದವು ಆಧ್ಯಾತ್ಮಿಕ ಅರ್ಥಛಾಯೆಯನ್ನು ಪಡೆಯುತ್ತದೆ. ಮುಕ್ತಿ ಹೊಂದಿದವನು, ಬಿಡುಗಡೆ ಪಡೆದವನು, ವಿಷ್ಣುವಿನ ಪರ್ಯಾಯ ನಾಮಗಳಲ್ಲಿ ಶಿಖಂಡಿಯೂ ಒಂದು. ಕ್ರಿಶ್ಚಿಯನ್ ಧರ್ಮದ ಪ್ರಕಾರ ವೃಷಣ ಮರ್ಧನದಿಂದ ಪಾಪ ಪರಿಹಾರ ಸಾಧ್ಯ ಎಂಬ ನಂಬಿಕೆ ಇದೆ. ಗಂಡು ಜೋಗಮ್ಮರು ದೇವರಿಗೆ ಹತ್ತಿರವಾದವರು. ಅವರ ಶಾಪ ಬೇಗ ತಟ್ಟುತ್ತದೆ ಎಂಬ ಕಾರಣಗಳು, ಮಂಗಳ ಮುಖಿಯರು, ನಿತ್ಯ ಸುಮಂಗಲಿಯರು ಮುಂತಾದ ಹೆಸರುಗಳು ಅವರನ್ನು ಗೌರವಯುತವಾಗಿ ಕಾಣುವಿಕೆಯ ಪ್ರತೀಕಗಳಾಗಿವೆ.

ತೃತೀಯ ಲಿಂಗಿಗಳನ್ನು ಗುರುತಿಸುವ ಪದಗಳಿಗೆ ನಿಘಂಟುಗಳು ನೀಡಿರುವ ಅರ್ಥಗಳು ಹಾಗೂ ಸಾಮಾಜಿಕವಾಗಿ ಅವರನ್ನು ಗುರುತಿಸುವ ಪದಗಳು ಪಡೆದುಕೊಂಡಿರುವ ಅರ್ಥಗಳನ್ನು ನೋಡಬಹುದು:

ಅ) ನಿಘಂಟುಗಳು ನೀಡಿರುವ ಅರ್ಥಗಳು

೧. ಖೋಜಾ ಮೂಲತಃ ಮರಾಠಿ ಪದವಾಗಿದ್ದು, ಕೊಜ್ಜ, ಕೊಜ್ಜೆಯಾಗುವುದರ ಮೂಲಕ ಕನ್ನಡ ಪದವಾಗಿದೆ.

೨. ಕಿಟೆಲ್ ಕನ್ನಡ-ಇಂಗ್ಲಿಷ್ ನಿಘಂಟು – ಕೊಜ್ಜೆ, ಖೋಜಾ, ಶಿಖಂಡಿ, ನಪುಂಸಕ, ಕ್ಲೀಬ.

೩. ಕನ್ನಡ ಸಾಹಿತ್ಯ ಪರಿಷತ್ತಿನ ಕೋಶ– ಕೊಜ್ಜೆ, ಖೋಜ್ಜೆ, ಖೋಜಾ, ಖೋಜೆ, ಖ್ವಾಜಾ, ಷಂಡ, ವರ್ಷದರ, ವೇಶ್ಯೆಯ ಬಾಗಿಲು ಕಾಯುವ ನಪುಂಸಕದಾಸ, ರಾಣಿವಾಸದ ದ್ವಾರಪಾಲಕ, ಪುರುಷನೂ ಅಲ್ಲದ ಸ್ತ್ರೀಯೂ ಅಲ್ಲದ ವ್ಯಕ್ತಿ, ನಿರ್ವೀಯ, ದುರ್ಬಲ, ಬಲಹೀನ.

೪. ಸಂಸ್ಕೃತದಲ್ಲಿ– ಕ್ಲೀಬ, ವರ್ಷದರ, ಷಂಡಕ, ನಪುಂಸಕ, ವಧ್ರಿ.

೫. ಕ್ಲೀಬ– ಅಶಕ್ತನಾದವನು, ಹೇಡಿ, ಸೋಮಾರಿ, ಕೈಲಾಗದವನು, ಪುಕ್ಕ, ಮೈಗಳ್ಳ.

೬. ಕಾರಂತರ ಸಿರಿಗನ್ನಡ ಅರ್ಥಕೋಶ– ಸೂಗ, ಖೊಜ್ಜೆ, ನಪುಂಸಕ.

೭. ಶತಪಥ ಬ್ರಾಹ್ಮಣವು ಇವರನ್ನು ಉದ್ದಕೂದಲಿನ ಪುರುಷರು ಎಂದು ಗುರುತಿಸುತ್ತದೆ.

೮. Hijira- As an Arabic word meaning migration also romanised as hijrah, hejira, and hegira.

೯. Transuestite: ಅನ್ಯಲಿಂಗವೇಶಿ, ವಿರುದ್ಧ ಲಿಂಗದ ಬಟ್ಟೆ ತೊಟ್ಟು ಖುಷಿ ಪಡುವ ವ್ಯಕ್ತಿ ನಪುಂಸಕ.

**ಆ) ಸಾಮಾಜಿಕವಾಗಿ ಬಳಸುವ ಪದಗಳು.**

೧. ಹೆಂಗಂಡಸರು – ಹೆಣ್ಣಿನ ರೂಪದಲ್ಲಿರುವ ಗಂಡಸರು.

೨. ಛಕ್ಕಾ–A set of six, sixer, The sixth in a pack of cards, A homosexual bottom, the recipient male partner during A positive sodomite.

೩. ನಂಬರ್ ನೈನ್–ಪೂರ್ಣವಲ್ಲದ ಎಂಬ ಅರ್ಥದಲ್ಲಿ ಬಳಕೆ.

೪. ೫೦–೫೦ – ಅರ್ಧ ಹೆಣ್ಣು ಅರ್ಧ ಗಂಡು ಎಂಬ ಅರ್ಥದಲ್ಲಿ ಬಳಕೆ.

೫. ಹೆಣ್ಣಿಗ

೬. •೫ ಸಂಪೂರ್ಣ ಗಂಡೂ ಅಲ್ಲ, ಸಂಪೂರ್ಣ ಹೆಣ್ಣು ಅಲ್ಲ ಎಂಬ ಅರ್ಥದಲ್ಲಿ ಬಳಕೆ.

೭. ಮಾಮಗಳು

೮. ಮಂಗಳಮುಖಿಯರು

೯. ನಿತ್ಯಸುಮಂಗಲಿಯರು

೧೦. ಪೊಟ್ಟೈಗಳು–ತಮಿಳು ಪದ, ಸೀರೆಯುಟ್ಟ ಹೆಂಗಂಡಸರು.

೧೧. ಅರವಣಿ–ಅರವಣನ ಹೆಂಡತಿಯರು ಎಂಬ ಮಹಾಭಾರತದ ಹಿನ್ನೆಲೆಯಲ್ಲಿ ಬಳಕೆ.

ಪದಗಳೆಲ್ಲವು ಪುರುಷವಾಚಕಗಳೆಂದು ಪರಿಗಣಿಸಿ ಸ್ತ್ರೀವಾಚಕಗಳನ್ನು ಸೃಷ್ಟಿಸಿಕೊಳ್ಳುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ತೃತೀಯಲಿಂಗಿಗಳನ್ನು ಭಾಷಿಕವಾಗಿ ಗುರುತಿಸುವುದು ಹೇಗೆ ಎಂಬ ಪ್ರಶ್ನೆ ಎದುರಾಗುತ್ತದೆ.

ಪುರುಷ – ನಿರ್ದೇಶಕ

ಸ್ತ್ರೀ – ನಿರ್ದೇಶಕಿ

ತೃತೀಯಲಿಂಗಿ – ?

ಇವರನ್ನು ಗುರುತಿಸಲು ಪ್ರತ್ಯೇಕ ಪ್ರತ್ಯಯಗಳಿಲ್ಲ. ಹಾಗಾದರೆ ಇವರನ್ನು ಗುರುತಿಸುವುದು ಹೇಗೆ? ತೃತೀಯ ಲಿಂಗಿಗಳು ತಮ್ಮನ್ನು ತಾವು ಗಂಡುದೇಹದಲ್ಲಿರುವ ಹೆಣ್ಣುಗಳು ಎಂದು ಕರೆದುಕೊಳ್ಳುತ್ತಾರೆ. ತಮ್ಮನ್ನು ಸ್ತ್ರೀಯರೆಂದೇ ಪರಿಗಣಿಸಬೇಕು ಎಂಬುದು ಅವರ ಅಭಿಲಾಷೆ. ಅವರು ತಮ್ಮನ್ನು ಸ್ತ್ರೀವಾಚಕಗಳ ಮುಖಾಂತರವೇ ಗುರುತಿಸಿಕೊಳ್ಳುತ್ತಿದ್ದಾರೆ. ಸಿನಿಮಾ ನಿರ್ದೇಶಕಿ, ಸಾಮಾಜಿಕ ಕಾರ್ಯಕರ್ತೆ, ಕಛೇರಿ ಸಹಾಯಕಿ. ಈ ರೀತಿಯಲ್ಲಿ ತಮ್ಮನ್ನು ತಾವು ಗುರುತಿಸಿಕೊಳ್ಳುತ್ತಿದ್ದಾರೆ. ಆದರೆ, ಸಮಾಜವು ಅವರನ್ನು ನಪುಂಸಕವಾಚಕಗಳನ್ನು ಬಳಸಿ ಗುರುತಿಸುವ ರೂಢಿ ಹೆಚ್ಚಾಗಿದೆ.

**೩.೨. ಭಾಷೆಯ ಬಳಕೆಯ ಲಿಂಗ ಸಂಬಂಧಿ ನೆಲೆಗಳು**

ಸಾಮಾಜಿಕ ಸಂದರ್ಭ ಹಾಗೂ ವೈಯಕ್ತಿಕ ಸಂದರ್ಭಗಳಲ್ಲಿ ಗಂಡು ಮತ್ತು ಹೆಣ್ಣು ಮಾತನಾಡುವಾಗ ಅವರ ಮಾತುಕತೆಯ ರೀತಿ ಮತ್ತು ನೆಲೆಗಳು ಬೇರೆ ಬೇರೆಯಾಗಿರುತ್ತವೆ ಎಂಬುದು ಕೆಲವು ಸ್ತ್ರೀವಾದಿಗಳ ನಿಲುವು. ಭಾಷೆ ಎಂಬ ಸಾಮರ್ಥ್ಯವನ್ನು ಪಡೆದುಕೊಳ್ಳುವ ಹಂತದಲ್ಲಿ ಗಂಡು ಮತ್ತು ಹೆಣ್ಣು ಎಂಬ ವ್ಯತ್ಯಾಸ ಇರುವುದಿಲ್ಲ. ಬಳಕೆಯ ನೆಲೆಗೆ ಬಂದಾಗ ವ್ಯತ್ಯಾಸಗಳಿವೆಯೇ? ಎಂಬುದನ್ನು ಪರಿಶೀಲಿಸುವ ಅಗತ್ಯವಿದೆ. ವಿವಿಧ ವರ್ಗ, ಜಾತಿ, ವಯೋಮಾನ, ಶಿಕ್ಷಣ, ಪ್ರಾದೇಶಿಕವಾಗಿ ಭಾಷೆಯ ಬಳಕೆಯ ನೆಲೆಗಳು ಭಿನ್ನವಾಗುತ್ತವೆ ಎನ್ನುವುದು ನಿಜವಾದರೂ ವ್ಯಕ್ತಿಯು ಹೆಣ್ಣು ಅಥವಾ ಗಂಡು ಎಂಬ ಕಾರಣದಿಂದ ಉಂಟಾಗುವ ಭಿನ್ನತೆಗಳಿವೆಯೇ? ಇದ್ದರೆ ಅವು ಯಾವುವು ಎಂಬುದನ್ನು ಪರಿಶೀಲಿಸುವ ಅಗತ್ಯವಿದೆ.

ಭಾಷೆಯ ಬಳಕೆಯಲ್ಲಿನ ಲಿಂಗಸಂಬಂಧಿ ವ್ಯತ್ಯಾಸಗಳನ್ನು ಪರಿಶೀಲಿಸುವಲ್ಲಿ ಕೆಲವು ಪ್ರಶ್ನೆಗಳು ಎದುರಾಗುತ್ತವೆ. ಅವುಗಳೆಂದರೆ:

೧. ಗಂಡು ಮತ್ತು ಹೆಣ್ಣಿನ ಮಾತುಗಾರಿಕೆ ಭಿನ್ನ ಎಂದು ಹೇಳುವಲ್ಲಿ ಪುರುಷನ ಮಾತುಗಾರಿಕೆಯ ಶೈಲಿಯನ್ನು ಮಾನದಂಡವಾಗಿ ಪರಿಗಣಿಸುತ್ತಿರುವಿಕೆ?

೨. ಗಂಡಿಗೊಂದು ಮಾತಿನ ಲಕ್ಷಣ, ಹೆಣ್ಣಿಗೊಂದು ಮಾತಿನ ಲಕ್ಷಣವನ್ನು ಹೇಳುವುದರ ಹಿಂದಿನ ಉದ್ದೇಶಗಳೇನು? ಈ ಪ್ರಕ್ರಿಯೆ ತಾರತಮ್ಯವನ್ನು ಪೋಷಿಸುವ ಉದ್ದೇಶವೇನಾದರೂ ಹೊಂದಿದೆಯೇ?

ಈ ಮೇಲಿನ ಪ್ರಶ್ನೆಗಳ ಹಿನ್ನೆಲೆಯಲ್ಲಿ ಕೌಟುಂಬಿಕ ವಲಯ ಹಾಗೂ ಸಾರ್ವಜನಿಕ ವಲಯಗಳಲ್ಲಿನ ಭಾಷಾ ಭಿನ್ನತೆಗಳನ್ನು ಪರಿಶೀಲಿಸಬೇಕಿದೆ. ಎಚ್.ಎಸ್. ಶ್ರೀಮತಿಯವರ ಸ್ತ್ರೀವಾದಿ: ತಾತ್ತ್ವಿಕತೆ ಎಂಬ ಪುಸ್ತಕದಲ್ಲಿನ ಹೇಳಿಕೆಯನ್ನು ಗಮನಿಸುವುದಾದರೆ, 'ಪದಗಳ ಆಯ್ಕೆ, ವಾಕ್ಯ ರಚನಾ ವಿಧಾನ, ಧ್ವನಿಯ ಏರಿಳಿತ, ವಿಷಯದ ಆಯ್ಕೆ ಹೀಗೆ ಪ್ರತಿಯೊಂದರಲ್ಲೂ ಗಂಡಿನ ಭಾಷೆಯ ಗುಣ ಮತ್ತು ಹೆಣ್ಣಿನ ಭಾಷೆಯ ಗುಣ ಪ್ರತ್ಯೇಕದ್ದಾಗಿರುತ್ತದೆ. ಮಾತು ಕಲಿಯಲು ತೊಡಗಿದ ಹಂತದಿಂದಲೇ ಮಗುವಿಗೆ ಈ ಬಗ್ಗೆ ಸೂಕ್ತ ತರಬೇತಿ ದೊರೆಯಲಾರಂಭವಾಗುತ್ತದೆ. ಮನೆಯಲ್ಲಿ ತಂದೆ, ತಾಯಿ, ಮೊದಲಾದ ಸದಸ್ಯರಿಂದ ಮೊದಲಾಗಿ, ಮುಂದೆ ಮಗು ಬೆಳೆದಂತೆ ತೆರೆದುಕೊಳ್ಳುವ ಅಕ್ಕ ಪಕ್ಕದವರಿರಬಹುದು, ಶಾಲೆ ಇರಬಹುದು, ಸಂಪರ್ಕಕ್ಕೆ ಬರುವ ಇನ್ನಾರೋ ಇರಬಹುದು–ಅವ್ಯಾಹತವಾಗಿ ಈ ತರಬೇತಿ ಜಾರಿಯಲ್ಲಿರುತ್ತದೆ. ಗಂಡು, ಹೆಣ್ಣು ಮಕ್ಕಳು ಬುದ್ಧಿ ತಿಳಿಯುವ ಮೊದಲೇ ತಮ್ಮ ಭಾಷೆಯ ಸಾಂಸ್ಕೃತಿಕ, ಸಾಮಾಜಿಕ ದಿಗ್ಬಂಧನದೊಳಗೆ ಸಿಲುಕಿ ಹೋಗುತ್ತಾರೆ. ಆಟಪಾಠಗಳಲ್ಲೇ ತಮ್ಮ ಅಪ್ಪ ಅಮ್ಮಂದಿರ ಪರಸ್ಪರ ಭಾಷೆಯನ್ನು ಅನುಕರಿಸುತ್ತಾ ತಮ್ಮ ಮಾದರಿಗಳನ್ನು ಕಂಡುಕೊಳ್ಳುತ್ತಾರೆ' ಎನ್ನುತ್ತಾರೆ.

ಇವರ ಹೇಳಿಕೆಯ ಪ್ರಕಾರ, ಕೌಟುಂಬಿಕ ವಲಯದೊಳಗೆ ಹಾಗೂ ಸಾರ್ವಜನಿಕ ವಲಯ ಎರಡರಲ್ಲೂ ಗಂಡು ಮತ್ತು ಹೆಣ್ಣು ಮಕ್ಕಳು ಲಿಂಗಭಿನ್ನ ಭಾಷೆಯನ್ನು ರೂಢಿಸಿಕೊಳ್ಳುತ್ತಾ ಬೆಳೆಯುತ್ತಾರೆ ಎಂಬುದಾಗಿದೆ. ಪಾಶ್ಚಾತ್ಯ ಸ್ತ್ರೀವಾದಿಗಳು ಈ ಹಿನ್ನೆಲೆಯಲ್ಲಿ ಅನೇಕ ಅಧ್ಯಯನಗಳನ್ನು ನಡೆಸಿದ್ದಾರೆ. ಅವರ ಎಲ್ಲ ಅಧ್ಯಯನಗಳು ಗಂಡು ಮತ್ತು ಹೆಣ್ಣಿನ ಭಾಷೆಯಲ್ಲಿ ಭಿನ್ನತೆಗಳಿವೆ ಎಂಬುದನ್ನು ಗುರುತಿಸಿವೆ. ಒಟ್ಟಾರೆ ಇಲ್ಲಿಯವರೆಗೆ ಗುರುತಿಸಿರುವ ಗಂಡಿನ ಭಾಷೆಯ ಚಟುವಟಿಕೆ ಮತ್ತು ಹೆಣ್ಣಿನ ಭಾಷಾ ಚಟುವಟಿಕೆಯಲ್ಲಿನ ಭಿನ್ನತೆಗಳನ್ನು ಕೆಲವು ನೆಲೆಗಳಲ್ಲಿ ಪರಿಶೀಲಿಸಲಾಗುವುದು. ಅವುಗಳೆಂದರೆ:

೧. ಪ್ರಶ್ನೆಗಳನ್ನು ಬಳಸುವ ನೆಲೆಗಳು

೨. ಉದ್ಗಾರವಾಚಕಗಳ ಬಳಕೆ

೩. ನೇರ ಮಾತುಗಾರಿಕೆ/ ಸುತ್ತಿ ಬಳಸಿ ಮಾತನಾಡುವಿಕೆ

೪. ನೇರ ನಿರ್ದೇಶನ/ ವಿನಂತಿಸಿಕೊಳ್ಳುವಿಕೆ

೫. ವರದಿ ರೂಪ/ ಭಾವನಾತ್ಮಕ ನೆಲೆ

೬. ಮಾತನಾಡಲು ಆಯ್ಕೆ ಮಾಡಿಕೊಳ್ಳುವ ವಿಷಯಗಳಲ್ಲಿ ಭಿನ್ನತೆ

ಗಂಡು ಮತ್ತು ಹೆಣ್ಣಿನ ಮಾತಿನ ನಡುವೆ ಹೆಣ್ಣು ಹೆಚ್ಚು ಪ್ರಶ್ನೆಗಳನ್ನು ಬಳಸುತ್ತಾಳೆ ಎಂಬ ನಿಲುವಿದೆ. ಮಾತಿನ ಸರಣಿ ಕಡಿದು ಹೋಗದೆ ಮುಂದುವರೆಯಲು ಈ ರೀತಿ ಪ್ರಶ್ನೆಗಳನ್ನು ಬಳಸುತ್ತಾರೆ. ಕೌಟುಂಬಿಕ ವಲಯದಲ್ಲಿನ ಅನೇಕ ನಿರ್ಬಂಧಗಳಿಂದಾಗಿ ಹೆಣ್ಣುಮಕ್ಕಳು ಅನಿಶ್ಚಿತತೆ ಮತ್ತು ಹಿಂಜರಿಕೆಯ ಕಾರಣದಿಂದ ಹೋಗಲಾ, ಬರಲಾ, ಮಾಡ್ಲ, ಬಿಡ್ಲ ಈ ರೀತಿ ಪ್ರಶ್ನೆಗಳನ್ನು ಹೆಚ್ಚು ಬಳಸುತ್ತಾರೆ.

ಹುಡುಗ: ಅಪ್ಪಾ ನಾನು ಫ್ರೆಂಡ್ಸ್ ಜೊತೆ ಸಿನಿಮಾಗೆ ಹೋಗ್ತಿದ್ದೀನಿ.

ಹುಡುಗಿ: ಅಪ್ಪಾ ನಾನು ಫ್ರೆಂಡ್ಸ್ ಜೊತೆ ಸಿನಿಮಾಗೆ ಹೋಗ್ಲಾ?

ಮೇಲಿನ ಮಾದರಿಯಲ್ಲಿ ಕೌಟುಂಬಿಕ ವಲದಯದಲ್ಲಿ ಹೆಣ್ಣುಮಕ್ಕಳಿಗಿರುವ ನಿರ್ಬಂಧಗಳು, ಗಂಡುಮಕ್ಕಳಿಗಿರುವ ಸ್ವಾತಂತ್ರ್ಯವನ್ನು ಕಾಣಬಹುದು. ಮನೆಯಿಂದ ಹೊರಗೆ ಹೆಣ್ಣುಮಕ್ಕಳು ಹೋಗಬೇಕಾದರೆ ಪೋಷಕರ ಒಪ್ಪಿಗೆ ಪಡೆಯಬೇಕು. ಆ ಒಪ್ಪಿಗೆ ಪಡೆಯಬೇಕಾದರೆ ಅದು ಸಿಗುತ್ತದೋ ಇಲ್ಲವೋ ಎಂಬ ಗೊಂದಲದಲ್ಲಿ ತನ್ನ ಬೇಡಿಕೆಗಳನ್ನು ಪೋಷಕರ ಮುಂದಿಡುತ್ತಾರೆ. ಆದರೆ, ಗಂಡು ಮಕ್ಕಳಿಗೆ ಈ ರೀತಿಯ ನಿರ್ಬಂಧಗಳಿಲ್ಲದ ಕಾರಣ ಅವನು ಹೆಚ್ಚಿನ ಸಮಯಗಳಲ್ಲಿ ಒಪ್ಪಿಗೆಯನ್ನು ಕೇಳುವುದಿಲ್ಲ. ಸಾಮಾಜಿಕ ನಿರ್ಬಂಧಗಳಿಂದಾಗಿ ಗಂಡು ಮತ್ತು ಹೆಣ್ಣಿನ ಭಾಷೆಯ ಬಳಕೆಯಲ್ಲಿ ಈ ರೀತಿಯ ಭಿನ್ನತೆಗಳು ಉಂಟಾಗುತ್ತವೆ.

ಮಹಿಳೆಯರು ಮಾತಿನ ನಡುವೆ ಹೆಚ್ಚು ಉದ್ಗಾರವಾಚಕಗಳನ್ನು ಬಳಸುತ್ತಾರೆ ಎಂಬ ನಿಲುವಿದೆ. ತಾನು ಹೇಳುತ್ತಿರುವ ವಿಷಯಗಳನ್ನು ಕೇಳುತ್ತಿರುವವರು ಒಪ್ಪುತ್ತಾರೋ, ಇಲ್ಲವೋ, ತಾನು ಹೇಳುತ್ತಿರುವ ವಿಷಯ ಸರಿಯಿದೆಯೋ, ಇಲ್ಲವೋ ಎಂಬ ಗೊಂದಲದಲ್ಲಿಯೇ ಹೆಣ್ಣು ಅಲ್ವ, ಹೌದಾ, ಹಾಗಾ ಈ ರೀತಿಯ ಪ್ರಶ್ನೆಗಳನ್ನು ಬಳಸುತ್ತಿರುತ್ತಾಳೆ. ಕುಟುಂಬದ ವಲಯದಲ್ಲಿ ಹೆಣ್ಣಿನ ನಿಲುವಿಗೆ ಮಾನ್ಯತೆ ಇಲ್ಲವಾದಾಗ ತಾನು ಏನಾದರೂ ಹೇಳಬೇಕು ಎನಿಸಿದಾಗ ಗೊಂದಲದಲ್ಲಿಯೇ ತನ್ನ ವಿಚಾರಗಳನ್ನು ಹೇಳಿದಾಗ ಈ ರೀತಿಯ ಉದ್ಗಾರವಾಚಕಗಳು ಬಳಕೆಯಾಗುತ್ತವೆ. ಕೌಟುಂಬಿಕ ವಲಯದಲ್ಲಿ ಪುರುಷನ ನಿಲುವುಗಳು ಹೆಚ್ಚು ನಡೆಯುವುದರಿಂದ ಅವನ ಭಾಷೆಯಲ್ಲಿ ಈ ರೀತಿಯ ಅಂಶಗಳಿರುವುದಿಲ್ಲ.

ಪುರುಷರು ಯಾವುದೇ ವಿಷಯವನ್ನು ಹೇಳಬೇಕಾದರೂ ನೇರವಾಗಿ ಪ್ರಸ್ತಾಪಿಸುತ್ತಾರೆ. ಮಹಿಳೆಯರು ವಿಷಯಕ್ಕೆ ಸಂಬಂಧಿಸಿದ ಪೀಠಿಕೆಗಳನ್ನು ಮೊದಲು ಹಾಕಿ, ಆನಂತರ ವಿಷಯವನ್ನು ಪ್ರಸ್ತಾಪಿಸುತ್ತಾರೆ. ಹಾಗಾಗಿ ಅವರು ಸುತ್ತಿ ಬಳಸಿ ಮಾತನಾಡುತ್ತಾರೆ ಎಂಬ ನಿಲುವಿದೆ. ಇದನ್ನು ಗಂಡ ಹೆಂಡತಿಯ ಮಾತಿನ ಒಂದು ಮಾದರಿಯ ಮೂಲಕ ಪರಿಶೀಲಿಸಬಹುದು:

ಗಂಡ: ನಾಳೆ ನನ್ನ ಗೆಳೆಯನ ಮಗನ ಮದ್ವೆಗೆ ಹೋಗ್ಬೇಕು.

ಹೆಂಡತಿ: ರೀ ಅದೇ ನಾನು ನನ್ನ ಗೆಳತಿ ಸುಶೀಲ ಅಂತ ಹೇಳ್ತಿದ್ನಲ್ಲಾ. ಅದೇ ನನ್ನ ಡಿಗ್ರಿ ಫ್ರೆಂಡ್. ಅವಳ ಮಗ ಅಮೇರಿಕಾಗೆ ಓದೋಕೆ ಹೋಗಿದ್ನಂತೆ. ಅಲ್ಲೇ ಯಾರೋ ಹುಡುಗೀನ ಪ್ರೀತಿಸಿದ್ದಾನಂತೆ. ಅವರ ಮದ್ವೆ ಅಂತೆ. ನಾಳೆ ಹೋಗ್ಬೇಕು. ಕರೆಯೋಕೆ ಸುಶೀಲ ಇವತ್ತು ಮಧ್ಯಾನ ಮನೆಗೆ ಬಂದಿದ್ಲು.

ಮೇಲಿನ ಮಾದರಿಯಲ್ಲಿ ಪುರುಷ ಒಂದೇ ವಾಕ್ಯದಲ್ಲಿ ವಿಷಯವನ್ನು ನೇರವಾಗಿ ಪ್ರಸ್ತಾಪಿಸಿರುವದನ್ನು ಕಾಣಬಹುದು. ಹೆಣ್ಣು ಒಂದು ವಿಷಯವನ್ನು ಪ್ರಸ್ತಾಪಿಸಬೇಕಾದರೆ ಅದಕ್ಕೆ ಸಂಬಂಧಿಸಿದ ಎಲ್ಲ ವಿವರಗಳನ್ನು ಹೇಳಿ ನಂತರ ವಿಷಯವನ್ನು ಪ್ರಸ್ತಾಪಿಸಿರುವುದು ಕಾಣಬಹುದು.

ಗಂಡು ಯಾವುದೇ ವಿಷಯವನ್ನು ಹೇಳಬೇಕಾದರೂ ನೇರವಾಗಿ ನಿರ್ದೇಶಿಸುತ್ತಾನೆ. ಹೆಣ್ಣು ವಿನಂತಿಸಿಕೊಳ್ಳುವುದರ ಮೂಲಕ ವಿಷಯವನ್ನು ಹೇಳುತ್ತಾಳೆ ಎಂಬ ಮತ್ತೊಂದು ನಿಲುವಿದೆ. ಇದನ್ನು ಒಂದು ಮಾದರಿಯ ಮೂಲಕ ಪರಿಶೀಲಿಸಬಹುದು:

ಗಂಡು: ಅಮ್ಮ ಕಿಟಕಿ ಹಾಕು.

ಹೆಣ್ಣು: ಅಮ್ಮ ಸ್ವಲ್ಪ ಕಿಟಕಿ ಹಾಕಮ್ಮ.

ಮೇಲಿನ ಮಾದರಿಯಲ್ಲಿ ಗಂಡು ಆದೇಶ ನೀಡುತ್ತಿರುವ ನಿಟ್ಟಿನಲ್ಲಿ ಭಾಷೆಯನ್ನು ಬಳಸಿದರೆ ಹೆಣ್ಣು ವಿನಂತಿ ಮಾಡಿಕೊಳ್ಳುವ ನಿಟ್ಟಿನಲ್ಲಿ ಭಾಷೆಯ ಬಳಕೆ ಮಾಡಿರುವುದು ಕಂಡುಬರುತ್ತಿದೆ. ಪುರುಷ ಯಾವುದೇ ವಿಷಯವನ್ನು ಹೇಳುವಾಗ ಅದು ವರದಿ ರೂಪದಲ್ಲಿರುತ್ತದೆ. ಅದೇ ವಿಷಯವನ್ನು ಹೆಣ್ಣು ಹೇಳುವಾಗ ಭಾವನಾತ್ಮಕ ಅಂಶಗಳು ಹೆಚ್ಚಿರುತ್ತವೆ ಎಂಬ ಮತ್ತೊಂದು ನಿಲುವಿದೆ. ಇದನ್ನು ಒಂದೇ ವಿಷಯವನ್ನು ಪುರುಷ ಮತ್ತು ಮಹಿಳಾ ವರದಿಗಾರರು ಹೇಗೆ ವರದಿ ಮಾಡುತ್ತಾರೆ ಎಂಬ ಮಾದರಿಯ ಮುಖಾಂತರ ಪರಿಶೀಲಿಸಬಹುದು:

ಉದಾ: **ಪುರುಷ:** ಕೊಲೆ ನಡೆದ ಸಂದರ್ಭದ ಪ್ರಮುಖ ಕಾರಣವನ್ನು ಶೋಧಿಸುವುದಾದರೆ, ಇಲ್ಲಿ ಪರಸ್ಪರ ವೈಷಮ್ಯ ಎದ್ದು ಕಾಣುತ್ತದೆ. ಅಲ್ಲಿ ಜಾತಿ ರಾಜಕಾರಣವೂ ನಡೆದಿತ್ತು. ಅವಳ ಸೌಂದರ್ಯ ಅವನ ಕಣ್ಣು ಕುಕ್ಕಿತ್ತು. ರೇಪ್ ಮಾಡಿಯೇ ಬಿಟ್ಟ. ಅವಳ ಕುಟುಂಬದವರು ಪೋಲಿಸ್ ಠಾಣೆಯಲ್ಲಿ ದೂರು ದಾಖಲಿಸಿದ್ದಾರೆ.

**ಮಹಿಳೆ:** ಕೊಲೆಗೆ ಮುಖ್ಯಕಾರಣವನ್ನು ನೋಡುವುದಾದರೆ ಅಲ್ಲಿ ಮನುಷ್ಯ ಸಂಬಂಧಗಳಿಗೆ ಬೆಲೆಯೇ ಇರಲಿಲ್ಲ. ಒಬ್ಬ ಹೆಣ್ಣುಮಗಳು ಎಂಬ ಕನಿಕರವೂ ಇಲ್ಲದೆ ಅವಳನ್ನು ಮಾನಭಂಗ ಮಾಡಿ, ಕೊಲೆ ಮಾಡಲಾಯಿತು. ಅವರ ಕುಟುಂಬದವರ ಗೋಳು ನೋಡುವವರ ಕಣ್ಣಲ್ಲೂ ನೀರು ತರಿಸುವಂತಿತ್ತು.

ಮೇಲಿನ ಮಾದರಿಯಲ್ಲಿ ಪುರುಷನ ವರದಿಯಲ್ಲಿ ಘಟನೆಗೆ ಕಾರಣವನ್ನು ಶೋಧಿಸುತ್ತಿರುವಿಕೆ ಮುಖ್ಯವಾಗಿ ಕಾಣುತ್ತದೆ. ಮಹಿಳೆಯ ವರದಿಯಲ್ಲಿ ಆ ಕುಟುಂಬದ ದುಃಖ, ಮಾನವೀಯ ಸಂಬಂಧಗಳು ಇಲ್ಲವಾಗಿರುವಿಕೆ, ಹೆಣ್ಣಿನ ಬಗೆಗಿನ ಸಮಾಜ ಕಳೆದುಕೊಂಡಿರುವ ಗೌರವ ಮುಂತಾದವುಗಳು ಮುಖ್ಯವಾಗಿ ಕಾಣುತ್ತವೆ.

ಹೆಂಗಸರು ಮತ್ತು ಗಂಡಸರು ಮಾತನಾಡಲು ಆಯ್ಕೆ ಮಾಡಿಕೊಳ್ಳುವ ವಿಷಯಗಳು ಭಿನ್ನವಾಗಿರುತ್ತವೆ ಎಂಬ ಮತ್ತೊಂದು ನಿಲುವಿದೆ. ಉದಾಹರಣೆಗೆ ಗಂಡಸರು ರಾಜಕೀಯ, ಕ್ರೀಡೆ, ವ್ಯಾಪಾರ ವ್ಯವಹಾರಗಳನ್ನು

ಕುರಿತಂತೆ ಮಾತನಾಡಿದರೆ, ಹೆಂಗಸರು ಮನೆಯ ತೊಂದರೆಗಳನ್ನು, ಮಕ್ಕಳಪಾಲನೆ ಈ ರೀತಿಯ ವಿಷಯಗಳನ್ನು ಮಾತನಾಡುತ್ತಾರೆ. ಪಾರಂಪರಿಕವಾಗಿ ಗಂಡು ಮನೆಯ ಆಚೆಗಿನ ಕೆಲಸಗಳಲ್ಲಿ ಹೆಚ್ಚಾಗಿ ತೊಡಗಿಕೊಂಡಿದ್ದರಿಂದ ಸಹಜವಾಗಿಯೇ ಅವನು ಚರ್ಚಿಸುವ ವಿಷಯಗಳು ರಾಜಕೀಯ, ಕ್ರೀಡೆ, ವ್ಯವಹಾರಗಳಿಗೆ ಸಂಬಂಧಿಸಿರುತ್ತವೆ. ಹೆಣ್ಣಿನ ಭಾಗವಹಿಸುವಿಕೆ ಮನೆಯಲ್ಲಿಯೇ ಹೆಚ್ಚಿದ್ದರಿಂದ ಅವಳು ಮನೆ, ಮಕ್ಕಳ ವಿಷಯಗಳನ್ನು ಹೆಚ್ಚಾಗಿ ಮಾತನಾಡುತ್ತಾಳೆ. ಗಂಡಸರು ಮನೆ, ಮಕ್ಕಳ ವಿಷಯಗಳನ್ನು ಮಾತನಾಡಲಾರರು ಎಂದಾಗಲಿ ಹೆಂಗಸರು ರಾಜಕೀಯ, ಕ್ರೀಡೆ, ವ್ಯವಹಾರಗಳ ಬಗ್ಗೆ ಮಾತನಾಡುವುದಿಲ್ಲ ಎಂದಾಗಲಿ ನಿರ್ಧರಿಸಲು ಸಾಧ್ಯವಿಲ್ಲ. ಇಂದಿನ ಸಂದರ್ಭದಲ್ಲಿ ಹೆಣ್ಣು ಮಕ್ಕಳು ಪುರುಷರಷ್ಟೇ ಸಮನಾಗಿ ವಿದ್ಯಾಭ್ಯಾಸ, ಸಾಮಾಜಿಕ ಭಾಗವಹಿಸುವಿಕೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಆದ್ದರಿಂದ, ಮಹಿಳೆಯರು ಕೂಡ ರಾಜಕೀಯ, ಕ್ರೀಡೆ ವ್ಯವಹಾರಗಳ ಬಗ್ಗೆ ಮಾತನಾಡುತ್ತಾರೆ. ಆದರೆ, ಈ ವಿಷಯಗಳ ಚರ್ಚೆ ಅವರಲ್ಲಿ ಕಡಿಮೆ ಅವಧಿಯಲ್ಲಿರುತ್ತದೆ. ರಾಜಕೀಯ, ಕ್ರೀಡೆ, ವ್ಯಾಪಾರ, ವ್ಯವಹಾರಗಳು ಸಾಮಾಜಿಕವಾಗಿ ಬಹಳ ಗಂಭೀರ ವಿಷಯಗಳಾದ್ದರಿಂದ ಇವುಗಳ ಬಗ್ಗೆ ಹೆಚ್ಚು ಮಾತನಾಡುವ ಪುರುಷರ ಭಾಷೆಯನ್ನು ಗಂಭೀರವೆಂದು, ಮನೆಯ ಕೆಲಸ, ಮಕ್ಕಳ ಲಾಲನೆ ಪಾಲನೆ ಅಷ್ಟು ಗಂಭೀರ ವಿಷಯಗಳಲ್ಲದ್ದರಿಂದ ಹೆಣ್ಣಿನ ಮಾತನ್ನು ಹರಟೆ ಎಂದು ಸಮಾಜ ನಿರ್ಧರಿಸಿದೆ. ಆಯಾ ಕೆಲಸಗಳು ಅವುಗಳ ಚೌಕಟ್ಟಿನ ಒಳಗೆ ಮುಖ್ಯವಾಗಿರುತ್ತವೆ ಎಂಬುದನ್ನು ಮರೆಯುವಂತಿಲ್ಲ.

ಪರಸ್ಪರ ವಿರುದ್ಧವೆನ್ನಬಹುದಾದ ಮಾತು ಮತ್ತು ಮೌನ ಎಂಬ ಎರಡು ಭಾಷಿಕ ನೆಲೆಗಳನ್ನು ಸ್ತ್ರೀಯರಿಗೆ ಅನ್ವಯಿಸಿ ಚರ್ಚಿಸಲಾಗುತ್ತಿದೆ. ಸಮಾಜದಲ್ಲಿ ಹೆಂಗಸರು ಹೆಚ್ಚು ಮಾತನಾಡುವವರು ಎಂಬ ನಿಲುವಿದೆ. ಹೆಣ್ಣಿನ ಮಾತಿನ ಬಹಳ ಶಕ್ತಿಯುತ ರೂಪಕವಾಗಿ ಸ್ತ್ರೀವಾದಿಗಳು ಮೌನವನ್ನು ಗುರುತಿಸುತ್ತಾರೆ. ಆದರೆ, ಸಾಮಾಜಿಕ ಸಂದರ್ಭಗಳ ಹಿನ್ನೆಲೆಯಲ್ಲಿ ನೋಡುವುದಾದರೆ ಅವಳ ಮಾತಿಗೆ ಬೆಲೆಯಿಲ್ಲ ಎಂದು ತಿಳಿದಾಗ ಹೆಣ್ಣು ಮೌನವಹಿಸುತ್ತಾಳೆ.

ಕೌಟುಂಬಿಕ ವಲಯದೊಳಗೆ ಗಂಡು ಮತ್ತು ಹೆಣ್ಣಿನ ಮಾತುಗಾರಿಕೆಯಲ್ಲಿನ ಭಿನ್ನತೆಗಳನ್ನು ಗುರುತಿಸಿದಂತೆ ಸಾರ್ವಜನಿಕ ವಲಯದೊಳಗಿನ ಮಾತುಗಾರಿಕೆಯಲ್ಲಿ ಭಿನ್ನತೆಗಳನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಕಡಿಮೆ ವಿದ್ಯಾಭ್ಯಾಸ ಪಡೆದ ಮತ್ತು ಸಾಮಾಜಿಕವಾಗಿ ಹೆಚ್ಚು ಸಕ್ರಿಯವಾಗಿರದ ಹೆಣ್ಣು ಮತ್ತು ಉನ್ನತ ವಿದ್ಯಾಭ್ಯಾಸ ಪಡೆದಿರುವ ಸಾಮಾಜಿಕವಾಗಿ ಸಕ್ರಿಯವಾಗಿರುವ ಗಂಡಿನ ನಡುವೆ ಭಿನ್ನತೆಗಳನ್ನು ಗುರುತಿಸಲು ಸಾಧ್ಯ. ಅದು ಅವರವರ ಕಲಿಕೆ ಮತ್ತು ಭಾಗಹಿಸುವಿಕೆಯ ಮಿತಿಗಳನ್ನು ಒಳಗೊಂಡಿರುತ್ತದೆ. ಆದರೆ, ಸಮಾನ ವಿದ್ಯಾಭ್ಯಾಸ ಪಡೆಯುವ ಪುರುಷ ಮತ್ತು ಸ್ತ್ರೀಯರ ನಡುವೆ ಈ ರೀತಿಯ ಭಿನ್ನತೆಗಳನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಪುರುಷನಷ್ಟೇ ವಿಶ್ಲೇಷಣಾತ್ಮಕವಾಗಿ ತರ್ಕಬದ್ಧವಾಗಿ ಸ್ತ್ರೀಯರು ಮಾತನಾಡುತ್ತಾರೆ.

ಕೌಟುಂಬಿಕ ವಲಯದೊಳಗೆ ಗಂಡು ಮತ್ತು ಹೆಣ್ಣಿನ ಭಾಷೆಯಲ್ಲಿನ ಭಿನ್ನತೆಗಳು ಕೆಲವು ಸಂದರ್ಭಗಳಲ್ಲಿ ಈ ಹಿಂದೆ ಚರ್ಚಿಸಿದಂತೆ ಇದ್ದರೂ ಎಲ್ಲ ಪುರುಷ – ಸ್ತ್ರೀಯರಿಗೆ ಈ ಬಗೆಯ ಭಿನ್ನತೆಗಳು ಎಲ್ಲ ಸಂದರ್ಭಗಳಲ್ಲೂ ಅನ್ವಯವಾಗುವುದಿಲ್ಲ. ಇವು ಒಂದು ಸಂದರ್ಭದ ಒಂದು ವಿಷಯದ ಚರ್ಚೆಗೆ ಒಳಪಟ್ಟ, ಒಂದು ವರ್ಗದ ಗಂಡು ಹೆಣ್ಣಿನ ಒಂದು ಮಾದರಿ ಅಷ್ಟೇ. ಸಮಾಜದಲ್ಲಿ ಚಾಲ್ತಿಯಲ್ಲಿರುವ ಕೆಲವು ಮಾದರಿಗಳನ್ನಷ್ಟೇ ಉದಾಹರಿಸುತ್ತ ಹೆಣ್ಣಿನ ಮಾತಿನ ಶೈಲಿ ಹೀಗೆಯೇ ಇದೆ. ಗಂಡಿನ ಮಾತಿನ ಶೈಲಿ ಹೀಗೆಯೆ ಇದೆ ಎಂದು ನಿರ್ಧರಿಸಲು ಸಾಧ್ಯವಾಗುವುದಿಲ್ಲ. ಇಂದಿನ ಗಂಡು ಮತ್ತು ಹೆಣ್ಣಿನ ಸಮಾನಾವಕಾಶ, ಸಮಾನ ಭಾಗವಹಿಸುವಿಕೆಯ ಹಿನ್ನೆಲೆಯಲ್ಲಿ ಹಳೆಯ ಕೆಲವು ಮಾದರಿಗಳು ಬದಲಾಗುತ್ತವೆ.

ಮಾತಿನ ನಡುವೆ ಹೆಚ್ಚು ಪ್ರಶ್ನೆಗಳ ಬಳಸುವಿಕೆ, ಉದ್ಗಾರವಾಚಕಗಳ ಬಳಕೆ, ಸುತ್ತುಬಳಸಿದ ಮಾತುಗಾರಿಕೆ, ಭಾವನಾತ್ಮಕ ನೆಲೆಯಲ್ಲಿ ಪುರುಷರು ಮಾತನಾಡುತ್ತಾರೆ. ಉದ್ಗಾರವಾಚಕಗಳನ್ನು ಬಳಸದೆ, ನೇರ ಮಾತುಗಾರಿಕೆ, ನೇರ ನಿರ್ದೇಶನ ನೀಡುವ ಮಾತಿನ ಶೈಲಿಗಳನ್ನು ಸ್ತ್ರೀಯರು ಬಳಸುತ್ತಾರೆ. ಕೆಲವು ಭಾಷಾ ಬಳಕೆಯ ರೀತಿಯನ್ನು ಸ್ತ್ರೀಯರಿಗೂ ಮತ್ತೆ ಕೆಲವು ಭಾಷಾ ಬಳಕೆಯ ರೀತಿಯನ್ನು ಪುರುಷರಿಗೂ ವಿಂಗಡಿಸಿ ನೋಡುವ ಕ್ರಮವೇ ತಾರತಮ್ಯವನ್ನು ಮುಂದವರೆಸುವ ಉದ್ದೇಶವನ್ನು ಒಳಗೊಂಡಿರುತ್ತದೆ.

ಭಾಷೆಯ ಬಳಕೆಯ ಕೆಲವು ಮಾದರಿಗಳನ್ನು ಪ್ರಧಾನವೆಂದು ಅವು ಪುರುಷರು ಬಳಸುವ ಮಾದರಿಗಳೆಂದು, ಕೆಲವು ಮಾದರಿಗಳನ್ನು ಅಧೀನವೆಂದು, ಅವು ಸ್ತ್ರೀಯರು ಬಳಸುವ ಮಾದರಿಗಳೆಂದು ಹೇಳುವ ನಿಲುವುಗಳ ಹಿಂದೆ ಸಮಾಜದಲ್ಲಿರುವ ಲಿಂಗತಾರಮ್ಯದ ಕೆಲವು ಮಾನದಂಡಗಳು ಪೂರಕವಾಗಿ ಕಾರ್ಯನಿರ್ವಹಿಸುತ್ತಿರುತ್ತವೆ. ಹೆಣ್ಣಿನ ಮಾತಿನ ಶೈಲಿಯನ್ನು ನಿರೂಪಿಸುವಲ್ಲಿ ಅದಕ್ಕೆ ವಿರುದ್ಧವಾಗಿ ಗಂಡಿನ ಮಾತಿನ ಶೈಲಿಯನ್ನಿರಿಸಿ ಅದನ್ನೇ ಮಾನದಂಡವಾಗಿರಿಸಿಕೊಂಡು ಚರ್ಚಿಸಲಾಗುತ್ತಿದೆ. ಇದು ಕೂಡ ತಾರತಮ್ಯವನ್ನು ಪೋಷಿಸುವ ಮಾದರಿಯೇ ಆಗಿದೆ. ಎಲ್ಲ ರೀತಿಯ ಭಾಷಿಕ ಚಟುವಟಿಕೆಗಳನ್ನು ಎಲ್ಲರೂ ಬಳಸುತ್ತಾರೆ. ಬಳಕೆಯಲ್ಲಿ ಭಿನ್ನತೆ, ತಾರತಮ್ಯದ ನೆಲೆಗಳಿದ್ದರೂ ಅವು ಸಮಾಜದಿಂದ ನಿರ್ದೇಶಿತವಾದವು. ಮೂಲತಃ ಭಾಷೆ ಲಿಂಗತಾರತಮ್ಯವನ್ನು ಪೋಷಿಸುವುದಿಲ್ಲ. ಸಾಮಾಜಿಕ ನೆಲೆಯ ತಾರತಮ್ಯವನ್ನು ಭಾಷಿಕ ಆಕರಗಳಿಗೆ ಅನ್ವಯಿಸಿ ಚರ್ಚಿಸುತ್ತಿರುವುದರಿಂದ ಈ ರೀತಿಯ ಗೊಂದಲಗಳು ಉಂಟಾಗುತ್ತಿವೆ.

### ೩.೩. ಜೈವಿಕ ಭಿನ್ನತೆಗಳು ಮತ್ತು ಸಾಮಾಜಿಕ ಭಿನ್ನತೆಗಳು

ಪುರುಷ ಮತ್ತು ಸ್ತ್ರೀಯರ ನಡುವೆ ಅನೇಕ ಜೈವಿಕ ಭಿನ್ನತೆಗಳನ್ನು ಗುರುತಿಸಲು ಸಾಧ್ಯವಿದೆ. ಈ ಜೈವಿಕ ಭಿನ್ನತೆಗಳು ಅವರ ಸಾಮಾಜಿಕ ಭಿನ್ನತೆಗಳಿಗೆ ಕಾರಣವಾಗಿವೆಯೇ? ಗಂಡು ಮತ್ತು ಹೆಣ್ಣಿನ ಅಭಿವ್ಯಕ್ತಿ ನೆಲೆಗಳನ್ನು ಈ ಜೈವಿಕ ಭಿನ್ನತೆಗಳೇನಾದರು ನಿಯಂತ್ರಿಸುತ್ತಿವೆಯೇ? ಎಂಬ ಅಂಶವನ್ನು

ಕುರಿತು ಚರ್ಚಿಸುವ ಅಗತ್ಯವಿದೆ. ಗಂಡು ಮತ್ತು ಹೆಣ್ಣಿನ ಆಲೋಚನಾ ಕ್ರಮ, ವಿಚಾರಗ್ರಹಿಕೆ ಮತ್ತು ಅಭಿವ್ಯಕ್ತಿಗೆ ಸಂಬಂಧಪಟ್ಟಂತೆ ಸಮಾಜದಲ್ಲಿ ಕೆಲವು ವಿಂಗಡಣೆಗಳಿವೆ. ಅವುಗಳೆಂದರೆ:

| **ಗಂಡು** | **ಹೆಣ್ಣು** |
|---|---|
| ಚಿಂತನೆ | ಭಾವನೆ |
| ಸಾದೃಶ್ಯಮೂಲ ಚಿಂತನೆ | ಸಂಬಂಧ ಮೂಲ ಚಿಂತನೆ |
| ತರ್ಕನಿಕಟ | ತರ್ಕವಿಲ್ಲ |
| ಮಂಡಿಸುವಿಕೆ | ಸಮ್ಮತಿ ಅಪೇಕ್ಷಿಸುವಿಕೆ |
| ನಿರ್ಧಾರಕ ನೆಲೆ | ಪ್ರತಿಕ್ರಿಯೆ ಅಪೇಕ್ಷಿಸುವಿಕೆ |
| ಸಾಬೀತು ಪಡಿಸುವಿಕೆ | ಒಪ್ಪಿಕೊಳ್ಳುವಿಕೆ |
| ವಾದ ಹೂಡುವ ಬಗೆ | ನಿರೂಪಣಾ ಮಾರ್ಗ |
| ಗಂಭೀರ ವಿಚಾರಗಳ ಚರ್ಚೆ | ಹರಟೆ ಮುಂತಾದವು. |

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಎಲ್ಲ ಬಗೆಯ ವಿಚಾರಧಾರೆ, ಜ್ಞಾನಪ್ರಕಾರ, ಕಲೆ, ಸಾಹಿತ್ಯ ಮುಂತಾದ ಕ್ಷೇತ್ರಗಳಿಗೆ ಮೊದಲು ಪುರುಷನ ಪ್ರವೇಶವಾಯಿತು. ಎಷ್ಟೋ ಶತಮಾನಗಳವರೆಗೂ ಈ ಕ್ಷೇತ್ರಗಳಿಗೆ ಮಹಿಳೆಯರ ಪ್ರವೇಶ ನಿಷೇಧವಾಗಿತ್ತು. ಪುರುಷ ಹೊರಜಗತ್ತಿಗೂ, ಮಹಿಳೆ ಒಳಜಗತ್ತಿಗೂ ಸೀಮಿತವಾದರೂ ಹೊರಜಗತ್ತು, ಒಳಜಗತ್ತುಗಳ ನಡುವಿನ ಅಗಾಧವಾದ ಅಂತರದಿಂದಾಗಿ ಸ್ತ್ರೀ, ಪುರುಷರಿಬ್ಬರ ಗ್ರಹಿಕೆಗಳು ಭಿನ್ನವಾಗುತ್ತಾ ಹೋದವು. ಇದಕ್ಕೆ ಪೂರಕವಾಗಿ "ಉದ್ಯೋಗಂ ಪುರುಷ ಲಕ್ಷಣಂ," "ಗೃಹಿಣೀ ಗೃಹಮುಚ್ಚತೇ" ಎಂಬ ನುಡಿಗಟ್ಟುಗಳು ಸೃಷ್ಟಿಯಾದವು. ವ್ಯವಸ್ಥೆಯ ಈ ರೀತಿಯ ನಿರೀಕ್ಷೆಗಳಿಗೆ ಅನುಗುಣವಾಗಿ ಪುರುಷ ಮತ್ತು ಮಹಿಳೆ ಕೆಲವು ಗುಣಗಳನ್ನು ಹೊಂದಿರಲೇಬೇಕಾಯಿತು. ಹಾಗೂ ಆ ಗುಣಗಳೇ ನಿಸರ್ಗದತ್ತಗುಣಗಳೆಂದು ಸಮಾಜ ಪ್ರತಿಪಾದಿಸಿತು.

ಎಲ್ಲೋಗುತ್ತೆ ಹೆಂಗಸ್ರು ಬುದ್ಧಿ? ಹೆಂಗಸ್ರ ಬುದ್ಧಿ ಮೊಣಕಾಲ ಕೆಳಗೆ, ನೀನೊಬ್ಬಳು ಹೆಂಗಸಾದ್ದರಿಂದಲೇ ಹೀಗೆ ಯೋಚಿಸ್ತೀಯಾ, ಹೆಂಗಸ್ರಿಗೆ ಏನು ಗೊತ್ತಾಗುತ್ತೆ, ಏನೇ ಆದ್ರು ಮಡಿಕೆ ತಳ ಕೆರೆಯೋದು ತಪ್ಪಲ್ಲ ಎಂಬಂತ ಮಾತುಗಳನ್ನು ಗಮನಿಸಿದರೆ, ಅದರ ಹಿಂದಿರುವ ಸಮಾಜದ ಐಡಿಯಾಲಜಿಗಳು ಅರಿವಿಗೆ ಬರುತ್ತವೆ. ಈ ರೀತಿಯ ಮನೋಭಾವಗಳು ಎಷ್ಟರ ಮಟ್ಟಿಗೆ ಪ್ರಭಾವ ಬೀರಿರುತ್ತವೆ ಎಂದರೆ ಸ್ವತಃ ಹೆಣ್ಣುಮಕ್ಕಳು ಕೂಡ ಇವುಗಳನ್ನು ಒಪ್ಪಿಕೊಂಡಿರುತ್ತಾರೆ. ಉದಾ: 'ನನಗೇನು ಗೋತ್ತಾಗುತ್ತೇ, ನಮ್ಮ ಯಜಮಾನ್ರನ್ನು ಕೇಳಬೇಕು', 'ಹೆಣ್ಣೆಂಗಸೂ ನನಗೇನು ಗೊತ್ತಾಗುತ್ತೆ' ಎಂಬಂತಹ ಮಾತುಗಳನ್ನು ಗಮನಿಸಿದರೆ ಹೆಣ್ಣು ಸಹ ಲಿಂಗಸಂಬಂಧಿಯಾಗಿಯೇ ನಿರ್ವಚಿತಳಾಗುತ್ತಿರುವುದನ್ನು ಗುರುತಿಸಬಹುದು.

ಗಂಡು ಮತ್ತು ಹೆಣ್ಣಿನ ಆಲೋಚನಾ ಕ್ರಮಗಳು ದೇಹದ ಮುಖಾಂತರವೇ ನಡೆಯುತ್ತವೆಯೇ? (body to mind) ಎಂಬ ಅಂಶವನ್ನು ಪರಿಶೀಲಿಸುವ ಅಗತ್ಯವಿದೆ. ಕೆಲವು ಜೈವಿಕ ಭಿನ್ನತೆಗಳು ಹೇಗೆ ಸಾಮಾಜಿಕ ಭಿನ್ನತೆಗಳಾಗಿ ರೂಪುಗೊಳ್ಳುತ್ತವೆ ಎಂಬ ಅಂಶಗಳನ್ನು ಕೆಲವು ವೈಜ್ಞಾನಿಕ ಕಾರಣಗಳ ಮುಖಾಂತರ ಪರಿಶೀಲಿಸಲಾಗಿದೆ. ಎರಡು ನೆಲೆಗಳಲ್ಲಿ ಈ ಅಂಶಗಳನ್ನು ಪರಿಶೀಲಿಸಲಾಗಿದೆ. ಅವುಗಳೆಂದರೆ:

೧. ಒಂದು ಸಮಾಜದಲ್ಲಿನ ಗಂಡು ಹೆಣ್ಣಿನ ಪಾತ್ರವಿಭಜನೆ, ಅದಕ್ಕೆ ಅನುಗುಣವಾಗಿ ಸೃಷ್ಟಿಯಾಗಿರುವ ಮೌಲ್ಯಗಳು.

೨. ಸಮಾಜ ನಿರ್ದಿಷ್ಟಪಡಿಸಿರುವ ಗಂಡು ಹೆಣ್ಣಿನ ಪಾತ್ರಗಳಿಗಿಂತ ಭಿನ್ನವಾದಂತಹುಗಳಿಗೆ ಸಮಾಜ ಪ್ರತಿಕ್ರಿಯಿಸುವ ರೀತಿ.

ಕೆಲವು ಹಾರ್ಮೋನುಗಳ ಉತ್ಪತ್ತಿ ಗಂಡಿಗಿಂತ ಹೆಣ್ಣಿನಲ್ಲಿ ಕಡಿಮೆ. ಆದ್ದರಿಂದ ಹೆಣ್ಣು ಕುಳ್ಳಗಿರುತ್ತಾಳೆ. ಮೂಳೆಗಳ ರಚನೆ ಕೂಡ ಸೂಕ್ಷ್ಮವಾಗಿರುತ್ತದೆ. ಈಸ್ಟ್ರೋಜಿನ್ ಮತ್ತು ಪ್ರೊಜೆಸ್ಟೆರೋನ್‌ಗಳು ಸ್ತ್ರೀಯರಲ್ಲಿ ಸೃಜನವಾಗುವ ಪ್ರಮುಖ ಹಾರ್ಮೋನ್‌ಗಳು. ಈಸ್ಟ್ರೋಜೆನ್ ಮಹಿಳೆಯರಲ್ಲಿ ತೃಪ್ತಿ, ಸಮಾಧಾನ, ಸಹನೆಯಂತಹ ಭಾವನೆಗಳಿಗೆ ಕಾರಣವಾಗುತ್ತವೆ. ಪ್ರೊಜೆಸ್ಟೆರೋನ್ ಮಾತೃಭಾವವನ್ನು ಉದ್ದೀಪಿಸುತ್ತದೆ. ಪುರುಷರಲ್ಲಿ ಸೃಜನವಾಗುವ ಪ್ರಮುಖ ಹಾರ್ಮೋನ್ ಟೆಸ್ಟೆರೋನ್. ಇದು ಆಕ್ರಮಣಕಾರಿ ಮನೋಭಾವನೆಯನ್ನು ಉದ್ದೀಪಿಸುತ್ತದೆ.[೩]

ಧ್ವನಿಯ (Sound) ಹಂತದಿಂದಲೇ ಗಂಡು ಮತ್ತು ಹೆಣ್ಣಿನಲ್ಲಿ ಭಿನ್ನತೆಯನ್ನು ಗುರುತಿಸಲಾಗಿದೆ. ಹೆಣ್ಣಿನ ಶ್ವಾಸಕೋಶ ಮತ್ತು ಶ್ವಾಸನಾಳಗಳು ಚಿಕ್ಕವು. ಉಸಿರು ಹಿಡಿದಿಡುವ ಸಾಮರ್ಥ್ಯವೂ ಕಡಿಮೆ. ಹಾಗಾಗಿ ಅವಳ ಧ್ವನಿಯ ಶ್ರುತಿ ಭಿನ್ನವಾಗಿರುತ್ತದೆ, ಮೃದುವಾಗಿರುತ್ತದೆ. ಇದರಿಂದಾಗಿಯೇ ಆಕೆ ಜೋರಾಗಿ ಗಟ್ಟಿಯಾಗಿ ಮಾತನಾಡಲಾರಳು. ಇದಕ್ಕೆ ಕೆಲವು ಅಪವಾದಗಳು ಉಂಟು. ಕೆಲವು ಹೆಣ್ಣುಮಕ್ಕಳು ಜೋರಾಗಿ ಗಟ್ಟಿಯಾಗಿ ಮಾತನಾಡುತ್ತಾರೆ. ಇಂತಹ ಜೈವಿಕ ಸಂಗತಿಯಿಂದ ಕೆಲವು ಸಾಮಾಜಿಕ ಕಟ್ಟಳೆಗಳನ್ನು ಸಮಾಜ ರೂಪಿಸಿರುತ್ತದೆ. ಹೆಣ್ಣಿಗೆ ಹೀಗೆಯೇ ಭಾಷೆಯನ್ನು ಬಳಸಬೇಕೆಂಬ ನಿಯಮ ನಿಯಂತ್ರಣಗಳನ್ನು ಸಮಾಜ ರೂಪಿಸುತ್ತದೆ.

೧. ವಿನಯವಾಗಿ ಮಾತನಾಡಬೇಕು.

೨. ಆದೇಶ ನೀಡಬಾರದು.

೩. ಪ್ರಶ್ನಿಸಬಾರದು.

೪. ಜೋರಾಗಿ ಮಾತನಾಡಬಾರದು.

೫. ಹೆಚ್ಚು ಮಾತನಾಡಬಾರದು.

ಹೀಗೆ ಸಾಮಾಜಿಕ ನಿರೀಕ್ಷೆ ಮತ್ತು ನಿರ್ದೇಶನಕ್ಕೆ ತಕ್ಕಂತೆ ಆಕೆ ಭಾಷೆಯನ್ನು ಬಳಸಬೇಕಾಗುತ್ತದೆ. ಇವುಗಳನ್ನು ಮೀರುವಿಕೆಯ ಪ್ರಯತ್ನಗಳು ನಡೆದರೆ ಗಂಡುಬೀರಿ, ವಾಚಾಳಿ, ಗಯ್ಯಾಳಿ, ಬಾಯಿಬಡಕಿ ಎಂಬ ನಿಂದನೆಗಳಿಗೆ ಗುರಿಯಾಗುತ್ತಾಳೆ. ಗಂಡಿನ ಭಾಷೆ, ನಡತೆ ಸಮಾಜ, ಹೆಣ್ಣಿಗೆ ನಿರ್ದೇಶಿಸಿದಂತೆ ಇದ್ದರೆ ಅವನಿಗೂ ಹೆಣ್ಣಿಗ, ಸಂಗ ಎಂದು ನಿಂದಿಸುವ ಮಾದರಿಗಳಿವೆ.

ಥೈರಾಯ್ಡ್ ಗ್ರಂಥಿಗಳು ಹೆಂಗಸಿನಲ್ಲಿ ಗಂಡಸಿಗಿಂತ ಹೆಚ್ಚು ಬೆಳೆದಿರುತ್ತವೆ. ಅಲ್ಲದೆ, ಗಂಡಸಿನ ದೇಹದಲ್ಲಿ ಕ್ಯಾಲ್ಸಿಯಂ ಪ್ರಮಾಣ ಹೆಚ್ಚು. ಹೆಂಗಸು ಅದನ್ನು ಋತುಸ್ರಾವ ಮತ್ತು ಹೆರಿಗೆಗಳಲ್ಲಿ ಕಳೆದುಕೊಳ್ಳುತ್ತಾಳೆ. ನಿರ್ನಾಳ ಗ್ರಂಥಿಗಳಲ್ಲಿ ಆಗುವ ಈ ಸ್ರವಿಕೆಯ ಏರುಪೇರು ಪ್ರತಿಕ್ರಿಯಾತ್ಮಕ ನರವ್ಯೂಹದ

ಮೇಲೆ ಒತ್ತಡ ತರುತ್ತದೆ. ಇದರಿಂದ ಮನಸ್ಸಿನ ಸ್ಥಿಮಿತತೆಯಲ್ಲಿ ಮತ್ತು ಸ್ನಾಯುಗಳ ಮೇಲಿನ ಹಿಡಿತದಲ್ಲಿ ಏರುಪೇರುಂಟಾಗುತ್ತದೆ. ಅಲ್ಲದೆ, ನರವ್ಯೂಹದ ಮೇಲೆ ಗಂಡಸಿಗಿರುವಂತಹ ಹಿಡಿತ ಹೆಣ್ಣಿಗಿಲ್ಲ. ಈ ಅಸ್ಥಿರತೆಯೇ ಹೆಣ್ಣಿನ ಭಾವುಕತೆಗೆ ಕಾರಣ. ಈ ಭಾವುಕತಯಿಂದಾಗಿ ಎದೆ ಬಡಿತದ ಹೆಚ್ಚಳ, ಲಜ್ಜೆ ಮುಂತಾದ ಮನೋದೈಹಿಕ ಚರ್ಯೆಗಳು ಕಾಣಿಸಿಕೊಳ್ಳುತ್ತವೆ. ಹೀಗಾಗಿ ಅಳುಬುರುಕುತನ, ಹುಚ್ಚುಚ್ಚಾಗಿ ನಗುವುದು, ಭಯಗ್ರಸ್ಥ ಸ್ಥಿತಿ ಮುಂತಾದವುಗಳಿಗೆ ಹೆಣ್ಣು ಸುಲಭವಾಗಿ ತುತ್ತಾಗುತ್ತಾಳೆ.[೪] ಇದರಿಂದಾಗಿ ಅವಳಲ್ಲಿ ಅಸ್ಥಿರತೆ ಉಂಟಾಗಿ ಯಾವುದೇ ವಿಚಾರದಲ್ಲಿ ಖಚಿತ ನಿರ್ಧಾರ ತೆಗೆದುಕೊಳ್ಳಲು ಸಾಧ್ಯವಾಗುವುದಿಲ್ಲ. ಬದಲಾಗಿ ಪುರುಷರ ವಿಚಾರಗಳನ್ನು ಒಪ್ಪಿಕೊಳ್ಳುವಿಕೆ, ಸಮ್ಮತಿ ಅಪೇಕ್ಷಿಸುವಿಕೆ ನಡೆಯುತ್ತವೆ.

ಮಾನವನ ಮೆದುಳಿನಲ್ಲಿ ಎಡ ಮತ್ತು ಬಲ ಗೋಳಾರ್ಧಗಳಿರುತ್ತವೆ ಎಂಬುದನ್ನು ನರವಿಜ್ಞಾನಿಗಳಾದ ಪಾಲ್‌ಪಿಯರಿ ಬ್ರೋಕಾ ಮತ್ತು ಕಾರ್ಲ್‌ವರ್ನಿಕೆ ಕಂಡುಹಿಡಿದರು. ಅವುಗಳಲ್ಲಿನ ಆಲೋಚನಾ ವಿಧಾನಗಳಲ್ಲಿನ ವ್ಯತ್ಯಾಸಗಳನ್ನು ತಿಳಿಸಿದರು. ಎಡಗೋಳಾರ್ಧ ದೇಹದ ಬಲಭಾಗದ ಕ್ರಿಯೆಗಳು, ಬುದ್ಧಿ, ತರ್ಕ, ಭಾಷೆ, ವಿಶ್ಲೇಷಣೆ ಮುಂತಾದವುಗಳನ್ನು ನಿರ್ದೇಶಿಸುತ್ತದೆ. ಬಲಗೋಳಾರ್ಧ ದೇಹದ ಎಡಭಾಗದ ಕ್ರಿಯೆಗಳು, ಭಾವನೆಗಳು, ಸೃಜನಾತ್ಮಕ ಚಟುವಟಿಕೆಗಳು, ಕಲ್ಪನೆ ಮುಂತಾದವುಗಳನ್ನು ನಿರ್ದೇಶಿಸುತ್ತದೆ. ಈ ಎರಡು ಗೋಳಾರ್ಧಗಳಿಗೆ 'ಕಾರ್ಪಸ್ ಕ್ಯಾಲೋಸಮ್' ಎನ್ನುವ ನರಜೀವಾಂಗಗಳು ಸಂಪರ್ಕ ಕಲ್ಪಿಸುತ್ತವೆ. ಸಂಶೋಧನೆಗಳ ಪ್ರಕಾರ, ಸ್ತ್ರೀಯರ ಕಾರ್ಪಸ್ ಕ್ಯಾಲೋಸಮ್‌ನ ದಪ್ಪ ಹೆಚ್ಚಾಗಿದೆ. ಇದರಿಂದ ಅವರ ಮೆದುಳಿನ ಎರಡು ಗೋಳಾರ್ಧಗಳ ನಡುವಿನ ಸಂಪರ್ಕ ಶೇಕಡ ೩೦ರಷ್ಟು ಹೆಚ್ಚಾಗಿರುತ್ತದೆ. ಅಂದರೆ ಪುರುಷರ ಮೆದುಳಿನ ಎರಡು ಭಾಗಗಳು ಬೇರೆ ಬೇರೆಯಾಗಿ ಸಮರ್ಥವಾಗಿ ಕಾರ್ಯನಿರ್ವಹಿಸಿದರೂ, ಎರಡೂ ಮೆದುಳನ್ನೂ ಒಂದೇ ಸಮಯದಲ್ಲಿ ಉಪಯೋಗಿಸಿ ನಿರ್ವಹಿಸಬೇಕಾದ ಕೆಲಸಗಳಲ್ಲಿ ಮಹಿಳೆಯರು ಮೇಲುಗೈ ಸಾಧಿಸುತ್ತಾರೆ.[೫] ಈ ಕಾರಣದಿಂದಾಗಿಯೇ ಹೆಣ್ಣುಮಕ್ಕಳು ಹೆಚ್ಚು ಮಾತಾಡುತ್ತಾರೆ ಹಾಗೂ ಗಂಡುಮಕ್ಕಳಿಗಿಂತ ಬೇಗನೆ ಮಾತನಾಡಲು ಕಲಿಯುತ್ತಾರೆ. ಏಕಕಾಲಕ್ಕೆ ಮೆದುಳಿನ ಎರಡೂ ಭಾಗಗಳನ್ನು ಸಮರ್ಪಕವಾಗಿ ಬಳಸುವ ಸಾಮರ್ಥ್ಯದಿಂದಾಗಿ ಅವರು ಹೆಚ್ಚು ಮಾತನಾಡುತ್ತಾರೆ ಎನ್ನುತ್ತದೆ ವೈಜ್ಞಾನಿಕ ಹಿನ್ನೆಲೆ.

ಪುರುಷರು ಮಾತನಾಡುವಾಗ ಅವರ ಮೆದುಳಿನ ಎಡಗೋಳಾರ್ಧ ಮಾತ್ರ ಕ್ರಿಯಾಶೀಲಗೊಂಡು ಒಂದು ನಿರ್ದಿಷ್ಟ ಸ್ಥಾನದಿಂದ ಮಾತನ್ನು ಹೊರಡಿಸುತ್ತಿರುತ್ತದೆ. ಎಡ ಮೆದುಳು ಸಂದೇಶಗಳನ್ನು ಕಳಿಸದಿದ್ದಾಗ ಗಂಡಸರಿಗೆ ಏನು ಮಾತನಾಡಬೇಕು ಎನ್ನುವುದು ತಿಳಿಯದೆ ಸುಮ್ಮನಾಗುತ್ತಾರೆ. ಸ್ತ್ರೀಯರ ಮೆದುಳಿನ ಎರಡೂ ಗೋಳಾರ್ಧಗಳಲ್ಲಿ ಮಾತಿಗೆ ಪ್ರಚೋದನೆ ನೀಡಬಲ್ಲ ಸ್ಥಾನಗಳಿವೆ ಮತ್ತು ಅವುಗಳ ನಡುವಿನ ಸಂಪರ್ಕ ಕೂಡ ಬಲವಾಗಿರುತ್ತದೆ.[೬] ಹೀಗಾಗಿ ಮಹಿಳೆಗಿಂತ ಪುರುಷ ಕಡಿಮೆ ಮಾತನಾಡುತ್ತಾನೆ.

ವಿಜ್ಞಾನಿಗಳು ಕೆಲವು ಪ್ರಯೋಗಗಳ ಮುಖಾಂತರ ಎಡನಿಮ್ಮದಿಳು ಮತ್ತು ಬಲನಿಮ್ಮದಿಳಿನ ಲಕ್ಷಣಗಳನ್ನು ಗುರುತಿಸಿದ್ದಾರೆ. "ಎಡ ನಿಮ್ಮದಿಳು ಪ್ರಧಾನವಾಗಿದ್ದು ವಿಶ್ಲೇಷಣಾತ್ಮಕ ಕೆಲಸಗಳು, ಪರೀಕ್ಷೆಗಳು, ಲೆಕ್ಕಾಚಾರ ವಿಂಗಡಣೆ, ತರ್ಕಬದ್ಧ ಹಾಗೂ ವ್ಯವಸ್ಥಿತ ರಚನೆ ಮತ್ತು ಭಾಷಾ ಸಂಬಂಧಿತ ಚಟುವಟಿಕೆಗಳಲ್ಲಿ ತನ್ನ

ಪ್ರಾಧಾನ್ಯ ತೋರುತ್ತದೆ. ಬಲನಿಮ್ಮಿದಿಳು ಸೃಜನಶೀಲ ಹಾಗೂ ಭಾವನಾ ಶಕ್ತಿಯ ತಾಣ"[೭] ಎಂದು ವಿಭಜಿಸಲಾಗಿದೆ.

ಮೇಲಿನ ವಿಷಯದ ಹಿನ್ನೆಲೆಯಲ್ಲಿ ಜಾನ್ ಹಾಪ್‌ಕಿನ್ಸ್ ವಿಶ್ವವಿದ್ಯಾಲಯದಲ್ಲಿ ನಡೆದ ಒಂದು ಅಧ್ಯಯನವನ್ನು ಗಮನಿಸಬಹುದು. ಹದಿನೈದು ಪುರುಷ ಮತ್ತು ಮಹಿಳೆಯರ ಮಿದುಳಿನ ಸಂರಚನೆಯನ್ನು ಅಭ್ಯಾಸ ಮಾಡಿ, ಕೆಲವು ತೀರ್ಮಾನಗಳಿಗೆ ಬರಲಾಗಿದೆ. "ಪುರುಷ ಮತ್ತು ಮಹಿಳಾ ಮಿದುಳಿನಲ್ಲಿ ಗಣನೀಯ ವ್ಯತ್ಯಾಸವಿದ್ದು, ಈ ಕಾರಣಕ್ಕಾಗಿಯೇ ಮಹಿಳೆಯರಿಗಿಂತ ಹೆಚ್ಚಾಗಿ ಪುರುಷರಲ್ಲಿ ವಿವೇಚನೆ, ವಿಶ್ಲೇಷಣೆ ಮತ್ತು ತಾರ್ಕಿಕ ಸಾಮರ್ಥ್ಯವಿದೆ ಎಂದು ಆ ಸಂಶೋಧಕರು ತಿಳಿಸಿದ್ದಾರೆ. ಜೊತೆಗೆ ಮಹಿಳೆಯ ಬಲಭಾಗದ ಮಿದುಳು ಪುರುಷನ ಬಲಭಾಗದ ಮಿದುಳಿಗಿಂತ ದೊಡ್ಡದಾಗಿರುತ್ತದೆ. ಹಾಗೆಯೇ ಅವರು ಇನ್ನೊಬ್ಬರ ಭಾವನೆಗಳನ್ನು ಥಟ್ಟನೆ ಅರ್ಥಮಾಡಿಕೊಳ್ಳಬಲ್ಲರು. ಆದರೆ ಪುರುಷರ ಎಡಭಾಗದ ಮಿದುಳು ಪ್ರಬಲವಾಗಿರುವುದರಿಂದ ಈ ಭಾಗದ ಮಿದುಳಿನ ಚಟುವಟಿಕೆಗಳಾದ ವಿವೇಚನೆ, ವಿಶ್ಲೇಷಣೆ, ತಾರ್ಕಿಕತೆ ಮೊದಲಾದವುಗಳಲ್ಲಿ ಪುರುಷರೇ ಮುಂದೆ"[೮] ಎಂದು ಹೇಳಿದ್ದಾರೆಂದು ವರದಿಯಾಗಿದೆ.

ಕೆಲವು ಸ್ತ್ರೀ ಮತ್ತು ಪುರುಷರ ಮೆದುಳಿನ ರಚನೆ ಎಲ್ಲ ಸ್ತ್ರೀ ಪುರುಷರ ಮೆದುಳಿನ ರಚನೆಯನ್ನು ಹೋಲುತ್ತವೆಯೇ? ಎಂಬ ಪ್ರಶ್ನೆ ಇಲ್ಲಿ ಎದುರಾಗುತ್ತದೆ. ಎಡನಿಮ್ಮಿದಿಳು ದೇಹದ ಬಲಭಾಗದ ಮತ್ತು ಬಲನಿಮ್ಮಿದಿಳು ದೇಹದ ಎಡಭಾಗದ ಚಲನವಲನಗಳಿಗೆ ಕಾರಣವಾಗಿ ಆಯಾ ದೇಹಭಾಗಗಳ ವಿವಿಧ ಇಂದ್ರಿಯಗಳಿಂದ ಬರುವ ಸಂಕೇತಗಳನ್ನು ಸ್ವೀಕರಿಸಿ ಕಾರ್ಯನಿರ್ವಹಿಸುತ್ತವೆ ಎಂಬುದು ವೈಜ್ಞಾನಿಕವಾಗಿ ಸತ್ಯವೆಂದು ಸಾಬೀತಾಗಿರುವ ವಿಷಯ. ಆದರೆ, ಇವುಗಳ ಮಾನಸಿಕ ಮತ್ತು ಬೌದ್ಧಿಕ ಕ್ರಿಯೆಗಳು ಹೀಗೆಯೇ ಇರುತ್ತವೆ ಎಂದು ಹೇಳಲು ಸಾಧ್ಯವಾಗುತ್ತದೆಯೇ? ಎಂಬ ಪ್ರಶ್ನೆ ಎದುರಾಗುತ್ತದೆ.

ಬದಲಾದ ಕಾಲಮಾನದಲ್ಲಿ ಈ ಮೇಲಿನ ವಿಷಯಗಳನ್ನು ಕುರಿತು ಭಿನ್ನವಾಗಿ ಯೋಚಿಸಲು ಸಾಧ್ಯವಾಗುತ್ತದೆ. ಇಂದು ಹೊರ ಮತ್ತು ಒಳ ಜಗತ್ತಿನ ಕಲ್ಪನೆಗಳು ಭಿನ್ನವಾಗಿವೆ. ಮನೆಯ ಒಳಗೆ ಇದ್ದು ಜಗತ್ತನ್ನು ಅರಿಯಬಹುದು. ಇಂದು ಸ್ತ್ರೀ ಎಲ್ಲ ಕ್ಷೇತ್ರಗಳಲ್ಲೂ ಪ್ರಮುಖ ಪಾತ್ರನಿರ್ವಹಿಸುತ್ತಾಳೆ. ರಾಜಕೀಯ, ಕ್ರೀಡೆ, ಸಾಹಿತ್ಯ, ಸಿನಿಮಾ, ಸೈನ್ಯ ಮುಂತಾದ ಕ್ಷೇತ್ರಗಳಲ್ಲಿ ತನ್ನ ಛಾಪನ್ನು ಮೂಡಿಸುತ್ತಿದ್ದಾಳೆ. ಇಂದು ಪುರುಷನಷ್ಟೇ ವೈಚಾರಿಕವಾಗಿ ಯೋಚಿಸಬಲ್ಲಳು, ತಾರ್ಕಿಕವಾಗಿ ಚಿಂತಿಸಬಲ್ಲಳು. ಸಮಾಜ ಹೆಣ್ಣಿನ ಜೈವಿಕಾಂಶಗಳ ಭಿನ್ನತೆಯಿಂದಾಗಿ ಹಿಂದೆ ವಿಧಿಸುತ್ತಿದ್ದ ಅನೇಕ ಕಟ್ಟುಪಾಡುಗಳು ಇಂದು ಸಡಿಲಗೊಂಡಿವೆ. ಹೆಚ್ಚು ಮಾತನಾಡುವ ಹೆಣ್ಣುಮಕ್ಕಳಿಗೆ ಇಂದಿನ ದೂರದರ್ಶನ ವಾಹಿನಿಗಳಲ್ಲಿ, ಎಫ್.ಎಂ. ರೇಡಿಯೋಗಳಲ್ಲಿ ಹೆಚ್ಚು ಬೇಡಿಕೆಯೂ ಇದೆ. ಒಂದು ಕಾಲದಲ್ಲಿ ಸಮಾಜದ ಅವಹೇಳನಕ್ಕೆ ಗುರಿಯಾಗಿದ್ದ ಎಷ್ಟೋ ವಿಷಯಗಳು ಕಾಲಾಂತರದಲ್ಲಿ ಸಕಾರಾತ್ಮಕ ಬೆಳವಣಿಗೆಯನ್ನು ಪಡೆದುಕೊಳ್ಳುತ್ತವೆ.

### ೩.೪. ಲಿಂಗ ವಿಭಜನೆ: ಸ್ವರೂಪ, ಮಾನದಂಡಗಳು ಮತ್ತು ನಿರ್ವಚನಗಳು

ಒಂದು ಭಾಷೆಯ ಆಡುಮಾತಿನ ನೆಲೆ ಮತ್ತು ಬರವಣಿಗೆಯ ನೆಲೆಗಳು ಯಾವಾಗಲೂ ಭಿನ್ನತೆಯನ್ನು ಕಾಯ್ದುಕೊಂಡಿರುತ್ತವೆ. ಬರಹದ ಭಾಷೆಗೆ ಸಂಬಂಧಪಟ್ಟಂತೆ ಕೆಲವು ನಿಯಮಗಳನ್ನು ಆ ಭಾಷೆಯ

ವಿದ್ವಾಂಸವರ್ಗ ರೂಪಿಸಿರುತ್ತದೆ. ಈ ರೀತಿಯ ಕೆಲವು ನಿಯಮಗಳು ಪರೋಕ್ಷವಾಗಿ ಆ ಭಾಷೆಯ ಒಂದು ವರ್ಗದ ಹಿತಾಸಕ್ತಿಗಳನ್ನು ಬಿಂಬಿಸುತ್ತಿರುತ್ತವೆಯೇ? ಎಂಬ ಅಂಶ ಮುಖ್ಯವಾಗುತ್ತದೆ. ಇದರಲ್ಲಿ ಲಿಂಗವಿವಕ್ಷೆಯೂ ಒಂದು. ವ್ಯಾಕರಣಕಾರರು ವಿವರಿಸುವ ಲಿಂಗ ಪರಿಕಲ್ಪನೆಯನ್ನು ಆ ಸಮುದಾಯದಲ್ಲಿರುವ ಲಿಂಗಸಂಬಂಧಿ ಗ್ರಹಿಕೆಗಳೇನಾದರೂ ನಿಯಂತ್ರಿಸುತ್ತಿರುತ್ತವೆಯೇ? ಎಂಬುದನ್ನು ಈ ಭಾಗದಲ್ಲಿ ಪರಿಶೀಲಿಸಲಾಗಿದೆ.

ಈ ಭಾಗದಲ್ಲಿ ಸಾಂಪ್ರದಾಯಿಕ ವ್ಯಾಕರಣಕಾರರು, ಭಾಷಾವಿಜ್ಞಾನಿಗಳು ಹಾಗೂ ಶಾಲಾ ಮಕ್ಕಳಿಗೆ ಬರೆಯುವ ವ್ಯಾಕರಣ ಪಠ್ಯಗಳನ್ನು ಚರ್ಚೆಗೆ ಬಳಸಿಕೊಳ್ಳಲಾಗಿದೆ. ಲಿಂಗ ಪರಿಕಲ್ಪನೆಯನ್ನು ವಿವರಿಸುವಲ್ಲಿನ ಕೆಲವು ತೊಡಕುಗಳನ್ನು ಕುರಿತು ಇಲ್ಲಿ ವಿಶ್ಲೇಷಿಸಲಾಗುವುದು. ಇವುಗಳನ್ನು ಚರ್ಚೆಗೆ ಒಳಪಡಿಸುವ ಮೊದಲು ಕನ್ನಡ ಭಾಷೆಯು ದ್ರಾವಿಡ ಭಾಷಾವರ್ಗಕ್ಕೆ ಸೇರಿರುವುದರಿಂದ ಈ ಭಾಷಾವರ್ಗದ ಲಿಂಗವ್ಯವಸ್ಥೆಯನ್ನು ಪರಿಶೀಲಿಸುವುದು ಸೂಕ್ತವೆನಿಸುತ್ತದೆ. ದ್ರಾವಿಡ ಭಾಷಾವರ್ಗದಲ್ಲಿ ಎರಡು ವಿಧದ ಲಿಂಗವ್ಯವಸ್ಥೆಯನ್ನು ಗುರುತಿಸಬಹುದು.

೧. ದ್ವಿವಿಧ ಲಿಂಗವ್ಯವಸ್ಥೆ ಇರುವ ಭಾಷೆಗಳು

೨. ಲಿಂಗವ್ಯವಸ್ಥೆ ಇಲ್ಲದ ಭಾಷೆಗಳು

ಬ್ರಾಹುಈ ಮತ್ತು ತೊದ ಭಾಷೆಗಳಲ್ಲಿ ಲಿಂಗವ್ಯವಸ್ಥೆಯಿಲ್ಲದೇ ಇರುವುದನ್ನು ಗಮನಿಸಬಹುದು. ಈ ಭಾಷೆಗಳಲ್ಲಿ ಇರುವ ಪ್ರಥಮ ಪುರುಷ ನಪುಂಸಕಲಿಂಗ ರೂಪವೇ ಅರ್ಥಾನುಸಾರವಾಗಿ ಎಲ್ಲ ಕಡೆ ಬಳಕೆಯಾಗುತ್ತಿರುವುದನ್ನು ಗಮನಿಸಬಹುದು.

ಉದಾ: ಬ್ರಾಹುಈ: ಓದ – ಅವನು/ಅವಳು/ಅದು

ಓಫಕ್ – ಅವರು/ಅವು

ತೊದ: ಅಥ್ – ಅವನು/ಅವಳು/ಅದು

ಅಥಾಮ್–ಅವರು/ಅವ್ರ್

ದ್ವಿವಿಧ ಲಿಂಗ ವ್ಯವಸ್ಥೆಯಿರುವ ಪ್ರಮುಖ ದ್ರಾವಿಡ ಭಾಷೆಗಳೆಂದರೆ:

೧. ತಮಿಳು : ಉಯರ್‌ತಿಣೈ

ಅಲ್‌ತಿಣೈ

೨. ತೆಲುಗು : ಮಹತ್

ಅಮಹತ್

೩. ಕನ್ನಡ : ಮೇಲುವರ್ಗ : ಪುಲ್ಲಿಂಗ

ಸ್ತ್ರೀಲಿಂಗ

ಕೆಳವರ್ಗ : ನಪುಂಸಕಲಿಂಗ

ದ್ರಾವಿಡ ಭಾಷೆಗಳು ಲಿಂಗ ವಿಂಗಡಣೆಯಲ್ಲಿ ಕೆಲವು ಮೂಲತತ್ವಗಳನ್ನು ಅನುಸರಿಸುತ್ತವೆ. ರಾ.ಯ ಧಾರವಾಡಕರ ಅವರು 'ಕನ್ನಡ ಭಾಷಾಶಾಸ್ತ್ರ' ಪುಸ್ತಕದಲ್ಲಿ ಚರ್ಚಿಸಿರುವಂತೆ ದ್ರಾವಿಡ ಭಾಷೆಗಳ ಲಿಂಗ ವಿಂಗಡಣೆಯಲ್ಲಿ ಅನುಸರಿಸುವ ಮೂಲತತ್ವಗಳು ಈ ಮುಂದಿನಂತಿವೆ.

೧. ದ್ರಾವಿಡ ಭಾಷೆಗಳಲ್ಲಿ ಲಿಂಗವಿಂಗಡಣೆ ಅರ್ಥಾನುಸಾರಿಯಾದದ್ದು.

೨. ಮನುಷ್ಯ ಮನುಷ್ಯೇತರ ಎಂಬ ವಿಂಗಡಣೆ.

೩. ಯಾವುದೇ ಒಂದು ವಿಷಯವು ಸಜೀವವೇ? ನಿರ್ಜೀವವೇ ಎಂದು ನೋಡುವ ಕ್ರಮ. ಉದಾ: ರಾಮ, ಆಕಳು, ಮನೆ.

ಮನೆ ನಿರ್ಜೀವ. ನಿರ್ಜೀವವಾದುವೆಲ್ಲ ನಪುಂಸಕವೇ. ಯಾವುದಾದರೂ ಒಂದು ವಿಷಯವು ಸಜೀವವಾದರೆ ಅದಕ್ಕೆ ಚೇತನಾಶಕ್ತಿ ಇದೆಯೇ ಇಲ್ಲವೇ ಎಂದು ನೋಡುವುದು. ಅಚೇತನವಾದುದೆಲ್ಲವೂ ಪುನಃ ನಪುಂಸಕವೇ. ಆಕಳು ಶಬ್ದವು ಸಜೀವವಾಗಿದ್ದರೂ ಕೂಡ ಚೇತನ ಶಕ್ತಿ ಇಲ್ಲದ ಮೂಲಕ ನಪುಂಸಕವಾಯಿತು[೧೦] ಎನ್ನುತ್ತಾರೆ.

ಇದಕ್ಕೆ ಪೂರಕವಾಗಿ ಕೆಂಪೇಗೌಡರವರ ಹೇಳಿಕೆಯನ್ನು ಗಮನಿಸಬಹುದು: "ದ್ರಾವಿಡ ಭಾಷೆಗಳಲ್ಲಿ ಲಿಂಗನಿರ್ಣಯ ಮಾಡುವಾಗ ಒಂದು ಶಬ್ದದಿಂದ ಸೂಚಿತವಾಗುವ ವಸ್ತುವು ಸಜೀವವೇ ಅಥವಾ ನಿರ್ಜೀವವೇ, ಗಂಡೇ ಅಥವಾ ಹೆಣ್ಣೇ ಎಂಬ ವ್ಯತ್ಯಾಸಕ್ಕೆ ಮಾನ್ಯತೆ ಕೊಡದೆ ಬುದ್ಧಿಶಕ್ತಿಯುಳ್ಳ ಅಥವಾ ಬುದ್ಧಿಶಕ್ತಿಯಿಲ್ಲದ ಎಂಬ ಭೇದಕ್ಕೆ ಹೆಚ್ಚು ಮಾನ್ಯತೆ ಕೊಟ್ಟಂತೆ ತೋರುತ್ತದೆ. ಪ್ರಾಣಿಗಳಲ್ಲಿ ಮತ್ತು ಮಕ್ಕಳಲ್ಲಿ ಗಂಡು ಹೆಣ್ಣು ಎಂಬ ಭೇದ ಕಂಡು ಬಂದರೂ ಅವುಗಳನ್ನು ಸೂಚಿಸುವ ಶಬ್ದಗಳು ನಪುಂಸಕಲಿಂಗ ಸೂಚಕಗಳಾಗಿರುವುದೇ ಇದಕ್ಕೆ ನಿದರ್ಶನವಾಗಿದೆ. ಈ ಬಗೆಯ ಭೇದ ದ್ರಾವಿಡ ಭಾಷೆಗಳ ವೈಶಿಷ್ಟ್ಯವೂ ಹೌದು"[೧೧] ಎನ್ನುತ್ತಾರೆ.

ಮೇಲಿನ ಎರಡು ಹೇಳಿಕೆಗಳ ಹಿನ್ನೆಲೆಯಲ್ಲಿ ಲಿಂಗ ವಿಂಗಡಣೆಯಲ್ಲಿ ಪ್ರಮುಖ ಪಾತ್ರವಹಿಸುತ್ತಿರುವ ಬುದ್ಧಿಶಕ್ತಿ ಮತ್ತು ಚೇತನ, ಅಚೇತನ ಶಕ್ತಿಯ ಅಳತೆಯ ಮಾನದಂಡಗಳನ್ನು ಪರಿಶೀಲಿಸುವ ಅಗತ್ಯವಿದೆ. ಒಟ್ಟಾರೆ ದ್ರಾವಿಡ ಭಾಷೆಗಳ ಲಿಂಗ ವ್ಯವಸ್ಥೆಯನ್ನು ಸ್ಥೂಲವಾಗಿ ಈ ಮುಂದಿನಂತೆ ಗುರುತಿಸಬಹುದು:



ಮೇಲಿನ ವಿಂಗಡಣೆಗೆ ಅಪವಾದವೆಂಬಂತೆ ದ್ರಾವಿಡ ಭಾಷೆಗಳಾದ ತೆಲುಗು, ಗೋಂಡಿ, ಕುರುಖ್, ಕುಈ ಭಾಷೆಗಳಲ್ಲಿ ಸ್ತ್ರೀಲಿಂಗವೂ ಅಮಹತ್ ಜಾತಿಗೆ ಸೇರುತ್ತದೆ. ತೆಲುಗು, ಹವ್ಯಕ ಭಾಷೆಗಳಲ್ಲಿ ಸ್ತ್ರೀಲಿಂಗ ಪದಗಳು ಏಕವಚನ ಆಗಿದ್ದಾಗ ನಪುಂಸಕಲಿಂಗಕ್ಕೆ (ಅಮಹತ್), ಬಹುವಚನವಾಗಿದ್ದಾಗ ಪುಲ್ಲಿಂಗಕ್ಕೆ (ಮಹತ್) ಸೇರುತ್ತವೆ. ಪ್ರಾಚೀನ ತೆಲುಗಿನಲ್ಲಿ ಸ್ತ್ರೀಲಿಂಗಕ್ಕೆ ಏಕವಚನ ಹೇಳಲು ಪ್ರತ್ಯೇಕ ಪ್ರತ್ಯಯವಿರಲಿಲ್ಲ.

ಉದಾ: ತೆಲುಗು – ಮಹತ್ – ಪುಲ್ಲಿಂಗ – ವಾಂಡು>ವಾಡು (ಅವನು)
ಮಂಚಿವಾಡು – ಒಳ್ಳೆಯವನು
ವಾನಿ(ಕಿ) – ಅವನಿಗೆ

ಅಮಹತ್ – ಸ್ತ್ರೀಲಿಂಗ – ಆದಿ – ಅದು ಮಂಚಿದಿ – ಒಳ್ಳೆಯದು
ಅವಳು – ಒಳ್ಳೆಯವಳು
ದಾನಿ(ಕಿ) ಅದಕ್ಕೆ
ಅವಳಿಗೆ

ಆಧುನಿಕ ತೆಲುಗಿನಲ್ಲಿ ಸ್ತ್ರೀಲಿಂಗ ಏಕವಚನ ಸೂಚಿಸಲು ಎರಡು ಪದಗಳನ್ನು ಬಳಸುತ್ತಿದ್ದಾರೆ. ಅವುಗಳೆಂದರೆ:

೧. ಆಮೆ: ತೆಲುಗು – ಆಮೆ ವಚ್ಚಿಂದ
ಕನ್ನಡ – ಅವಳು ಬಂದ್ಲ

೨. ಆವಿಡಾ: ತೆಲುಗು – ಆವಿಡ ಎಕ್ಕಡುಂದಿ
ಕನ್ನಡ – ಅವಳು ಎಲ್ಲಿದ್ದಾಳೆ

ಇವು ಆಧುನಿಕ ತೆಲುಗಿನಲ್ಲಿ ಸ್ತ್ರೀಲಿಂಗಕ್ಕೆ ಮಾತ್ರ ಬಳಕೆಯಾಗುತ್ತಿರುವ ಸಂಬೋಧನ ರೂಪಗಳು. ಹಳೆಯ ತೆಲುಗಿನಲ್ಲಿ ಸ್ತ್ರೀಲಿಂಗ ಏಕವಚನದಲ್ಲಿದ್ದಾಗ ನಪುಂಸಕ ಲಿಂಗಕ್ಕೆ ಸೇರುತ್ತಿತ್ತು. ಕಾಲಾಂತರದಲ್ಲಿ ಸ್ತ್ರೀಲಿಂಗ ಏಕವಚನದ ಅವಶ್ಯಕತೆ ಉಂಟಾದಾಗ ಆ ಸಮುದಾಯದಲ್ಲಿ ಅದಕ್ಕೆ ಪೂರಕವಾಗಿ ಭಾಷಾಘಟಕಗಳು ಸೃಷ್ಟಿಯಾಗಿವೆ.

ಸಂಗಮೇಶ ಸವದತ್ತಿಮಠರವರು 'ತೌಲನಿಕ ದ್ರಾವಿಡ ಭಾಷಾವಿಜ್ಞಾನ' ಪುಸ್ತಕದಲ್ಲಿ ಮಧ್ಯದ್ರಾವಿಡ ಭಾಷೆಗಳ ವ್ಯವಸ್ಥೆಯೇ ಮೂಲದ್ದೆಂದು ಪುನರ್ರಚಿಸುತ್ತಾರೆ.

| **ಮಹತ್** | **ಅಮಹತ್** |
|---|---|
| ಏಕವಚನ – ಅವನ್ | ಅದು (ಅದು/ಅವಳು) |
| ಬಹುವಚನ – ಅವಳ್ | ಅವೈ (ಅವು/ಸ್ತ್ರೀಯರು) |

ಮೂಲದ್ರಾವಿಡ ಭಾಷೆಯಲ್ಲಿ ಲಿಂಗವಿಂಗಡಣೆ ಮಹತ್ ವರ್ಗ, ಅಮಹತ್ ವರ್ಗ ಎಂದು ಎರಡೇ ಬಗೆಯಾಗಿ ಇತ್ತು ಎಂಬುದನ್ನು ಗುರುತಿಸುತ್ತಾರೆ. ಸಂಸ್ಕೃತ ಭಾಷೆಯ ಪ್ರಭಾವದಿಂದಾಗಿ

ದ್ರಾವಿಡ ಭಾಷೆಗಳು ಏಕವಚನದಲ್ಲಿ ಸ್ತ್ರೀಲಿಂಗವನ್ನು '-ಅಳ್' (ಅವ್+ಅಳ್-ಅವಳ) ಎಂಬ ಸ್ತ್ರೀಸೂಚಕ ಪ್ರತ್ಯಯದ ಆಧಾರದಿಂದ ಸೇರಿಸಿಕೊಂಡಂತೆ ಕಾಣುತ್ತದೆ[೧೨] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಇವರ ವಾದದ ಪ್ರಕಾರ, ಮೂಲದ್ರಾವಿಡದಲ್ಲಿ ಸ್ತ್ರೀಯರನ್ನು ಸೂಚಿಸುವ ಪ್ರತ್ಯಯಗಳು ಇರಲಿಲ್ಲವೆಂದು ತಿಳಿಯುತ್ತದೆ. ಇಂದಿಗೂ ಕನ್ನಡದ ಉಪಭಾಷೆಗಳಾದ ಹವ್ಯಕ ಕನ್ನಡದಲ್ಲಿ, ಗೌಡಕನ್ನಡದಲ್ಲಿ ಈ ರೀತಿಯ ಲಿಂಗವ್ಯವಸ್ಥೆಯಿರುವುದನ್ನು ಗಮನಿಸಬಹುದು. ಈ ಭಾಷೆಗಳಲ್ಲಿ ಏಕವಚನದಲ್ಲಿ ಪುಲ್ಲಿಂಗ ಮತ್ತು ಪುಲ್ಲಿಂಗೇತರ ಎಂದು ಎರಡು ಭಾಗಮಾಡಬಹುದು. ಬಹುವಚನದಲ್ಲಿ ಮಹತ್ ಮತ್ತು ಅಮಹತ್ ಎಂಬ ಮೂಲದ್ರಾವಿಡ ಲಿಂಗವ್ಯವಸ್ಥೆಯನ್ನೇ ಹೊಂದಿರುವುದನ್ನು ಕಾಣಬಹುದು.

ಉದಾ: ಹವ್ಯಕ ಕನ್ನಡ – ಲತ್ತಿಗೆ (ಅತ್ತಿಗೆ) ಹೆಗ್ಡೇರ್ ಮನೀಗೆ ಹೋಗೀದು

ಇದಲ್ಲದೆ ಹವ್ಯಕ ಕನ್ನಡದಲ್ಲಿ ಅಮ್ಮ ಬಂದ, ಅಮ್ಮ ಬಂತೂ ಎಂಬ ಎರಡೂ ಪ್ರಯೋಗಗಳು ಕಂಡು ಬರುತ್ತವೆ. ಇದರಿಂದ ಏಕವಚನದಲ್ಲಿಯೂ ಕೂಡ ಮಹತ್ ಮತ್ತು ಅಮಹತ್ ಭೇದ ಕೆಲವು ಕಡೆ ಇರುವುದನ್ನು ಶಾಲಿನಿ ರಘುನಾಥರವರು ಗುರುತಿಸುತ್ತಾರೆ.[೧೩] ಗೌಡ ಕನ್ನಡದ ಸರ್ವನಾಮಗಳಲ್ಲಿ ಸ್ತ್ರೀಲಿಂಗಕ್ಕೆ ಪ್ರತ್ಯೇಕ ಪದವಿಲ್ಲ.

ಉದಾ: ಅಂವ – ಅವನು

ಇಂವ – ಇವನು

ಅದ್ – ಅವಳು/ಅದು

ಇದ್ – ಇವಳು/ಇದು

ಗೌಡಕನ್ನಡದಲ್ಲಿ ಪುಲ್ಲಿಂಗ ಪುಲ್ಲಿಂಗೇತರಗಳೆಂಬ ಎರಡು ವಿಂಗಡಣೆಗಳಿವೆ. ಪುಲ್ಲಿಂಗೇತರದಲ್ಲಿ ಸ್ತ್ರೀಲಿಂಗ ಮತ್ತು ನಪುಂಸಕ ಲಿಂಗ ಎರಡೂ ಸೇರುತ್ತವೆ. ಕ್ರಿಯಾಪದಗಳಲ್ಲಿ ಪುಲ್ಲಿಂಗ ಮತ್ತು ಪುಲ್ಲಿಂಗೇತರ ಎಂಬ ಯಾವುದೇ ವ್ಯತ್ಯಾಸವಿಲ್ಲದೆ ನಪುಂಸಕ ವಾಚಕಗಳು ಬಳಕೆಯಾಗುತ್ತವೆ.

ಉದಾ: ಅಂವ ಬಾತ್ – ಅವನು ಬಂದನು

ಅದ್ ಬಾತ್ – ಅವಳು/ಅದು ಬಂದಿತು

ಮೇಲಿನ ಉದಾಹರಣೆಗಳಲ್ಲಿ ಸರ್ವನಾಮಗಳಿಗೆ ಸಂವಾದಿಯಾಗಿ ಬರುವ ಕ್ರಿಯಾಪದಗಳಲ್ಲಿ ನಪುಂಸಕ ವಾಚಕಗಳನ್ನು ಬಳಸಲಾಗಿದೆ. ಗೌಡಕನ್ನಡದಲ್ಲಿ ಪುಲ್ಲಿಂಗ ಪುಲ್ಲಿಂಗೇತರ ಎಂಬ ಭೇದವಿದ್ದರೂ ಬಹುವಚನದಲ್ಲಿ ಆ ಭೇದವಿಲ್ಲ.

ಉದಾ: ಅವು ಬಂದೊ – ಮನುಷ್ಯರು/ಪ್ರಾಣಿಗಳು

ಇವು ಬಂದೊ – ಮನುಷ್ಯರು/ಪ್ರಾಣಿಗಳು

ದ್ರಾವಿಡ ಭಾಷೆಗಳು ಲಿಂಗವಿಂಗಡಣೆಯಲ್ಲಿ ಅನುಸರಿಸುವ ಬುದ್ಧಿಶಕ್ತಿಯುಳ್ಳ ಮತ್ತು ಬುದ್ಧಿಶಕ್ತಿಯಿಲ್ಲದ ಎಂಬ ಮಾನದಂಡಗಳು ಕೆಲವು ಗೊಂದಲಗಳನ್ನು ಉಂಟುಮಾಡುತ್ತವೆ.

ಉದಾ:    ಮಗು   – ನಪುಂಸಕ

        ಜನ    – ನಪುಂಸಕ

ವ್ಯಾಕರಣಕಾರರ ಅಭಿಪ್ರಾಯದಂತೆ ಮಗುವಿಗೆ ಸ್ವಂತ ಆಲೋಚನಾ ಶಕ್ತಿ ಇಲ್ಲದ ಕಾರಣ ಅದನ್ನು ನಪುಂಸಕಕ್ಕೆ ಸೇರಿಸಲಾಗಿದೆ. ಆದರೆ, ಜನಶಬ್ದವು ನಪುಂಸಕ ವಾಚಕಕ್ಕೆ ಸೇರುತ್ತದೆ. ಇಲ್ಲಿ ಬುದ್ಧಿ ಶಕ್ತಿಯ ಮಾಪನವನ್ನು ಹೇಗೆ ಅನುಸರಿಸಲಾಗುತ್ತಿದೆ? ಎಂಬ ಗೊಂದಲ ಉಂಟಾಗುತ್ತದೆ. ಜನ ಒಂದು ಸಮೂಹಕ್ಕೆ ಅನ್ವಯವಾಗುವ ಶಬ್ದ. ಅದು ಗಂಡು, ಹೆಣ್ಣು ಮಕ್ಕಳು ಎಲ್ಲರನ್ನು ಒಳಗೊಂಡಿರುತ್ತದೆ. ಇದನ್ನು ಮತ್ತೊಂದು ರೀತಿಯಲ್ಲಿ ವಿವರಿಸಲು ಸಾಧ್ಯವಿದೆ. ಕನ್ನಡದಲ್ಲಿ ಸಮೂಹಲಿಂಗವೂ ನಪುಂಸಕ ಲಿಂಗವಾಗುತ್ತದೆ.

ಉದಾ:    ಜನರ ದಂಡು ಬಂತು

        ಎರಡೂ ಗುಂಪು ಒಟ್ಟಿಗೆ ಬಂದವು

        ಮಕ್ಕಳು ಆಟ ಆಡುತ್ತಿವೆ

ಇಲ್ಲಿ ಬುದ್ಧಿ ಶಕ್ತಿಯ ಮಾನದಂಡವನ್ನು ಅನ್ವಯಿಸಲಾಗುವುದಿಲ್ಲ. ಕನ್ನಡದ ಸಂದರ್ಭದಲ್ಲಿ ಒಂದು ಸಮೂಹದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ ಎರಡೂ ಇದ್ದಾಗ ಅದನ್ನು ವಿವರಿಸುವ ವಾಕ್ಯದ ಕ್ರಿಯಾಪದವೂ ನಪುಂಸಕಲಿಂಗವಾಗುತ್ತದೆ.

ಕನ್ನಡ ಭಾಷಿಕ ಪರಿಸರದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕಲಿಂಗ ಎಂಬ ಮೂರು ವರ್ಗೀಕರಣ ಇದ್ದರೂ ಕೆಲವು ಸಂದರ್ಭಗಳಲ್ಲಿ ಈ ನಿಯಮಗಳು ಅನ್ವಯವಾಗದಿರುವುದನ್ನು ಗುರುತಿಸಬಹುದು. ಉದಾಹರಣೆಗಳು.

ಉದಾ:    ಗಂಡು ಬಂತು

        ಮದುವೆ ಹೆಣ್ಣು ಇನ್ನೂ ಸಿದ್ಧವಾಗುತ್ತಿದೆ

        ಅಪ್ಪಾ, ಅಮ್ಮ ಎಲ್ಲೋಯ್ತು?

ಮೇಲಿನ ಉದಾಹರಣೆಗಳಲ್ಲಿ ನಪುಂಸಕಲಿಂಗದ ಪ್ರತ್ಯಯಗಳು ಮಹತ್ ವರ್ಗದ ಶಬ್ದಗಳಿಗೆ ಸೇರಿದೆ. ಬುದ್ಧಿಶಕ್ತಿಯ ಮಾನದಂಡದ ಹಿನ್ನೆಲೆಯ ಲಿಂಗ ವಿಂಗಡಣೆಯ ನಿಯಮಗಳು ಗಂಡು, ಹೆಣ್ಣು, ಅಮ್ಮ ಪದಗಳಿಗೆ ಇಲ್ಲಿ ಅನ್ವಯವಾಗುವುದಿಲ್ಲ. ವ್ಯಾಕರಣ ನಿಯಮಗಳು ಭಾಷಾ ಬಳಕೆಯ ಎಲ್ಲ ಸಂದರ್ಭಗಳಲ್ಲಿಯೂ ಅನ್ವಯವಾಗುವುದಿಲ್ಲ ಎಂಬ ಅಂಶ ಮೇಲಿನ ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ.

ಸಾ.ಶಿ.ಮರುಳಯ್ಯ ಅವರು 'ಕನ್ನಡ ಭಾಷೆಯ ಚರಿತ್ರೆ' ಪುಸ್ತಕದಲ್ಲಿ ಲಿಂಗವಿವಕ್ಷೆಯನ್ನು ವಿವರಿಸುವಾಗ ಅಹಮತ್ ವರ್ಗಕ್ಕೆ ಪಶುಪಕ್ಷಿ ಪ್ರಾಣಿಗಳಷ್ಟೇ ಅಲ್ಲದೆ ಹೆಣ್ಣು, ಗಂಡು ಭೇದವಿಲ್ಲದೆ ಮನುಷ್ಯರೂ ಸೇರುತ್ತಾರೆ ಎನ್ನುತ್ತಾ ಹಸೆಮಣೆ ಮೇಲಿರುವ ಹೆಣ್ಣು ಗಂಡುಗಳು ಪುರೋಹಿತರ ಅಥವಾ ಮುತ್ತೈದೆಯರ ಕೈಗೊಂಬೆಗಳು. ಅವರೂ ಹೇಳಿದಂತೆ ಕೇಳುವ ಕೋಲೆ ಬಸವಗಳು. ಆದ್ದರಿಂದ ಇವುಗಳು ದ್ರಾವಿಡದಲ್ಲಿ ನಪುಂಸಕಗಳೆನಿಸುತ್ತವೆ[೧] ಎನ್ನುತ್ತಾರೆ.

ಇದಕ್ಕೆ ಪೂರಕವಾಗಿ ಕೃಷ್ಣ ಪರಮೇಶ್ವರ ಭಟ್ ಅವರ ಹೇಳಿಕೆಯನ್ನು ಗಮನಿಸುವುದಾದರೆ: ಗಂಡು, ಹೆಣ್ಣು ಎಂಬ ಪದಗಳು ವ್ಯಕ್ತಿ ಎಂಬುದಕ್ಕಿಂತ ಗುಣವನ್ನು (ಗಂಡಸುತನ, ಹೆಣ್ಣುತನ) ಹೆಚ್ಚಾಗಿ

ಅಭಿವ್ಯಕ್ತಿಸುತ್ತವೆ ಎಂಬ ಕಾರಣದಿಂದ ಅವನ್ನು ನಪುಂಸಕವಾಚಿಯಾಗಿ ಬಳಸುತ್ತಿರಬಹುದು ಎನ್ನುತ್ತಾರೆ. ಇದಕ್ಕೆ ಮತ್ತೊಂದು ವಿವರಣೆಯನ್ನು ನೀಡುತ್ತಾ ಕನ್ನಡದಲ್ಲಿ ಉಕಾರಾಂತ ಪದಗಳೆಲ್ಲ ನಪುಂಸಕಲಿಂಗಿಯಾಗಿ ಬಳಕೆಯಾಗುತ್ತವೆ. ಗಂಡು-ಹೆಣ್ಣು ಪದಗಳೂ ಉಕಾರಾಂತವಾಗಿರುವ ಕಾರಣದಿಂದ ಹೀಗೆ ಬಳಕೆಯಾಗುತ್ತಿರಬಹುದು[೧೫] ಎನ್ನುತ್ತಾರೆ. ಇವರ ಈ ವಿವರಗಳಿಗೆ ಅಪವಾದದ ರೀತಿಯಲ್ಲಿ ಕನ್ನಡದಲ್ಲಿ ಕೆಲವು ರಚನೆಗಳಿವೆ.

ಉದಾ: ಅಜ್ಜಿ ಎಲ್ಲೋಯ್ತು, ಅಪ್ಪ ಕೆಲಸಕ್ಕೋಯ್ತು, ಅಮ್ಮ ಕೊಡ್ತು, ತಾತ ಬಂತು ಈ ರೀತಿಯ ಬಳಕೆಗಳಲ್ಲಿ ಉಕಾರಾಂತಗಳಿಲ್ಲದಿದ್ದರೂ ನಪುಂಸಕವಾಚಿಗಳಾಗಿ ಬಳಕೆಯಾಗಿವೆ.

ಮೇಲಿನ ಎಲ್ಲ ವಿವರಗಳ ಹಿನ್ನೆಲೆಯಲ್ಲಿ ದ್ರಾವಿಡ ಭಾಷೆಗಳಲ್ಲಿನ ಲಿಂಗವ್ಯವಸ್ಥೆಯನ್ನು ಪರಿಶೀಲಿಸುವುದಾದರೆ, ಯಾವುದೇ ಭಾಷಿಕ ಸಮುದಾಯದಲ್ಲಿ ಮೊದಲ ಹಂತದಲ್ಲಿ ಎಲ್ಲ ವ್ಯವಸ್ಥೆಗಳು ಸಮರ್ಪಕವಾಗಿ ರೂಪಿತವಾಗಿರುವುದಿಲ್ಲ. ಈ ಅಂಶ ಲಿಂಗವ್ಯವಸ್ಥೆಗೂ ಅನ್ವಯವಾಗುತ್ತದೆ. ಮೊದಲು ಪದಗಳಲ್ಲಿ ಲಿಂಗಭೇದವಿಲ್ಲದೆ ನಪುಂಸಕವಾಚಕಗಳೇ ಪುರುಷ, ಸ್ತ್ರೀ, ವಸ್ತು, ಪ್ರಾಣಿಗಳಿಗೆ ಅನ್ವಯವಾಗುತ್ತಿರಬಹುದು. ಕಾಲಾಂತರದಲ್ಲಿ ಪುರುಷ ಸಮಾಜದ ಪ್ರಮುಖ ವಾಹಿನಿಗಳಲ್ಲಿ ಪ್ರಧಾನವಾದಂತೆ ಪುಲ್ಲಿಂಗ ರೂಪಗಳು ರಚಿತವಾಗಿ, ನಂತರದಲ್ಲಿ ಸ್ತ್ರೀಲಿಂಗರೂಪಗಳು ರಚಿತವಾಗಿರಬಹುದೆಂದು ಊಹಿಸಲು ಸಾಧ್ಯವಿದೆ. ಉದಾ: ಕನ್ನಡದ ಪುರುಷವಾಚಕಗಳು ಮತ್ತು ಸ್ತ್ರೀವಾಕಚಗಳ ರಚನೆಯನ್ನು ಗಮನಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ. ಪುರುಷವಾಚಕಗಳಿಗೆ ಸ್ತ್ರೀಪ್ರತ್ಯಯಗಳನ್ನು ಸೇರಿಸಿ ಸ್ತ್ರೀವಾಚಕಗಳನ್ನು ರಚಿಸಿಕೊಳ್ಳುವ ಒಂದು ಮಾದರಿಯಿದೆ. ಸಮಾಜದ ಪ್ರಮುಖ ವಾಹಿನಿಗೆ ಸ್ತ್ರೀ ಬರದೇ ಇದ್ದ ಕಾರಣ ಭಾಷಿಕ ರಚನೆಗಳು ಈ ರೀತಿಯಾಗಿರುತ್ತವೆ.

ಕೆಲವು ದ್ರಾವಿಡ ಭಾಷೆಗಳಲ್ಲಿ ಸ್ತ್ರೀಲಿಂಗ ಏಕವಚನ ರೂಪ ಇಲ್ಲದಿರುವುದಕ್ಕೆ ಒಂದು ಕಾರಣವನ್ನು ಊಹಿಸಬಹುದು. ಪ್ರಾರಂಭಿಕ ಹಂತದಲ್ಲಿ ಮಹಿಳೆ ಸಮುದಾಯದ ಭಾಗವಾಗಿದ್ದಳೇ ವಿನಃ ಅವಳಿಗೆ ಪ್ರತ್ಯೇಕ ಅಸ್ತಿತ್ವವಿರಲಿಲ್ಲ. ಹಾಗಾಗಿ ಏಕವಚನ ಸ್ತ್ರೀಲಿಂಗರೂಪಗಳು ರಚಿತವಾಗಿಲ್ಲದೇ ಇರಬಹುದು. ಸ್ತ್ರೀಯರನ್ನು ಕೆಲವು ಭಾಷೆಗಳಲ್ಲಿ ಬಹುವಚನ ರೂಪದಲ್ಲಿ ಅಹಮತ್ ವರ್ಗದಲ್ಲಿ, ಇನ್ನು ಕೆಲವು ಭಾಷೆಗಳಲ್ಲಿ ಮಹತ್ ವರ್ಗದಲ್ಲಿ ಗುರುತಿಸಿರುವುದನ್ನು ಕಾಣಬಹುದು. ಭಾಷೆಯ ಉತ್ಪಾದಕ ನೆಲೆಗೂ ಸಾಮಾಜಿಕ ಸ್ಥಿತಿಗತಿಗಳಿಗೂ ಸಂಬಂಧವಿದೆ. ಅಂದರೆ, ಸಾಮಾಜಿಕ ಚಟುವಟಿಕೆಗಳ ಆಧಾರದಿಂದಲೇ ಭಾಷೆ ರೂಪುಗೊಳ್ಳುತ್ತಾ ಹೋಗುತ್ತದೆ.

ಇದುವರೆಗೆ ಲಿಂಗವಿಭಜನೆಯಲ್ಲಿ ಅನುಸರಿಸುವ ಮಾನದಂಡಗಳನ್ನು ಕುರಿತು ಚರ್ಚಿಸಲಾಯಿತು. ಈಗ ಲಿಂಗ ಪರಿಕಲ್ಪನೆಯನ್ನು ವಿವಿಧ ವ್ಯಾಕರಣಕಾರರು ಚರ್ಚಿಸಿರುವ ರೀತಿಯನ್ನು ಪರಿಶೀಲಿಸುವುದಾದರೆ, ಮೂರು ವಿಚಾರಗಳ ಹಿನ್ನೆಲೆಯಲ್ಲಿ ಅವುಗಳನ್ನು ಚರ್ಚೆಗೆ ಒಳಪಡಿಸಬಹುದು. ಅವುಗಳೆಂದರೆ:

೧. ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕ ಲಿಂಗಗಳನ್ನು ವ್ಯಾಕರಣಕಾರರು ವಿಂಗಡಿಸಿರುವ ಕ್ರಮ.

೨. ಸಮೂಹವಾಚಕಗಳನ್ನು ಪುಲ್ಲಿಂಗ ರೂಪವಾಗಿ ನೋಡುತ್ತಿರುವುದು.

೩. ಪುಲ್ಲಿಂಗ ರೂಪಗಳು ಸಹಜವಾಗಿರುವವು, ಸ್ತ್ರೀಲಿಂಗ ರೂಪಗಳು ಅವುಗಳಿಂದ ಸಾಧಿಸಲ್ಪಟ್ಟವು ಎಂಬ ನಿಲುವುಗಳು.

ಕೇಶಿರಾಜನು 'ಶಬ್ದಮಣಿದರ್ಪಣಂ' ಕೃತಿಯಲ್ಲಿ 'ಲಿಂಗಂ ಒಂಭತ್ತುತೆರಂ' ಎಂದು ಹೇಳಿ ಕನ್ನಡದಲ್ಲಿರುವುದು ಮೂರೇ ಲಿಂಗಗಳು ಅವು ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕ ಲಿಂಗವೆಂದು ಹೇಳುತ್ತಾನೆ. 'ಜನ' ಶಬ್ದದ ಲಿಂಗ ನಿರ್ಣಯ ಮಾಡುವಲ್ಲಿ ಈ ಕೆಳಗಿನ ಸೂತ್ರ, ವೃತ್ತಿ, ಪ್ರಯೋಗಗಳನ್ನು ನೀಡುತ್ತಾನೆ.

ಸೂತ್ರ: ಜನ ಶಬ್ದಂ ಅದು ನಪುಂಸಕ
ಮೆನಿಕುಂ ದುಸ್ಸತ್ಸು ಕಾರಮವು ಪೆಱಗಿರೆ ನೆ
ಟ್ಟನೆ ಪುಲ್ಲಿಂಗಂ ಮತ್ತಾ
ಜನಂ ಮಹಚ್ಛಬ್ದಮಿರೆ ನಪುಂಸಕಮಕ್ಕುಂ

ವೃತ್ತಿ: ಜನ ಶಬ್ದಂ ನಿಜದಿಂ ನಪುಂಸಕಂ. ದುಸ್ಸೆಂಬುದುಂ ಸತ್ ಎಂಬುದುಂ ಸು ಎಂಬುದುಂ ಪೆಱಗಿರೆ ಪುಲ್ಲಿಂಗಮಕ್ಕುಂ. ಮಹಚ್ಛಬ್ದಂ ಪೆರಗಿರ್ದೊಡಂ ಮಹಾಜನಮೆಂದು ನಪುಂಸಕಮೆಯಕ್ಕುಂ

ಪ್ರಯೋಗಂ: ಪುಲ್ಲಿಂಗಕ್ಕೆ – ದುರ್ಜನಂ, ಸಜ್ಜನಂ, ಸುಜನ
ನಪುಂಸಕಕ್ಕೆ – ಜನಂ, ಮಹಾಜನಂ.[೧೬]

ಇಲ್ಲಿ 'ಜನ' ಎಂಬುದು ಜನರ ಒಂದು ಗುಂಪನ್ನು ಸೂಚಿಸುವ ಪದ. ಅದರಲ್ಲಿ ಗಂಡು, ಹೆಣ್ಣು ಇಬ್ಬರೂ ಇರಬಹುದು ಅಥವಾ ಬರೀ ಗಂಡೂ, ಬರೀ ಹೆಣ್ಣುಗಳೂ ಇರಬಹುದು. ಇದು ಸಮೂಹಸೂಚಕ ನಾಮಪದ. ಇಲ್ಲಿ ಬಳಸಲ್ಪಟ್ಟಿರುವ ದುಸ್, ಸತ್, ಸು ಎಂಬುವು ಜನರ ಗುಣ ಸ್ವಭಾವವನ್ನು ಹೇಳುತ್ತಿರುವ ಪೂರ್ವ ಪ್ರತ್ಯಯಗಳೇ ವಿನಾ ಲಿಂಗಸೂಚಕಗಳಲ್ಲ ಎಂಬುದನ್ನು ಗಮನಿಸಬೇಕಾಗುತ್ತದೆ.

ಈ ಮೇಲಿನ ವಿಷಯಕ್ಕೆ ಪೂರಕವಾಗಿ ಹೊಸಗನ್ನಡ ವ್ಯಾಕರಣ ಕೃತಿಗಳನ್ನು ಗಮನಿಸುವುದಾದರೆ, ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ವ್ಯಾಕರಣ ದರ್ಪಣ' ಕೃತಿಯಲ್ಲಿ ಲಿಂಗ ವ್ಯವಸ್ಥೆಯನ್ನು ಈ ಮುಂದಿನಂತೆ ವಿವರಿಸಲಾಗಿದೆ.

೧. ಪುಲ್ಲಿಂಗ: 'ಯಾವ ಶಬ್ದ ಪ್ರಯೋಗ ಮಾಡಿದಾಗ ಗಂಡಸು ಎಂಬರ್ಥವು ಮನಸ್ಸಿಗೆ ಹೊಳೆಯುವುದೋ ಅದು ಪುಲ್ಲಿಂಗವೆನಿಸುವುದು.

ಉದಾ: ದೊಡ್ಡವನು, ಮನುಷ್ಯ, ಕಳ್ಳ, ಅರಸು, ಪ್ರಧಾನಿ, ಮಂತ್ರಿ, ಶಕ್ತಿವಂತ, ಸಚಿವ, ಕವಿ, ವಿಮರ್ಶಕ, ದಾಸ ಇತ್ಯಾದಿ

ಮೇಲಿನ ಯಾವ ಶಬ್ದವನ್ನು ಹೇಳಿದರೂ ನಮ್ಮ ಭಾವನೆಗೆ ಗಂಡಸು ಎಂಬರ್ಥ ಹೊಳೆಯುವುದರಿಂದ ಅವು ಪುಲ್ಲಿಂಗಗಳು.

೨. ಸ್ತ್ರೀಲಿಂಗ: ಯಾವ ಶಬ್ದ ಪ್ರಯೋಗ ಮಾಡಿದಾಗ ನಮ್ಮ ಭಾವನೆಗೆ ಹೆಂಗಸು ಎಂಬರ್ಥ ಹೊಳೆಯುವುದೋ ಅದು ಸ್ತ್ರೀಲಿಂಗವೆನಿಸುವುದು.

ಉದಾ: ದೊಡ್ಡವಳು, ವಿದುಷಿ, ಚೆಲುವೆ, ಒಕ್ಕಲುಗಿತ್ತಿ, ಹೂವಾಡಗಿತ್ತಿ, ಉಪಾಧ್ಯಾಯೆ, ಅಧ್ಯಕ್ಷೆ, ಸಚಿವೆ, ಹೆಂಗಸು[೧೭] ಇತ್ಯಾದಿ.

ಮೇಲಿನ ಉದಾಹರಣೆಗಳಲ್ಲಿ ಪ್ರಧಾನಿ, ಮಂತ್ರಿ, ಮನುಷ್ಯ ಮುಂತಾದ ಪದಗಳು ಸ್ತ್ರೀಪುರುಷ ಇಬ್ಬರಿಗೂ ಅನ್ವಯವಾಗುವಂತಹ ಪದಗಳು. ಆದರೆ, ಈ ಪದಗಳು ಪುರುಷವಾಚಕಗಳೆಂದು ವ್ಯಾಕರಣಕಾರರು ಹೇಳುವ ರೀತಿ ಸಮಂಜಸವಲ್ಲ ಎನಿಸುತ್ತದೆ. ಪುರುಷ ಸ್ತ್ರೀ ಇಬ್ಬರಿಗೂ ಈ ಪದಗಳು ಸಮಾನವಾಗಿ ಅನ್ವಯವಾಗುವ ಪದಗಳು ಎಂದು ಈ ಪದಗಳನ್ನು ವ್ಯಾಕರಣಕಾರರು ವಿವರಿಸಬೇಕು. ಮಕ್ಕಳು ವ್ಯಾಕರಣವನ್ನು ಕಲಿಯುವ ಪ್ರಾರಂಭಿಕ ಹಂತದಲ್ಲೇ ಇಂತಹ ಸೂಕ್ಷ್ಮ ಅಂಶಗಳನ್ನು ವ್ಯಾಕರಣಕಾರರು ಅವರ ಗಮನಕ್ಕೆ ತಂದರೆ, ಲಿಂಗಸಂಬಂಧಿ ಗ್ರಹಿಕೆಯ ಗೊಂದಲಗಳು ಮಕ್ಕಳಲ್ಲಿ ನಿವಾರಣೆಯಾಗುತ್ತವೆ.

'ಸಿರಿಗನ್ನಡ ಭಾಷಾ ಬೋಧಿನಿ' ಎಂಬ ವ್ಯಾಕರಣ ಪುಸ್ತಕದಲ್ಲಿ ಸ್ತ್ರೀವಾಚಕ ಪ್ರತ್ಯಯಗಳನ್ನು ಹೇಳುವಲ್ಲಿ "ತಂದೆ ಎಂಬ ಪುಲ್ಲಿಂಗ ರೂಪಕ್ಕೆ 'ತಾಯಿ' ಎಂಬುದು ಸ್ತ್ರೀಲಿಂಗ ರೂಪ, 'ಅಣ್ಣ' ಎಂಬ ರೂಪಕ್ಕೆ 'ಅಕ್ಕ' ಎಂಬುದು ಸ್ತ್ರೀಲಿಂಗ. ಪುಲ್ಲಿಂಗ ರೂಪಗಳು ಸಹಜವಾಗಿರುವವು, ಸ್ತ್ರೀಲಿಂಗ ರೂಪಗಳು ಪುಲ್ಲಿಂಗ ಪ್ರಕೃತಿಗಳ ಮೇಲೆ ಪ್ರತ್ಯಯಗಳು ಸೇರಿ ಆಗುವವು. ಹೀಗೆ ಸ್ತ್ರೀಲಿಂಗವಾಗಲು ಪುಲ್ಲಿಂಗ ಪ್ರಕೃತಿಗಳ ಮೇಲೆ ಸೇರುವ ಪ್ರತ್ಯಯಗಳಿಗೆ ಸ್ತ್ರೀವಾಚಕ ಪ್ರತ್ಯಯಗಳೆಂದು ಹೆಸರು"[೧೮] ಎನ್ನುತ್ತಾರೆ.

ಮೇಲಿನ ವಿವರದಲ್ಲಿ ಪುಲ್ಲಿಂಗ ರೂಪಗಳು ಸಹಜವಾಗಿರುವವು. ಸ್ತ್ರೀಲಿಂಗ ರೂಪಗಳು ಸಾಧಿಸಲ್ಪಟ್ಟವು ಎಂಬ ವಿಚಾರವಿದೆ. ಎಲ್ಲ ವ್ಯಾಕರಣಕಾರರ ನಿಯಮಗಳು ಕೂಡ ಈ ರೀತಿಯಲ್ಲೇ ಇರುವುದನ್ನು ಗಮನಿಸಬಹುದು. ತಂದೆ-ತಾಯಿ, ಅಣ್ಣ-ಅಕ್ಕ ಇವುಗಳ ರಚನೆಯನ್ನು ಗಮನಿಸಿದರೆ ಇವು ಒಂದರಿಂದ ಮತ್ತೊಂದು ರೂಪಗಳು ಸಾಧಿಸಲ್ಪಟ್ಟಿಲ್ಲ. ಈ ಎರಡೂ ರೂಪಗಳು ಜೈವಿಕ ಭಿನ್ನತೆಯ ಆಧಾರದ ಮೇಲೆ ರಚಿತವಾಗಿರುವ ಸ್ವತಂತ್ರ ರೂಪಗಳೇ ವಿನಾ ಸಾಧಿತ ರೂಪಗಳಲ್ಲ. ಒಂದು ಪದದಿಂದ ಮತ್ತೊಂದು ಪದ ಸಾಧಿಸಲ್ಪಟ್ಟ ಕೆಲವು ರೂಪಗಳಿಗೆ ಉದಾಹರಣೆಗಳು:

ಉದಾ: ಗೌಡ-ಗೌಡ+-ಇತಿ-ಗೌಡತಿ/ಗೌಡ್ತಿ
ಒಕ್ಕಲಿಗ-ಒಕ್ಕಲಿಗ+-ಇತ್ತಿ-ಒಕ್ಕಲಗಿತ್ತಿ
ನಿರ್ದೇಶಕ-ನಿರ್ದೇಶಕ+-ಇ-ನಿರ್ದೇಶಕಿ
ಪ್ರಾಧ್ಯಾಪಕ-ಪ್ರಾಧ್ಯಾಪಕ+-ಇ-ಪ್ರಾಧ್ಯಾಪಕಿ
ವೈದ್ಯ-ವೈದ್ಯ+-ಎ-ವೈದ್ಯೆ

ಮೇಲಿನ ನಾಮಪದಗಳೆಲ್ಲವೂ ವೃತ್ತಿಯನ್ನು ಸೂಚಿಸುತ್ತಿರುವ ಪದಗಳು. ಇವುಗಳನ್ನು ನಾವು ಪುಲ್ಲಿಂಗ ಪ್ರಕೃತಿಗಳೆಂದು ತಿಳಿದಿರುವುದರಿಂದ ಇವು ಪುರುಷವಾಚಕಗಳಾಗಿವೆ. ಆದರೆ, ಇವು ಮೂಲತಃ ವೃತ್ತಿಸೂಚಕಗಳು. ಮೊದಲು ಈ ಕ್ಷೇತ್ರಗಳ ಕಾರ್ಯಗಳನ್ನು ಪುರುಷರು ನಿರ್ವಹಿಸಿದ್ದರಿಂದ ಅವುಗಳನ್ನು ಪುರುಷ ವಾಚಕಗಳೆಂದು ಭ್ರಮಿಸಿಕೊಂಡಿದ್ದೇವೆ. ಕಾಲಾಂತರದಲ್ಲಿ ಮಹಿಳೆಯರು ಈ ಕ್ಷೇತ್ರಕ್ಕೆ ಬಂದಿದ್ದರಿಂದ ಅವರ ಗುರುತಿಸುವಿಕೆಯ ಸಾಮಾಜಿಕ ಒತ್ತಡಗಳು ರೂಪುಗೊಂಡದ್ದರಿಂದ ಸಹಜವಾಗಿಯೇ ಕೆಲವು

ಸ್ತ್ರೀವಾಚಕ ಪ್ರತ್ಯಯಗಳನ್ನು ಸೇರಿಸಿಕೊಂಡು ಸ್ತ್ರೀಲಿಂಗ ರೂಪಗಳನ್ನು ರಚಿಸಿಕೊಳ್ಳಲಾಗಿದೆ. ಒಟ್ಟಾರೆ ವ್ಯಾಕರಣಕಾರರು ವಿವರಿಸುವ ಲಿಂಗಪರಿಕಲ್ಪನೆಯನ್ನು ಆ ಸಮುದಾಯದಲ್ಲಿರುವ ಲಿಂಗ ಸಂಬಂಧಿ ಗ್ರಹಿಕೆಗಳು ನಿಯಂತ್ರಿಸುತ್ತಿರುವುದನ್ನು ಗಮನಿಸಬಹುದು.

**೩.೫. ನಿಘಂಟುಗಳಲ್ಲಿ ಲಿಂಗಸಂಬಂಧಿ ಅರ್ಥದ ನೆಲೆಗಳು**

ಭಾಷಿಕ ಸಮುದಾಯಗಳಲ್ಲಿ ನಿಘಂಟುಗಳು ಬಹಳ ಪ್ರಮುಖ ಪಾತ್ರ ನಿರ್ವಹಿಸುತ್ತವೆ. ಪದಗಳ ವಿವಿಧ ಅರ್ಥಗಳನ್ನು ತಿಳಿಯಲು ಆಯಾ ಭಾಷಿಕ ಸಮುದಾಯದ ಅಕ್ಷರಸ್ಥ ವರ್ಗ ನಿಘಂಟುಗಳನ್ನು ಅವಲಂಬಿಸಿರುತ್ತದೆ. ಸ್ತ್ರೀವಾದಿಗಳು ನಿಘಂಟುಗಳು ಸೂಚಿಸುವ ಅರ್ಥದ ನೆಲೆಗಳಲ್ಲಿನ ಲಿಂಗತಾರತಮ್ಯವನ್ನು ಗುರುತಿಸುತ್ತ ಎರಡು ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಅವುಗಳೆಂದರೆ:

೧. ಪದಗಳಿಗೆ ನೀಡುವ ಅರ್ಥಗಳು ಪುರುಷ ಪ್ರಾಧಾನ್ಯತೆಯನ್ನು ಹೊಂದಿದೆ.

೨. ಒಂದು ಪದದ ಅರ್ಥ ಪುರುಷನಿಗೆ ಅನ್ವಯಿಸಿದಾಗ ಅದರ ವ್ಯಾಪ್ತಿ ವಿಸ್ತಾರವಾಗಿರುತ್ತದೆ. ಮಹಿಳೆಗೆ ಅನ್ವಯಿಸಿದಾಗ ಅದರ ವ್ಯಾಪ್ತಿ ಸಂಕುಚಿತವಾಗಿರುತ್ತದೆ.

ಮೇಲಿನ ಈ ಎರಡು ಅಭಿಪ್ರಾಯಗಳ ಹಿನ್ನೆಲೆಯಲ್ಲಿ ನಿಘಂಟುಗಳಲ್ಲಿನ ಅರ್ಥದ ನೆಲೆಗಳನ್ನು ಪರಿಶೀಲಿಸುವ ಉದ್ದೇಶವನ್ನು ಈ ಭಾಗವು ಹೊಂದಿದೆ. ಮೊದಲಿಗೆ ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಅನ್ವಯವಾಗುವ ಪದಗಳಿಗೆ ಅರ್ಥವನ್ನು ಸೂಚಿಸುವಲ್ಲಿ ಪುರುಷನನ್ನೇ ಕೇಂದ್ರವಾಗಿಸಿಕೊಂಡು ಅರ್ಥಗಳನ್ನು ರೂಢಿಸಲಾಗಿದೆ. ಇದಕ್ಕೆ ಕೆಲವು ಉದಾಹರಣೆಗಳು:

೧. ಅನಿಕೇತನ: ೧. ಮನೆಯಿಲ್ಲದವನು, ನೆಲೆಯಿಲ್ಲದವನು.
೨. ನಿಯತವಾಗಿ ಒಂದು ನೆಲೆಯಲ್ಲಿ ನಿಲ್ಲದವನು, ಮನೆ ಮಠಗಳ ಮೋಹವಿಲ್ಲದವನು.

೨. ಸಹಪಾಠಿ: ೧. ಜೊತೆಯಲಿ ಪಾಠ ಕಲಿಯುತ್ತಿರುವವನು.
೨. ಒಡನಾಡಿ

೩. ಮೌನಿ: ೧. ಮಾತನಾಡದೆ ಇರುವವನು
೨. ಮುನಿ, ತಪಸ್ವಿ

೪. ಸಾಹಿತಿ: ೧. ಸಾಹಿತ್ಯವನ್ನು ರಚಿಸುವವನು
೨. ಲೇಖಕ

೫. ಸಿದ್ಧಾಂತಿ: ೧. ಸಿದ್ಧಾಂತಗಳನ್ನು ನಿರೂಪಿಸುವವನು
೨. ವಿಜ್ಞಾನಿ
೩. ಭವಿಷ್ಯ ಹೇಳುವವನು, ಜ್ಯೋತಿಷಿ

ಗಂಡು ಮತ್ತು ಹೆಣ್ಣು ಇಬ್ಬರಿಗೂ ಅನ್ವಯವಾಗುವ ಪದಗಳ ಅರ್ಥಗಳನ್ನು ನೀಡುವಲ್ಲಿ ಹೆಚ್ಚು ಸಂಖ್ಯೆಯ ಪದಗಳಿಗೆ ನಿಘಂಟುಗಳು ಪುರುಷನ ಮೂಲದಿಂದ ಅರ್ಥರಚನೆ ಮಾಡಿರುವುದು ಕಂಡು ಬರುತ್ತದೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಉದಾಹರಿಸಲಾಗಿದೆ. ಅನಿಕೇತನ ಎಂಬ ಪದವು

ಮನೆಯಿಲ್ಲದ, ನೆಲೆನಿಲ್ಲದ, ಮನೆಮಠಗಳ ಮೋಹವಿಲ್ಲದ ಪುರುಷ, ಸ್ತ್ರೀ ಇಬ್ಬರಿಗೂ ಅನ್ವಯವಾಗುವ ಪದ. ಸಹಪಾಠಿ ಪದ ಜೊತೆಯಲ್ಲಿ ಓದುತ್ತಿರುವ, ಜೊತೆಗೆ ಸಾಗುವ ಪುರುಷ, ಸ್ತ್ರೀ ಇಬ್ಬರಿಗೂ ಅನ್ವಯವಾಗುತ್ತದೆ. ಮಾತನಾಡದೆ ಇರುವ ವ್ಯಕ್ತಿಗಳೆಲ್ಲರೂ ಮೌನಿಗಳು. ಸಾಹಿತ್ಯ ರಚನೆಯಲ್ಲಿ ತೊಡಗುವ ಪುರುಷ ಮತ್ತು ಸ್ತ್ರೀಯರಿಬ್ಬರು ಸಾಹಿತಿಗಳಾಗುತ್ತಾರೆ. ಸಿದ್ಧಾಂತಗಳನ್ನು ನಿರೂಪಿಸುವ ಪುರುಷ, ಸ್ತ್ರೀ ಇಬ್ಬರಿಗೂ ಈ ಪದ ಅನ್ವಯವಾಗುತ್ತದೆ. ಗಂಡು ಹೆಣ್ಣು ಎಂಬ ಭೇದವಿಲ್ಲದೆ ಇಬ್ಬರಿಗೂ ಸಮಾನವಾಗಿ ಅನ್ವಯವಾಗುವ ಈ ಪದಗಳಿಗೆ ಪುರುಷಮೂಲೀಯ ಅರ್ಥಗಳನ್ನು ಸೂಚಿಸಿರುವುದು ಕಂಡು ಬರುತ್ತದೆ.

ನಿಘಂಟುಗಳಲ್ಲಿ ಕಂಡು ಬರುವ ಮತ್ತೊಂದು ಅಂಶವೆಂದರೆ, ಒಂದು ಪದದ ಅರ್ಥವನ್ನು ನಾಮಪದದಲ್ಲಿ ಹೇಳುವಾಗ ಪುರುಷ ವಾಚಕಗಳನ್ನು ಬಳಸುವಿಕೆ ಅದೇ ಪದದ ಅರ್ಥವನ್ನು ಗುಣವಾಚಕದಲ್ಲಿ ಹೇಳುವಾಗ ತಟಸ್ಥ ಅರ್ಥಗಳನ್ನು ಕೊಡುವ ಪದಗಳನ್ನು ಬಳಸಿರುವುದು ಕಂಡುಬರುತ್ತದೆ. ಇದನ್ನು ಕೆಲವು ಉದಾಹರಣೆಗಳ ಮುಖಾಂತರ ಪರಿಶೀಲಿಸಬಹುದು:

| | | |
|---|---|---|
| ೧. ಅಶಾಂತ: | ನಾಮಪದ | – ರೇಗಿದವನು |
| | ಗುಣವಾಚಕ | – ಶಾಂತವಲ್ಲದ, ಶಾಂತಿಯಿಲ್ಲದ |
| ೨. ಕುಶಾಗ್ರಬುದ್ಧಿ: | ನಾಮಪದ | – ತೀಕ್ಷ್ಣವಾದ ಬುದ್ಧಿಯುಳ್ಳವನು |
| | ಗುಣವಾಚಕ | – ಬಹು ತೀಕ್ಷ್ಣವಾದ ಬುದ್ಧಿ |
| ೩. ಸಹವಾಸಿ: | ನಾಮಪದ | – ಒಟ್ಟಿಗೆ ವಾಸಿಸುವವನು, ಜೊತೆಗಿರುವವನು |
| | ಗುಣವಾಚಕ | – ಒಟ್ಟಿಗಿರುವ, ಜೊತೆಗಿರುವ |
| ೪. ಅಶುದ್ಧ: | ನಾಮಪದ | – ಅಪವಿತ್ರವಾದವನು |
| | ಗುಣವಾಚಕ | – ಶುದ್ಧವಲ್ಲದ |
| ೫. ಕೋಡಗ: | ನಾಮಪದ | – ಕೋತಿ, ಮಂಗ |
| | ಗುಣವಾಚಕ | – ಕಪಿಯ ಸ್ವಭಾವದವನು, ಚಪಲಬುದ್ಧಿಯುಳ್ಳವನು |

ಮೇಲಿನ ಐದು ಉದಾಹರಣೆಗಳಲ್ಲಿ ಅರ್ಥಗಳು ನಾಮಪದದಲ್ಲಿ ಪುರುಷವಾಚಕಗಳಾಗಿವೆ. ಗುಣವಾಚಕಗಳಲ್ಲಿ ತಟಸ್ಥ ಅರ್ಥಗಳನ್ನು ಹೊಂದಿವೆ. ಮೊದಲ ನಾಲ್ಕು ಪದಗಳು ಯಾವುದೇ ಲಿಂಗಭೇದವಿಲ್ಲದೆ ಪುರುಷ, ಸ್ತ್ರೀ ಇಬ್ಬರಿಗೂ ಅನ್ವಯವಾಗುತ್ತವೆ. ಆದರೂ ನಾಮಪದದಲ್ಲಿ ಅರ್ಥಗಳನ್ನು ಹೇಳುವಲ್ಲಿ ಪುರುಷವಾಚಕಗಳನ್ನು ಬಳಸಲಾಗಿದೆ. ಉದಾಹರಣೆ ಐದು ಪ್ರಾಣಿಗೆ ಅನ್ವಯವಾಗುವ ಪದ. ಪ್ರಾಣಿಯ ಕೆಲಗುಣಗಳನ್ನು ಮನುಷ್ಯರಿಗೆ ಅನ್ವಯಿಸಿ ಹೇಳುವುದುಂಟು. ಈ ಪದದ ಗುಣವನ್ನು ಹೇಳುವಲ್ಲಿ ಪುರುಷವಾಚಕವನ್ನು ಬಳಸಲಾಗಿದೆ. ಇಲ್ಲಿ 'ಅವನು' ಎಂದು ಬಳಸುವುದಕ್ಕಿಂತ ಕಪಿಯ ಸ್ವಭಾವದ, ಚಪಲ ಬುದ್ಧಿಯ ಎಂದು ತಟಸ್ಥ ಅರ್ಥಗಳನ್ನು ನೀಡಬಹುದಿತ್ತು ಎನಿಸುತ್ತದೆ. ಮೇಲಿನ ಮೊದಲ ನಾಲ್ಕು ಪದಗಳಿಗೆ ಅರ್ಥಗಳನ್ನು ನಾಮಪದಗಳಲ್ಲಿ ಸೂಚಿಸುವುದಕ್ಕಿಂತ ಕೇವಲ ಗುಣವಾಚಕಗಳಲ್ಲಿ ಮಾತ್ರ ಅರ್ಥಗಳನ್ನು ಹೇಳಿದ್ದರೆ ಸಾಕು ಎನಿಸುತ್ತದೆ.

ನಿಘಂಟುಗಳಲ್ಲಿ ಹೇಳಿರುವ ಎಲ್ಲ ಅರ್ಥಗಳು ಪುರುಷಮೂಲವಾಗಿಯೇ ಇಲ್ಲ. ಕೆಲವು ಪದಗಳು ಸ್ತ್ರೀ, ಪುರುಷ ಇಬ್ಬರನ್ನೂ ಒಳಗೊಳ್ಳುವಂತೆ ಅರ್ಥಗಳನ್ನು ಸೂಚಿಸುತ್ತವೆ. ಇದನ್ನು ಕೆಲವು ಉದಾಹರಣೆಗಳ ಮೂಲಕ ಪರಿಶೀಲಿಸಬಹುದು:

೧. ಅವನಿಜ: ಭೂಮಿಯಲ್ಲಿ ಹುಟ್ಟಿದುದು.

೨. ಅವಮಾನಿತ: ಅಗೌರವಕ್ಕೆ ಗುರಿಯಾದ ವ್ಯಕ್ತಿ

೩. ಅಸಹಾಯಕ: ನೆರವಿಗೆ ಯಾರೂ ಇಲ್ಲದ ವ್ಯಕ್ತಿ

೪. ಚಾಲಾಕಿ: ಚುರುಕುತನ, ಬುದ್ಧಿವಂತಿಕೆ

ಈ ರೀತಿ ಪುರುಷ ಮೂಲೀಯವಲ್ಲದ ಅರ್ಥಗಳನ್ನು ಕೆಲವು ಪದಗಳು ಸೂಚಿಸುತ್ತವೆ. ಆದರೆ, ಇಲ್ಲಿ ಬಳಕೆಯಾಗಿರುವ 'ವ್ಯಕ್ತಿ' ಎಂಬ ಪದ ಯಾವ ಅರ್ಥದ ನೆಲೆಯಲ್ಲಿ ಬಳಕೆಯಾಗಿದೆ ಎಂಬ ಗೊಂದಲ ಉಂಟಾಗುತ್ತದೆ. ವ್ಯಕ್ತಿ ಪದವು ಪುರುಷ, ಸ್ತ್ರೀ ಇಬ್ಬರನ್ನೂ ಒಳಗೊಳ್ಳುವ ವ್ಯಕ್ತಿಗತ ನೆಲೆಯಲ್ಲಿ ಬಳಕೆಯಾಗಿದೆಯೇ ಅಥವಾ ಅದು ಕೂಡ ಪುರುಷವಾಚಕವಾಗಿ ಬಳಕೆಯಾಗಿದೆಯೇ ಎಂಬುದು. ಏಕೆಂದರೆ, ಕನ್ನಡ ಭಾಷೆಯಲ್ಲಿ ವಾಕ್ಯದ ನೆಲೆಯಲ್ಲಿ ಬಳಕೆಯಾಗುವ ವ್ಯಕ್ತಿ ಪದವು ಪುರುಷನಿಗೆ ಹೆಚ್ಚು ಬಳಕೆಯಾಗುತ್ತದೆ. ಇದನ್ನು ಎರಡು ಉದಾಹರಣೆಯ ಮೂಲಕ ಸ್ಪಷ್ಟಪಡಿಸಿಕೊಳ್ಳಬಹುದು:

ಉದಾ: ೧. ಒಂದು ಊರಿನಲ್ಲಿ ಒಬ್ಬ ವ್ಯಕ್ತಿ ಇದ್ದ – ಬಳಕೆ ಇದೆ

೨. ಒಂದು ಊರಿನಲ್ಲಿ ಒಬ್ಬ ವ್ಯಕ್ತಿ ಇದ್ದಳು – ಬಳಕೆಯಲ್ಲಿ ಇಲ್ಲ

ವ್ಯಕ್ತಿ ಎಂಬ ಪದವು 'ವ್ಯಕ್ತಿಗತ' ಎಂಬ ನೆಲೆಯಲ್ಲಿ ಯಾವುದೇ ಲಿಂಗಭೇದವನ್ನು ಸೂಚಿಸುವುದಿಲ್ಲ. ಆದರೆ, ಬಳಕೆಯ ನೆಲೆಯಲ್ಲಿ ಪುರುಷನಿಗೆ ಮಾತ್ರ ಬಳಕೆಯಾಗುತ್ತದೆ. ಹಾಗಾದರೆ ಮೇಲೆ ಉದಾಹರಿಸಿರುವ ಪದಗಳ ಅರ್ಥಗಳಲ್ಲಿ ಬಳಕೆಯಾಗಿರುವ ವ್ಯಕ್ತಿಪದವು ಪುರುಷನನ್ನೇ ಸೂಚಿಸುತ್ತಿದೆ.

ಒಂದು ಪದದ ಅರ್ಥವು ಪುರುಷನಿಗೆ ಅನ್ವಯವಾದಾಗ ವಿಶಾಲ ಅರ್ಥದಲ್ಲಿಯೂ ಸ್ತ್ರೀಗೆ ಅನ್ವಯವಾದಾಗ ಸೀಮಿತ ಅರ್ಥದಲ್ಲಿಯೂ ಅನ್ವಯವಾಗುತ್ತದೆ ಎಂಬುದು ಸ್ತ್ರೀವಾದಿಗಳ ಮತ್ತೊಂದು ನಿಲುವು. ಇದಕ್ಕೆ ಉದಾಹರಣೆಗಳು:

ಉದಾ: ಅಧವ– ಅನಾಥ, ದಿಕ್ಕಿಲ್ಲದವನು

ಅಧವೆ– ಗಂಡನಿಲ್ಲದವಳು, ವಿಧವೆ

ಅಧವ ಪದವು ಪುರುಷನಿಗೆ ಅನ್ವಯವಾದಾಗ ಅನಾಥ, ದಿಕ್ಕಿಲ್ಲದವನು ಎಂಬ ನೆಲೆಯಲ್ಲಿ ಅರ್ಥರಚನೆಯಾಗುತ್ತದೆ. ಅಧವೆ ಪದವು ಅನಾಥೆ ಎಂಬ ಅರ್ಥವನ್ನು ಸೂಚಿಸಿದರೂ ಅದೂ ಗಂಡನಿಲ್ಲದ ಸ್ಥಿತಿ, ವೈಧವ್ಯದ ಸ್ಥಿತಿಯನ್ನು ಸೂಚಿಸುತ್ತದೆ. ಯಾರೂ ಇಲ್ಲದ ಎಂಬ ಅರ್ಥ ಪುರುಷನಿಗೆ ಅನ್ವಯವಾದರೆ, ಸ್ತ್ರೀಗೆ ಗಂಡನಿಲ್ಲದಿದ್ದರೆ ಆಕೆ ಅನಾಥ ಎಂಬ ಅರ್ಥದಲ್ಲಿ ಬಳಕೆಯಾಗಿರುವುದನ್ನು ಗಮನಿಸಬಹುದು. ಈ ಹಿನ್ನೆಲೆಯಲ್ಲಿ ಗಂಡ ಮತ್ತು ಹೆಂಡತಿ ಎಂಬ ಪದಗಳಿಗೆ ನೀಡಿರುವ ಅರ್ಥಗಳನ್ನು ಪರಿಶೀಲಿಸಬಹುದು.

ಗಂಡ – ೧. ಗಂಡುತನವುಳ್ಳವನು, ಶೂರ, ವೀರ
೨. ಪತಿ, ಒಡೆಯ, ವಲ್ಲಭ
೩. ಗಂಡಸು, ಪುರುಷ
೪. ಗಂಡಸುತನ, ಶೌರ್ಯ, ಪರಾಕ್ರಮ

ಹೆಂಡತಿ – ಮಡದಿ, ಪತ್ನಿ

ಮೇಲಿನ ಎರಡೂ ಪದಗಳು ಸಂಬಂಧಗಳನ್ನು ಸೂಚಿಸುವ ಸಂಬಂಧವಾಚಕಗಳು. ಇಲ್ಲಿ 'ಗಂಡ' ಪದಕ್ಕಿರುವ ಅರ್ಥದ ವ್ಯಾಪ್ತಿ ವಿಶಾಲವಾಗಿದೆ. ಗಂಡಸುತನ, ಶೌರ್ಯ, ಪರಾಕ್ರಮ, ಒಡೆಯ ಎಂಬ ಅರ್ಥಗಳ ಜೊತೆಗೆ ಹೆಂಡತಿಯ ಗಂಡ ಎಂಬ ಅರ್ಥವನ್ನೂ ಒಳಗೊಂಡಿದೆ. ಈ ಕಾರಣಕ್ಕಾಗಿಯೇ ಗಂಡುಮೆಟ್ಟಿದ ನಾಡು, ಗಂಡುಭಾಷೆ ಎಂಬ ಮಾತುಗಳು ಚಾಲ್ತಿಯಲ್ಲಿವೆ. ಹೆಂಡತಿ ಪದ ಮಾತ್ರ ಒಬ್ಬ ಪುರುಷನ ಮಡದಿ ಎಂಬ ಅರ್ಥವನ್ನು ಮಾತ್ರ ನಿಘಂಟುಗಳು ಹೇಳುತ್ತಿವೆ. ಇಲ್ಲಿ ಗಂಡಿನ ಪಾತ್ರ ವಿಶಾಲತೆ, ಹೆಣ್ಣಿನ ಪಾತ್ರ ಸೀಮಿತತೆಯೂ ಕಾಣುತ್ತಿದೆ.

ವೃತ್ತಿ ಸೂಚಕ ಪದಗಳಲ್ಲಿ ಕೂಡ ಈ ರೀತಿಯ ಅರ್ಥರಚನೆಯನ್ನು ನೀಡಿರುವುದನ್ನು ಗಮನಿಸಬಹುದು.

ಉದಾ: ೧. ಗಾಣಿಗ – ಎಣ್ಣೆಯನ್ನು ತೆಗೆದು ಮಾರಿ ಜೀವಿಸುವವನು, ತೆಲ್ಲಿಗ
ಗಾಣಿಗಿತ್ತಿ – ಗಾಣಿಗರ ಹೆಂಗಸು
೨. ಗಾವುಂಡ – ಗ್ರಾಮಾಧಿಕಾರಿ
ಗಾವುಂಡಿ – ಗ್ರಾಮಾಧಿಕಾರಿಯ ಹೆಂಡತಿ

ಗಾಣಿಗ ಎಂಬ ಪದಕ್ಕೆ ಗಾಣದಲ್ಲಿ ಎಣ್ಣೆಯನ್ನು ತೆಗೆದು ಮಾರಿ ಜೀವಿಸುವ ಅವನ ವೃತ್ತಿ ಆಧರಿಸಿ ಅರ್ಥವನ್ನು ನೀಡಲಾಗಿದೆ. ಗಾಣಿಗಿತ್ತಿ ಕೂಡ ಈ ಕಾರ್ಯದಲ್ಲಿ ನಿರತಳಾಗಿದ್ದರೂ ಅವಳನ್ನು ಗಾಣಿಗನ ಹೆಂಡತಿ ಎಂದಷ್ಟೇ ಅರ್ಥೈಸಿರುವುದು ಕಾಣುತ್ತದೆ. ಗಾವುಂಡ, ಗಾವುಂಡಿ ಪದಗಳ ಅರ್ಥರಚನೆಗಳು ಇದೇ ರೀತಿ ಇವೆ, ಮೊದಲೆಲ್ಲ ಗ್ರಾಮಾಧಿಕಾರದ ವೃತ್ತಿಗಳನ್ನು ಪುರುಷರು ಮಾತ್ರ ನಿರ್ವಹಿಸುತ್ತಿದ್ದರಿಂದ ಈ ರೀತಿಯ ಅರ್ಥರಚನೆಯ ಮಾದರಿಗಳು ನಿರ್ಮಾಣವಾಗಿರುತ್ತವೆ. ಬದಲಾದ ಕಾಲಘಟ್ಟದಲ್ಲಿ ಈ ವೃತ್ತಿಗಳನ್ನು ಮಹಿಳೆಯರು ನಿರ್ವಹಿಸುತ್ತಿರುವುದರಿಂದ ಅರ್ಥರಚನೆಯ ವ್ಯಾಪ್ತಿಯನ್ನು ವಿಸ್ತರಿಸುವ ಕಡೆಗೆ ನಿಘಂಟುಕಾರರು ಗಮನಹರಿಸಬೇಕಿದೆ ಎನಿಸುತ್ತದೆ.

ಪುರುಷ ಪ್ರಾಧಾನ್ಯವಿರುವ ಸಮಾಜದಲ್ಲಿ ಯಾವುದೇ ವಿಷಯವಾಗಲಿ, ಮೊದಲು ಪುರುಷನಿಗೆ ಅನ್ವಯವಾಗುತ್ತದೆ. ನಂತರ ಹೆಣ್ಣು ಅದಕ್ಕೆ ಒಳಗೊಳ್ಳುತ್ತಾಳೆ. ಈ ನಿಯಮ ನಿಘಂಟುವಿನ ಅರ್ಥರಚನಾ ನಿಯಮಗಳಲ್ಲೂ ಕಂಡು ಬಂದಿದೆ. ಬದಲಾದ ಕಾಲಘಟ್ಟದಲ್ಲಿ ಸಾಮಾಜಿಕವಾಗಿ ಹೆಣ್ಣಿನ ಪಾಲ್ಗೊಳ್ಳುವಿಕೆಯೂ ಇಂದು ಹೆಚ್ಚಾಗಿರುವುದರಿಂದ, ಅರ್ಥಗಳ ಸೀಮಿತ ವ್ಯಾಪ್ತಿಯೂ ವಿಸ್ತರಿಸಬೇಕಾದ ಅವಶ್ಯಕತೆ ಇದೆ. ನಿಘಂಟು ರಚನಕಾರರು ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಅನ್ವಯವಾಗುವ ಪದಗಳಿಗೆ ತಟಸ್ಥ ಅರ್ಥಗಳನ್ನು ನೀಡುವುದು ಸೂಕ್ತವೆನಿಸುತ್ತದೆ.

**೩.೬. ಪತ್ರಿಕೆಗಳಲ್ಲಿ ಬಳಕೆಯಾಗಿರುವ ಪುರುಷವಾಚಗಳು ಮತ್ತು ಸ್ತ್ರೀವಾಚಕಗಳ ರಚನೆ ಮತ್ತು ಬಳಕೆಯ ನೆಲೆಗಳು**

ಭಾಷಾ ಬಳಕೆಯ ವಿವಿಧ ನೆಲೆಗಳನ್ನು ಪರಿಶೀಲಿಸುವಲ್ಲಿ ಸಮೂಹ ಮಾಧ್ಯಮಗಳ ಪಾತ್ರ ಮುಖ್ಯವಾಗುತ್ತದೆ. ಆಧುನಿಕ ಸಂದರ್ಭದಲ್ಲಿ ಮಹಿಳಾಪರ ಚಿಂತನೆಗಳ ಪ್ರಭಾವ ಹಾಗೂ ವಿವಿಧ ಕ್ಷೇತ್ರಗಳಲ್ಲಿ ಮಹಿಳೆಯರ ಭಾಗವಹಿಸುವಿಕೆಯಿಂದಾಗಿ ಭಾಷಾ ಬಳಕೆಯಲ್ಲಿನ ಬದಲಾವಣೆ ಗಮನಾರ್ಹವಾದುದು. ಈ ಭಾಗದಲ್ಲಿ ದಿನಪತ್ರಿಕೆಗಳು, ವಾರ ಪತ್ರಿಕೆಗಳಲ್ಲಿ ಬಳಕೆಯಾಗಿರುವ ಭಾಷೆಯನ್ನು ಲಿಂಗಸಂಬಂಧಿ ಆಯಾಮಗಳ ಹಿನ್ನೆಲೆಯಲ್ಲಿ ಪರಿಶೀಲಿಸಲಾಗಿದೆ. ದಿನಪತ್ರಿಕೆಗಳಾದ ಪ್ರಜಾವಾಣಿ, ವಿಜಯಕರ್ನಾಟಕ, ಕನ್ನಡಪ್ರಭ, ವಾರಪತ್ರಿಕೆಗಳಾದ ಲಂಕೇಶ್ ಪತ್ರಿಕೆ, ಅಗ್ನಿ, ಸುಧಾ, ಕರ್ಮವೀರಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ೨೦೧೪ ಜನವರಿಯಿಂದ ೨೦೧೬ರ ಜುಲೈ ತಿಂಗಳವರೆಗಿನ ಪತ್ರಿಕೆಗಳನ್ನು ಅಧ್ಯಯನದ ವ್ಯಾಪ್ತಿಯನ್ನಾಗಿಸಿಕೊಳ್ಳಲಾಗಿದೆ.

ಈ ಅಧ್ಯಾಯದಲ್ಲಿ ಮೂರು ವಿಧಾನಗಳಲ್ಲಿ ಭಾಷಾ ಬಳಕೆಯ ನೆಲೆಗಳನ್ನು ಗಮನಿಸಲಾಗಿದೆ. ಅವುಗಳೆಂದರೆ:

೧. ಪುರುಷರಿಗೆ ಮಾತ್ರ ಸಂಬಂಧಿಸಿದ ವಿಷಯಗಳ ನಿರೂಪಣೆ.

೨. ಸ್ತ್ರೀಯರಿಗೆ ಮಾತ್ರ ಸಂಬಂಧಿಸಿದ ವಿಷಯಗಳ ನಿರೂಪಣೆ.

೩. ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಸಂಬಂಧಿಸಿದ ವಿಷಯಗಳ ನಿರೂಪಣೆ.

ಈ ವಿಷಯಕ್ಕೆ ಸಂಬಂಧಿಸಿದ ಹಿಂದಿನ ಅಧ್ಯಾಯಗಳ ಫಲಿತಗಳ ಪ್ರಕಾರ, ಮೂರು ನಿಲುವುಗಳು ಮುಖ್ಯ ಎನಿಸುತ್ತವೆ. ಅವುಗಳೆಂದರೆ:

೧. ಪಿ.ಮಹಾದೇವಯ್ಯ ಅವರ ದಿನದಿನ – ೩ ಪುಸ್ತಕದಲ್ಲಿ ಗುರುತಿಸಿರುವಂತೆ ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಅನ್ವಯವಾಗುವ ಪದಗಳನ್ನು ಬೇಕೆಂದೇ ಸ್ತ್ರೀವಾಚಕಗಳಾಗಿ ಬದಲಾಯಿಸುತ್ತಿರುವಿಕೆ.

ಉದಾ: ಪಾದಚಾರಿ – ಪಾದಚಾರಿಣಿ
ತ್ಯಾಗಿ – ತ್ಯಾಗಿಣಿ
ಮೇಯರ್ – ಮೇಯರಿಣಿ
ಬಾಸ್ – ಬಾಸಿಣಿ
ಉದ್ಯೋಗಿ – ಉದ್ಯೋಗಿಣಿ
ಎಂಪಿ – ಎಂಪಿಣಿ
ಉಗ್ರಗಾಮಿ – ಉಗ್ರಗಾಮಿಣಿ
ಸ್ಟಾರ್ – ಸ್ಟಾರಿಣಿ ಮುಂತಾದವುಗಳು.

೨. ವಸ್ತು ಮತ್ತು ವಿಷಯ ಸೂಚಕ ಪದಗಳಿಗೂ ಲಿಂಗವನ್ನು ಆರೋಪಿಸುವಿಕೆ.

ಉದಾ: ಬೈಕಿಣಿ, ಜೀನ್ಸಿಣಿ, ಚಾಟಿಣಿ, ಬಾಂಬಿಣಿ ಮುಂತಾದವು.

೩. ಗಂಗಪ್ಪ ಕೆ., ಅವರ ಎಂ.ಫಿಲ್., ಸಂಪ್ರಬಂಧವಾದ 'ಮಹಿಳಾ ಪುರವಣಿಗಳ ಭಾಷಿಕ ಅಧ್ಯಯನ'ದಲ್ಲಿ ಗುರುತಿಸಿರುವಂತೆ, ಒಂದು ವಿಷಯ ನಿರೂಪಿಸುವಾಗ ಮಹಿಳೆಯರಿಗೆ ಹೆಚ್ಚು ಒತ್ತನ್ನು ನೀಡಿ ಭಾಷಾ ಬಳಕೆ ಮಾಡಲಾಗುತ್ತಿದೆ ಎಂಬ ಅಂಶ. ಉದಾ: ಮಹಿಳಾ ಆಟಗಾರ್ತಿಯರು ಮುಂತಾದವು.

ಪ್ರಸ್ತುತ ಭಾಗದಲ್ಲಿ ಮೇಲಿನ ಅಂಶಗಳ ಜೊತೆಗೆ ಇತರೆ ಕೆಲವು ಅಂಶಗಳನ್ನು ಗಮನಿಸಲಾಗಿದೆ. ಅವುಗಳೆಂದರೆ:

೧. ಪುರುಷನ ಕಾರ್ಯ ಕ್ಷೇತ್ರಕ್ಕೆ ಮಹಿಳೆ ಕಾಲಿಟ್ಟಾಗ ಅಲ್ಲಿನ ಭಾಷಾ ಬದಲಾವಣೆಯನ್ನು ಗುರುತಿಸುವುದು.

| ಉದಾ: | ಯೋಧ – | ಯೋಧೆ, ಮಹಿಳಾ ಯೋಧರು. |
| --- | --- | --- |
| | ಸೈನಿಕ – | ಮಹಿಳಾ ಸೈನಿಕರು. |
| | ಅಧಿಕಾರಿ– | ಮಹಿಳಾ ಅಧಿಕಾರಿ |

ಪ್ರಯೋಗ: 'ಉಗ್ರ ನಿಗ್ರಹಕ್ಕೆ ಮಹಿಳಾ ಯೋಧರು'– ವಾಯುಪಡೆಯಲ್ಲಿ ಮಾತ್ರವಲ್ಲ ದೇಶದ ಒಳಗಿನ ಭಯೋತ್ಪಾದನಾ ನಿಗ್ರಹ ಕಾರ್ಯಚರಣೆಗಳಲ್ಲೂ **ಮಹಿಳಾ ಸೈನಿಕರು** ಮತ್ತು ಅಧಿಕಾರಿಗಳನ್ನು ನಿಯೋಜಿಸುವುದಾಗಿ ರಕ್ಷಣಾಸಚಿವ ಮನೋಹರ್ ಪರಿಕ್ಕರ್ ಹೇಳಿದ್ದಾರೆ... **ಯೋಧೆಯರ**ನ್ನು ಒತ್ತೆಯಾಗಿಟ್ಟುಕೊಂಡು ದೇಶದ ಮೇಲೆ ಉಗ್ರರು ಒತ್ತಡ ಹಾಕುವ ಅವಕಾಶ ಇರುವುದು ಸಚಿವಾಲಯಕ್ಕೆ ಅರಿವಿದೆ. ಆದರೂ **ಮಹಿಳಾ ಅಧಿಕಾರಿಗಳನ್ನು** ಕಾರ್ಯಾಚರಣೆ, ಪಹರೆ ಮತ್ತಿತರ ಕಾರ್ಯಗಳಲ್ಲಿ ಸೇರಿಸಿಕೊಳ್ಳಲಾಗುವುದು ಎಂದಿದ್ದಾರೆ.[೧೯] ಪ್ರಾಚೀನ ಕಾಲದಿಂದಲೂ ಸೈನ್ಯಕ್ಕೆ ಹೆಣ್ಣುಮಕ್ಕಳು ಸೇರಲು ಅವಕಾಶವಿಲ್ಲದ ಕಾರಣ ಆ ಕ್ಷೇತ್ರ ಗಂಡಿಗೆ ಮಾತ್ರ ಸೀಮಿತವಾಗಿತ್ತು. ಪ್ರಸ್ತುತ ಸೈನ್ಯಕ್ಕೆ ಸೇರಲು ಹೆಣ್ಣುಮಕ್ಕಳಿಗೆ ಅವಕಾಶವಿರುವುದರಿಂದ ಈ ರೀತಿಯ ಪದಗಳು ನಿರ್ಮಾಣವಾಗಿರುವುದನ್ನು ಗಮನಿಸಬಹುದು.

೨. ಮಹಿಳೆಯರು ನಿರ್ವಹಿಸುತ್ತಿದ್ದ ಕ್ಷೇತ್ರಕ್ಕೆ ಪುರುಷ ಬಂದಾಗ ಆದ ಬದಲಾವಣೆಯನ್ನು ಗುರುತಿಸುವುದು. ಉದಾಹರಣೆಗೆ ಮಾಡೆಲಿಂಗ್ ಕ್ಷೇತ್ರ. ಈ ಕ್ಷೇತ್ರವು ಮೊದಲು ಮಹಿಳೆಯರನ್ನು ಮಾತ್ರ ಹೊಂದಿದ್ದು ನಂತರದ ದಿನಗಳಲ್ಲಿ ಅಲ್ಲಿಗೆ ಪುರುಷನ ಆಗಮನವಾಯಿತು. 'ರೂಪದರ್ಶಿ' ಎಂಬ ಪದ ಪುರುಷ ಮತ್ತು ಮಹಿಳೆ ಇಬ್ಬರಿಗೂ ಅನ್ವಯವಾಗುತ್ತದೆ. ಆದರೆ, ನಮ್ಮ ಗ್ರಹಿಕೆ 'ರೂಪದರ್ಶಿ' ಎಂದರೆ ಮಹಿಳೆ ಮಾತ್ರ ಎಂದು ಇದೆ. ಉದಾಹರಣೆ: ಉದಾ: "ದಂತವೈದ್ಯ, ವಕೀಲಿಕೆ, ಕಾರ್ಪೊರೇಟ್ ವೃತ್ತಿ ಮುಂತಾದ ವಿವಿಧ ಕ್ಷೇತ್ರಗಳಿಂದ ರೂಪದರ್ಶಿಯರಾಗಿ ಯುವತಿಯರು ಬರುತ್ತಾರೆ.[೨೦]

ಕಾಲಾಂತರದಲ್ಲಿ ಈ ಕ್ಷೇತ್ರಕ್ಕೆ ಪುರುಷನ ಆಗಮನವಾದ ಮೇಲೆ ಪತ್ರಿಕೆಗಳು ಪುರುಷನಿಗೂ 'ರೂಪದರ್ಶಿ' ಎಂದು ಬಳಕೆಮಾಡುತ್ತಿವೆ.

ಉದಾ: "ಕಲಾವಿದನ ಕಲ್ಪನೆಗೆ ಸರಿಹೊಂದುವ ರೂಪದರ್ಶಿಗಳು ಬೇಕಿತ್ತು. ಕಲಾವಿದ ಮೊದಲು ಬಾಲಕ ಯೇಸುವಿನ ರೂಪದರ್ಶಿಗಾಗಿ ಹುಡುಕಾಡತೊಡಗಿದ. ವಾರಗಳೇ ಕಳೆದರೂ ಸೂಕ್ತ ರೂಪದರ್ಶಿ ಸಿಗಲೇ ಇಲ್ಲ. ಹತಾಶೆಯಿಂದ ಮರಳುತ್ತಿದ್ದವನಿಗೆ ರಸ್ತೆ ಬದಿಯಲ್ಲಿ ಆಡುತ್ತಿದ್ದ ಕೆಲವು ಹುಡುಗರು ಕಣ್ಣಿಗೆ ಬಿದ್ದರು. ಅವರಲ್ಲಿ ಒಬ್ಬ ಹುಡುಗನಲ್ಲಿ ಕಲಾವಿದನ ಕ್ರಿಸ್ತ ಇದ್ದ."[೨೧]

ಇಲ್ಲಿ ಗಮನಿಸಬೇಕಾಗಿರುವ ಅಂಶವೆಂದರೆ ಮಹಿಳಾ ಸೈನಿಕರು, ಮಹಿಳಾ ಯೋಧರು ಎಂಬ ಪದಗಳ ರಚನೆಯ ರೀತಿಯಲ್ಲಿ ಪುರುಷ ರೂಪದರ್ಶಿ ಎಂಬ ರಚನೆಗಳು ಕಂಡುಬರುವುದಿಲ್ಲ. ರೂಪದರ್ಶಿ ಎಂಬ ತಟಸ್ಥ ಅರ್ಥವಿರುವ ಪದವನ್ನೇ ಬಳಕೆ ಮಾಡಲಾಗಿದೆ.

೩. ಸ್ತ್ರೀವಾಚಕಗಳ ಬಳಕೆ ಎಲ್ಲಿ ಬೇಕು, ಎಲ್ಲಿ ಬೇಡ, ಬೇಕಾದರೆ ಏಕೆ? ಬೇಡವಾದರೆ ಏಕೆ? ಎಂಬುದನ್ನು ಕುರಿತು ಚರ್ಚಿಸಲಾಗಿದೆ. ಉದಾಹರಣೆಗಳು ಈ ಕೆಳಗಿನಂತಿವೆ.

ಉದಾ: ೧. "ಜಡ್ಜ್‌ಮೆಂಟ್ ಗೋಜಿಗೆ ಹೋಗದೆ ಪನಿಷ್‌ಮೆಂಟ್ ನೀಡುವ ದಿಟ್ಟ ಪೊಲೀಸ್ **ಅಧಿಕಾರಿಣಿಯೊಬ್ಬ**ಳ ಶಕ್ತಿ ಪದರ್ಶನದ ಪಾತ್ರ ನಿಶಾ ಅವರಿಗೆ ಸಖತ್ ಖುಷಿಕೊಟ್ಟಿದೆ"[೨೨]

ಮೇಲಿನ ಉದಾಹರಣೆಯಲ್ಲಿ ದಿಟ್ಟ ಪೋಲಿಸ್ ಅಧಿಕಾರಿಯೊಬ್ಬಳ ಶಕ್ತಿ ಪ್ರದರ್ಶನದ ಪಾತ್ರ ಎಂದು ಬರೆದಿದ್ದಾರೆ ಅರ್ಥಕ್ಕೆ ಯಾವುದೇ ತೊಡಕಾಗುತ್ತಿರಲಿಲ್ಲ. 'ಒಬ್ಬಳ' ಎಂಬ ಪದ ಅದು ಮಹಿಳೆಗೆ ಸಂಬಂಧಿಸಿದ್ದು ಎಂದು ತಿಳಿಯುವಲ್ಲಿ ಸಹಕಾರಿಯಾಗಿದೆ. 'ಅಧಿಕಾರಿಣಿಯೊಬ್ಬಳ' ಎಂಬ ಪ್ರಯೋಗವಿಲ್ಲದಿದ್ದರೂ ಅರ್ಥಕ್ಕೆ ತೊಡಕಾಗುತ್ತಿರಲಿಲ್ಲ. ಇದಕ್ಕೆ ಪೂರಕವಾಗಿ ಮತ್ತೊಂದು ಉದಾಹರಣೆಯನ್ನು ಗಮನಿಸಬಹುದು:

ಉದಾ: ೨. ಬುಲೆಟ್ ರಾಣಿ ಬರಲಿದ್ದಾಳೆ. ಮಾದಕ ಚಲುವೆ ನಿಶಾಕೊಠಾರಿ ಮತ್ತೆ ಚಂದನವನಕ್ಕೆ ಮರಳಿದ್ದಾರೆ. ಪೊಲೀಸ್ ಅಧಿಕಾರಿ ಪಾತ್ರದಲ್ಲಿ[೨೩]

ಈ ಉದಾಹರಣೆಯಲ್ಲಿ 'ಅಧಿಕಾರಿ' ಎಂಬ ಪದವನ್ನು ಮಾತ್ರ ಬಳಸಲಾಗಿದೆ. ಅಧಿಕಾರಿ ನ್ಯೂಟ್ರಲ್ ಪದ. ಈ ವಾಕ್ಯದಲ್ಲಿ ಅಧಿಕಾರಿ ಎಂಬ ಪದ ಮಹಿಳೆಗೆ ಸಂಬಂಧಿಸಿದಂತೆ ಬಳಕೆಯಾಗಿದೆ ಎಂಬುದರ ಸ್ಪಷ್ಟತೆ ವಾಕ್ಯದಲ್ಲಿನ ಇತರ ಪದಗಳಿಂದ ಆಗಿರುವುದನ್ನು ಗಮನಿಸಬಹುದು.

ಉದಾ: ೩. "ಮ್ಯಾನ್ಮಾರ್‌ನಲ್ಲಿ ಸೂಕಿ ಬದಲಾವಣೆಯ ಹರಿಕಾರಿಣಿ ಎನಿಸಿದ್ದಾರೆ"[೨೪] ಸಾಮಾನ್ಯವಾಗಿ ಪಾಶ್ಚಾತ್ಯರ ವ್ಯಕ್ತಿನಾಮಗಳನ್ನು ಮೇಲುನೋಟಕ್ಕೆ ಯಾವ ಲಿಂಗದ್ದೆಂದು ಗುರುತಿಸುವುದು ಕಷ್ಟವಾಗುತ್ತದೆ. ಮೇಲಿನ ಉದಾಹರಣೆಯಲ್ಲಿ ಸೂಕಿ ಬಗ್ಗೆ ತಿಳಿಯದವರಿಗೆ ಈ ವಾಕ್ಯ ಹೆಣ್ಣಿಗೆ ಸಂಬಂಧಿಸಿದ್ದು ಎಂದು ತಿಳಿಯುವಲ್ಲಿ ಸಹಕರಿಸುವ ಪದ 'ಹರಿಕಾರಿಣಿ' ಎಂಬುದು ಮಾತ್ರ, ಹರಿಕಾರ ಎಂಬ ಪದದ ಅರ್ಥ ಬದಲಾವಣೆಗೆ ಮೊದಲು ಕಾರಣರಾದವರು ಎಂಬುದಾಗಿದೆ. ಅದು ಮಹಿಳೆಯಾಗಿರಬಹುದು, ಪುರುಷನಾಗಿರಬಹುದು. ಆದರೆ, ಇದುವರೆಗೆ ಹರಿಕಾರ ಎಂಬ ಪದ ಪುರುಷರಿಗೆ ಮಾತ್ರ ಬಳಕೆಯಾಗಿರುವ ಕಾರಣದಿಂದ ಮಹಿಳೆಯರಿಗೆ ಹರಿಕಾರಿಣಿ ಎಂದು ಬಳಸಲಾಗಿದೆ. ಮೇಲಿನ ವಾಕ್ಯದಲ್ಲಿ ಹರಿಕಾರ ಎಂಬ ಪದವನ್ನು ಬಳಕೆಮಾಡಿದ್ದರೆ ಆಂಗ್ ಸ್ಯಾನ್ ಸೂಕಿಯವರನ್ನು ಪುರುಷ ಎಂದು ತಿಳಿಯುವ ಅವಕಾಶಗಳಿರುತ್ತಿದ್ದವು.

ಉದಾ: ೪. ಪುರುಷ ಬಂಜೆತನ – ಈ ಪುರುಷ ಬಂಜೆತನವನ್ನು ನಿವಾರಿಸಲು ಹೋಮಿಯೋಪತಿಯಲ್ಲಿ ಸಾಕಷ್ಟು ಔಷಧಿಗಳಿವೆ.

ಹಿಂದಿನ ಕೆಲವು ದಶಕಗಳವರೆಗೂ 'ಬಂಜೆತನ' ಎಂಬ ಪರಿಕಲ್ಪನೆ ಸ್ತ್ರೀಯರಿಗೆ ಮಾತ್ರ ಸೀಮಿತವಾಗಿತ್ತು. ಬಂಜೆ ಎಂದು ಹೆಣ್ಣನ್ನು ನಿಂದಿಸಲು ಬಳಸಲಾಗುತ್ತಿತ್ತು. ಇತ್ತೀಚಿನ ದಿನಗಳಲ್ಲಿ ವಿಜ್ಞಾನದ ಹೊಸ ಅವಿಷ್ಕಾರಗಳಿಂದಾಗಿ ಮಕ್ಕಳಾಗದಿರುವ ಸಮಸ್ಯೆ ಪುರುಷನಲ್ಲಿಯೂ ಇದೆ ಎಂಬ ಅರಿವು ಮೂಡಿದೆ. ಈಗ ಬಂಜೆತನದ ಪರಿಕಲ್ಪನೆಯೂ ಪುರುಷನನ್ನು ಒಳಗೊಂಡಿರುವುದನ್ನು ಮೇಲಿನ ಉದಾಹರಣೆಯಿಂದ ತಿಳಿಯುತ್ತಿದೆ. ಆದರೆ, ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಬಂಜೆತನದ ಪರಿಕಲ್ಪನೆಗೆ ಪುರುಷ ಒಳಗಾದರೂ ನೇರವಾಗಿ 'ಬಂಜೆ' ಎಂದು ಸಂಬೋಧಿಸಲಾಗಿಲ್ಲ. 'ಬಂಜೆ' ಎಂಬ ಪದ ಪದಶಃ ಮಹಿಳೆಗೆ ಮಾತ್ರ ಅನ್ವಯವಾಗುತ್ತಿದೆ.

ಮನುಕುಲದ ಪ್ರಾರಂಭದಿಂದ ಪುರುಷ ಮತ್ತು ಮಹಿಳೆಯರ ಭಾಗವಹಿಸುವಿಕೆಯ ಕ್ಷೇತ್ರಗಳು ಬೇರೆ ಬೇರೆಯಿದ್ದವು. ಆದ್ದರಿಂದ ಅಲ್ಲಿ ಅವರಿಗೆ ಅನ್ವಯವಾಗುವ ಭಾಷಾ ರಚನೆಯಾಗುತ್ತಿತ್ತು. ಉದಾ: ವೀರ, ಚಕ್ರವರ್ತಿ, ಸಾಮ್ರಾಟ್ ಪದಗಳು ಪುರುಷರಿಗೂ ಸಹಧರ್ಮಿಣಿ, ಪತಿವ್ರತೆ, ಸೌಭಾಗ್ಯವತಿ ಈ ತರಹದ ಪದಗಳು ಮಹಿಳೆಯರಿಗೆ ಅನ್ವಯವಾಗುತ್ತಿದ್ದವು. ಪ್ರಸ್ತುತ ಸಂದರ್ಭದಲ್ಲಿ ಪುರುಷ ಮತ್ತು ಸ್ತ್ರೀ ಇಬ್ಬರು ಒಂದೇ ಕ್ಷೇತ್ರದಲ್ಲಿ ಭಾಗವಹಿಸಿದರೂ ಅಲ್ಲಿ ಬಳಕೆಯಾಗುವ ಕೆಲವು ಪದಗಳು ಹಿಂದೆ ಇದ್ದ ವಿಭಜನೆಯನ್ನು ನೆನಪಿಸುತ್ತವೆ. ಇದನ್ನು ಕೆಲವು ಉದಾಹರಣೆಗಳ ಮೂಲಕ ಪರಿಶೀಲಿಸಬಹುದು:

ಉದಾ: ೧. "ವಿಧಾನಸಭೆಯಿಂದ ರಾಜ್ಯಸಭೆಗೆ ನಡೆಯಲಿರುವ ಚುನಾವಣೆಯಲ್ಲಿ ಕೇಂದ್ರ ನಗರಾಭಿವೃದ್ಧಿ ಸಚಿವ ಎಂ.ವೆಂಕಯ್ಯನಾಯ್ಡು ಅವರನ್ನು ಕಣಕ್ಕಿಳಿಸುವ ತೀರ್ಮಾನದಿಂದ ಹಿಂದೆ ಸರಿದಿರುವ ಬಿಜೆಪಿ ಅವರ ಬದಲು ಕೇಂದ್ರದ ಹಣಕಾಸು ಮತ್ತು ಕಾರ್ಪೊರೇಟ್ ವ್ಯವಹಾರಗಳ ರಾಜ್ಯ ಸಚಿವೆ ನಿರ್ಮಲಾ ಸೀತಾರಾಮನ್ ಅವರನ್ನು ಅಭ್ಯರ್ಥಿಯನ್ನಾಗಿಸಲು ನಿರ್ಧರಿಸಿದೆ."[೨೫]

ಮೇಲಿನ ಉದಾಹರಣೆಯಲ್ಲಿ ಪುರುಷನ ನಿರೂಪಣೆಯ ಸಂದರ್ಭದಲ್ಲಿ ಬಳಕೆಯಾಗಿರುವ ಕಣಕ್ಕಿಳಿಯುವ ಪದವು ಯುದ್ಧದ ಭೂಮಿಗೆ ಇಳಿಯುವ, ಕುಸ್ತಿಯ ಕಣಕ್ಕಿಳಿಯುವ ಮುಂತಾದ ಅರ್ಥಗಳನ್ನು ಸೂಚಿಸುತ್ತದೆ. ಈ ತರಹದ ಬಳಕೆಯನ್ನು ಮಹಿಳೆಯರ ನಿರೂಪಣೆಯ ಸಂದರ್ಭದಲ್ಲಿ ಬಳಸುವುದಿಲ್ಲ. ಅವರಿಗೆ ಅಭ್ಯರ್ಥಿ ಎಂಬ ಪದವನ್ನು ಮಾತ್ರ ಬಳಸಲಾಗಿದೆ. ಕಾರಣ ಯುದ್ಧ, ಕುಸ್ತಿ ಮುಂತಾದ ಆಟಗಳು ಒಂದು ಕಾಲದವರೆಗೂ ಪುರುಷನಿಗೆ ಮಾತ್ರ ಸೀಮಿತವಾಗಿದ್ದವು. ಇಂದಿನ ರಾಜಕೀಯ ರಂಗ ಪುರುಷರಿಗೆ ಯುದ್ಧದ ಕಣದ ರೀತಿಯೇ ಎಂಬುದನ್ನು ಮೇಲಿನ ಉದಾಹರಣೆಯು ಸ್ಪಷ್ಟಪಡಿಸುತ್ತಿದೆ.

ಉದಾ: ೨. ಸ್ನೂಕರ್‌ನಲ್ಲಿ ವಿಶ್ವ ಸಾಮ್ರಾಟ–ಪಂಕಜ್ ಅಡ್ವಾಣಿ[೨೬]

ಕ್ರೀಡಾ ಕ್ಷೇತ್ರದಲ್ಲಿ ಕೂಡ ಸಾಮ್ರಾಟ, ಚಕ್ರವರ್ತಿ ಎಂಬ ಪದಗಳು ಪುರುಷ ಕ್ರೀಡಾಪಟುಗಳಿಗೆ ವಿಶೇಷಣಗಳಾಗಿ ಬಳಕೆಯಾಗುತ್ತಿವೆ. ಮಹಿಳೆಯರು ಈ ಕ್ಷೇತ್ರದಲ್ಲಿ ಎಷ್ಟೇ ಸಾಧನೆ ಮಾಡಿದರೂ ವಿಶ್ವದಲ್ಲಿ

ನಂ.೧ ಸ್ಥಾನ ಪಡೆದರು ಈ ತರಹದ ವಿಶೇಷಣಗಳನ್ನು ಅವರಿಗೆ ಬಳಸುವುದಿಲ್ಲ. ಸಿನಿಮಾ ರಂಗದಲ್ಲಿ ಈ ತರಹದ ಬಳಕೆಗಳನ್ನು ಗಮನಿಸಬಹುದು. ಅಭಿನಯ ಚಕ್ರವರ್ತಿ, ನಟಸಾರ್ವಭೌಮ, ಪದಗಳನ್ನು ಪುರುಷರಿಗೂ, ಅಭಿನಯ ಶಾರದೆ, ಕನಸಿನ ರಾಣಿ, ಮೋಹಕನಟಿ ಮುಂತಾದವುಗಳನ್ನು ಮಹಿಳೆಯರಿಗೂ ಬಳಸಲಾಗುತ್ತದೆ. ಪುರುಷನಿಗೆ ಬಳಕೆಯಾಗುವ ಎಲ್ಲ ವಿಶೇಷಣಗಳು ಆಡಳಿತ, ಶಕ್ತಿ ಪ್ರದರ್ಶನ ಮುಂತಾದ ಹಿನ್ನೆಲೆಯುಳ್ಳವು. ಮಹಿಳೆಯರಿಗೆ ಬಳಕೆಯಾಗುವ ವಿಶೇಷಣಗಳು ಸೌಂದರ್ಯದ ಹಿನ್ನಲೆಯುಳ್ಳವುಗಳಾಗಿವೆ.

ಕನ್ನಡ ಭಾಷಿಕ ಪರಿಸರದಲ್ಲಿ ಕೆಲವು ಸಂದರ್ಭಗಳಲ್ಲಿ 'ಇ' ಕಾರಾಂತ್ಯದ ಪದಗಳು ಸ್ತ್ರೀವಾಚಕಗಳಾಗುವ ಪರಿಪಾಠವಿದೆ. ಉದಾ: ಜಗಳಗಂಟಿ, ಗಯ್ಯಾಳಿ, ಬಜಾರಿ ಮುಂತಾದವು. ಈ ರೀತಿಯ ಪದಗಳು ಸಾಮಾಜಿಕ ಸಂದರ್ಭಗಳಲ್ಲಿ ಕೇವಲ ಮಹಿಳೆಯರಿಗೆ ಹೆಚ್ಚು ಬಳಕೆಯಾಗುತ್ತವೆ. ಆದರೆ, ಇತ್ತೀಚಿನ ದಿನಪತ್ರಿಕೆಗಳಲ್ಲಿ ಜಗಳಗಂಟಿ ಎಂಬ ಪದವನ್ನು ಇಡೀ ಸಮುದಾಯಕ್ಕೆ ಬಳಕೆ ಮಾಡಿರುವುದನ್ನು ಗಮನಿಸಬಹುದು.

ಉದಾ: "ಜಗಳಗಂಟಿ ವ್ಯವಸ್ಥೆ ಮತ್ತು ಖುಷಿಯ ಶೋಧ – ಜಗಳಗಂಟಿಗಳಾಗತೊಡಗಿದ್ದೇವೆ ನಾವು, ಮನುಷ್ಯ ಮನುಷ್ಯರ ನಡುವೆ ಸಹಜವಾಗಿ ನಡೆಯುವ ಕಿತ್ತಾಟಗಳ ಬಗ್ಗೆ ಹೇಳುತ್ತಿಲ್ಲ ನಾನು. ಮನುಷ್ಯರು ಕಿತ್ತಾಡಿಕೊಳ್ಳದ ಹಾಗೆ, ದಬ್ಬಾಳಿಕೆ ನಡೆಸದ ಹಾಗೆ ಸಹಕಾರ ಮನೋಭಾವದಿಂದ ವರ್ತಿಸುವ ಹಾಗೆ ನೋಡಿಕೊಳ್ಳಲೆಂದೇ ಕಟ್ಟಲಾಗಿರುವ ವಿವಿಧ ಧಾರ್ಮಿಕ, ಸಾಮಾಜಿಕ ಹಾಗೂ ರಾಜಕೀಯ ಸಂಸ್ಥೆಗಳು ಜಗಳಗಂಟಿಗಳಾಗತೊಡಗಿವೆ"[೨೭]

ಸಮಾಜವು ಸ್ತ್ರೀಯರಿಗೆ ಕೆಲವು ಆದರ್ಶಗುಣಗಳನ್ನು ವಿಧಿಸಿರುತ್ತವೆ. ಉದಾಹರಣೆಗೆ ಸಹನೆ, ತಾಳ್ಮೆ, ಸಹಭಾಗಿತ್ವ, ಸಂಯಮ ಮುಂತಾದವುಗಳು. ಈ ಗುಣಗಳಿಗೆ ವಿರುದ್ಧವಾಗಿರುವ ಕೆಲವು ಪಾತ್ರಗಳು ಸಮಾಜದಲ್ಲಿರುತ್ತವೆ. ಇವುಗಳನ್ನು ಕೀಳಾಗಿ ಕಾಣುವ ಸಮಾಜ ಅಂತಹವರಿಗೆ ಕೆಲವು ತಲೆಬರಹಗಳನ್ನು ನೀಡಿರುತ್ತದೆ. ಅಂತಹುಗಳಲ್ಲಿ ಗಯ್ಯಾಳಿ, ಬಜಾರಿ, ಜಗಳಗಂಟಿ ಮುಂತಾದವುಗಳು ಪ್ರಮುಖವಾದವು. ಅಂದರೆ, ಸಮಾಜದ ದೃಷ್ಟಿಯಲ್ಲಿ ಇಂತಹ ಪಾತ್ರಗಳು ಸದಾ ದೂರು, ಪ್ರತಿದೂರು ಮಾಡುವ, ಜಗಳಗಳಲ್ಲಿ ನಿರತರಾಗಿ ನೆಮ್ಮದಿಯನ್ನು ಹಾಳು ಮಾಡುತ್ತಿರುತ್ತವೆ. ಇಂದು ವ್ಯವಸ್ಥೆಯೇ ಈ ರೀತಿಯಾಗಿದೆ ಎಂಬ ಅರ್ಥದಲ್ಲಿ ಜಗಳಗಂಟಿ ಪದವನ್ನು ಬಳಕೆಮಾಡಲಾಗಿದೆ.

ಭಾಷೆ ಪುರುಷ ಪ್ರಧಾನವಾದದ್ದು ಎಂದು ವಾದಿಸುವ ಸ್ತ್ರೀವಾದಿಗಳ ಪ್ರಕಾರ, ಪ್ರತಿ ಪದವೂ, ಅರ್ಥವೂ ಪುರುಷನನ್ನೇ ಕೇಂದ್ರವಾಗಿ ಹೊಂದಿರುತ್ತದೆ. ಇದು ಒಂದು ವಾದ. ಮತ್ತೊಂದು ವಾದದ ಪ್ರಕಾರ, ಭಾಷೆಯು ಮೂಲತಃ ಲಿಂಗತಾರತಮ್ಯದಿಂದ ರಚಿತವಾಗಿರುವುದಿಲ್ಲ ತಟಸ್ಥ ಆಗಿರುತ್ತದೆ. ಸಮಾಜದಲ್ಲಿ ಪುರುಷ ಪ್ರಧಾನತೆಯಲ್ಲಿರುವುದರಿಂದ ಹಾಗನಿಸುತ್ತದೆ ಎಂಬುದು ಮತ್ತೊಂದು ವಾದ. ಈ ಎರಡೂ ವಾದಗಳಿಗೆ ಉತ್ತರ ನೀಡುವ ಮಾದರಿಯಲ್ಲಿ ಎರಡು ಪರಿಹಾರ ಮಾರ್ಗವನ್ನು ಸೂಚಿಸುವುದು ಮತ್ತೊಂದು ನಿಲುವು. ಅವುಗಳೆಂದರೆ:

೧. ಓರ್ವನ/ಳ, ಅರ್ಜಿದಾರ/ರೆ, ನಿರೂಪಕ/ಕಿ ಈ ತರಹದಲ್ಲಿ ಬಳಕೆಮಾಡಲು ಸೂಚಿಸುವುದು. ಆದರೆ ಎಲ್ಲ ಸಂದರ್ಭಗಳಲ್ಲಿ ಈ ರೀತಿಯ ಬಳಕೆ ಮಾಡಲು ತೊಡಕಾಗುವುದರಿಂದ ಈ ಮಾದರಿ

ಅಷ್ಟು ಸಮಂಜಸವೆನಿಸುವುದಿಲ್ಲ. ಇದನ್ನು ಕೇವಲ ಅರ್ಜಿಗಳಲ್ಲಿ ಮಾತ್ರ ಬಳಸಬಹುದು. ಆದರೆ, ಬರವಣಿಗೆಯಲ್ಲಿ ಈ ರೀತಿಯ ಬಳಕೆ ತೊಡಕುಂಟುಮಾಡುತ್ತದೆ.

೨. ಬಹುವಚನದ ಬಳಕೆಯನ್ನು ಮಾಡುವುದು, ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ ಬದಲಾಗಿ ವಿದ್ಯಾರ್ಥಿಗಳು ಎಂದು ಬಳಸುವುದು. ಇದನ್ನು ಒಂದು ಉದಾಹರಣೆಯ ಮುಖಾಂತರ ಪರಿಶೀಲಿಸಬಹುದು:

ಉದಾ: "ವಿದ್ಯಾರ್ಥಿಗಳು ವಿದ್ಯಾರ್ಥಿನಿಯರಿಂದ ಆಕರ್ಷಿತರಾಗುತ್ತಾರೆ. ಲೈಬ್ರರಿಗೆ ವಿದ್ಯಾರ್ಥಿನಿಯರನ್ನು ಬಿಟ್ಟರೆ ನಾಲ್ಕು ಪಟ್ಟು ಹುಡುಗರು ಅವರ ಹಿಂದೆ ಹೋಗುತ್ತಾರೆ. ಹೀಗಾಗಿ ಲೈಬ್ರರಿ ಪ್ರವೇಶಿಸಲು ವಿದ್ಯಾರ್ಥಿನಿಯರಿಗೆ ಅನುಮತಿ ಇಲ್ಲ"[೨೮]

ಮೇಲಿನ ಉದಾಹರಣೆಯ ಪ್ರಕಾರ ಎಲ್ಲ ಸಂದರ್ಭಗಳಲ್ಲೂ ವಿದ್ಯಾರ್ಥಿ ಪದವನ್ನು ಗಂಡು ಮತ್ತು ಹೆಣ್ಣು ಇಬ್ಬರಿಗೂ ಅನ್ವಯವಾಗುವಂತೆ ಬಹುವಚನದಲ್ಲಿ ಬಳಸಲು ಸಾಧ್ಯವಾಗುವುದಿಲ್ಲ. ಒಂದು ವಿಷಯದ ನಿರೂಪಣೆಯಲ್ಲಿ ಹುಡುಗ ಮತ್ತು ಹುಡುಗಿ ಇಬ್ಬರ ನಡುವೆ ಭಿನ್ನತೆಯಿದ್ದಾಗ ಇಬ್ಬರಿಗೂ ಅನ್ವಯವಾಗುವಂತೆ ವಿದ್ಯಾರ್ಥಿಗಳು ಎಂದು ಬಳಸಿದರೆ ಗೊಂದಲಕ್ಕೆ ಕಾರಣವಾಗುತ್ತದೆ. ಮೇಲಿನ ಉದಾಹರಣೆಯಲ್ಲಿ ವಿದ್ಯಾರ್ಥಿಗಳು ಎಂದರೆ ಕೇವಲ ಹುಡುಗ ವಿದ್ಯಾರ್ಥಿಗಳು ಎಂದು ಮಾತ್ರ. ವಿದ್ಯಾರ್ಥಿನಿ ಎಂಬ ಪದ ಇರುವ ಕಡೆಯಲ್ಲೆಲ್ಲಾ ವಿದ್ಯಾರ್ಥಿಗಳು ಎಂಬ ಪದವನ್ನು ಬಳಸಿದರೆ ಅರ್ಥಸ್ಪಷ್ಟತೆಗೆ ತೊಡಕಾಗುತ್ತದೆ ಎಂಬುದನ್ನು ಗಮನಿಸಬೇಕಾಗುತ್ತದೆ. ಈ ರೀತಿಯ ತೊಡಕುಗಳಿಗೆ ಕಾರಣವೆಂದರೆ, ವಿದ್ಯಾರ್ಥಿ ಪದದ ಸ್ತ್ರೀವಾಚಕ ರೂಪ ವಿದ್ಯಾರ್ಥಿನಿ ಎಂದು ತಿಳಿದಿರುವುದು. ಇಲ್ಲಿ ವಿದ್ಯಾರ್ಥಿ ಪದದ ಎದುರಿಗೆ ವಿದ್ಯಾರ್ಥಿನಿ ಪದವಿದ್ದಾಗ, ವಿದ್ಯಾರ್ಥಿ ಪದ ಪುರುಷವಾಚಕವಾಗುವ ಸಾಧ್ಯತೆ ಹೆಚ್ಚು. ಹಾಗಾಗಿ ಇಂತಹ ಸಂದರ್ಭಗಳಲ್ಲಿ ಹುಡುಗ ವಿದ್ಯಾರ್ಥಿ, ಹುಡುಗಿ ವಿದ್ಯಾರ್ಥಿ ಎಂದು ಬಳಕೆ ಮಾಡಬಹುದಾದ ಸಾಧ್ಯತೆಯಿದೆ. ಏಕವ್ಯಕ್ತಿ ನಿರೂಪಣೆಯಲ್ಲಿ ಬಹುವಚನ ಬಳಸಿದರೆ, ಅರ್ಥಸ್ಪಷ್ಟತೆಗೆ ತೊಡಕಾಗುವುದಿಲ್ಲ. ಇದನ್ನು ಒಂದು ಉದಾಹರಣೆಯ ಮುಖಾಂತರ ನೋಡಬಹುದು:

ಉದಾ: "ನೋರ್ತಿಬಾಯಿ ರಾಜಸ್ಥಾನದ ಹರ್ಮರ್ ಹೆಸರಿನ ಹಳ್ಳಿಯ **ಸರಪಂಚರಾಗಿದ್ದವರು**. ಆ ಹಳ್ಳಿಯ ಮೊಟ್ಟಮೊದಲ **ದಲಿತ ಸರಪಂಚರೆಂಬ** ಹೆಗ್ಗಳಿಕೆ ಅವರದ್ದು. ಆದರೆ ಈಗ ತಿದ್ದುಪಡಿ ತರಲಾಗಿರುವ ರಾಜಸ್ಥಾನ ಪಂಚಾಯ್ತಿ ಕಾಯ್ದೆ, ಆಕೆ ಪುನಃ ಚುನಾವಣೆಗೆ ಸ್ಪರ್ಧಿಸುವ ಅವಕಾಶವನ್ನು ನಿರಾಕರಿಸಿದೆ. ನೋರ್ತಿಬಾಯಿ ಕಾಯ್ದೆಯನುಸಾರ ನಿಗದಿಪಡಿಸಿದಷ್ಟು ಶಿಕ್ಷಣ ಪಡೆದಿಲ್ಲ ಅನ್ನೋದು ಇದಕ್ಕೆ ಕಾರಣ. ಈಗ ನೋರ್ತಿಬಾಯಿಯವರ ಜೀವನವನ್ನು ಸ್ವಲ್ಪ ನೋಡೋಣ. ಈಕೆ ಕಟ್ಟಡ ನಿರ್ಮಾಣದ ಕೆಲಸಗಳಲ್ಲಿ ಕೂಲಿಯಾಗಿ ದುಡಿಯುತ್ತಿದ್ದವರು. ಹತ್ತನೇ ವಯಸ್ಸಿಗೇ ಓದು ನಿಲ್ಲಿಸಿದ ಈಕೆ **ಬಾಲಕಾರ್ಮಿಕರಾಗಿದ್ದುಕೊಂಡು** ದುಡಿಯುತ್ತಲೇ ಬೆಳೆದವರು."[೨೯]

ಮೇಲಿನ ಉದಾಹರಣೆಯಲ್ಲಿ ಸರಪಂಚರ, ದಲಿತ, ಬಾಲಕಾರ್ಮಿಕ ಪದಗಳನ್ನು ಬಹುವಚನದಲ್ಲಿ ಬಳಸಿರುವುದರಿಂದ ಸರಪಂಚೆ, ದಲಿತೆ, ಬಾಲಕಾರ್ಮಿಕೆ ಈ ರೀತಿಯ, ಸ್ತ್ರೀವಾಚಕಗಳನ್ನು ಬಳಸಬೇಕೆಂಬ

ಅನಿವಾರ್ಯತೆ ಉಂಟಾಗಿಲ್ಲ. ಜೊತೆಗೆ ವಾಕ್ಯಗಳಲ್ಲಿ ಬಳಕೆಯಾಗಿರುವ ಆಕೆ, ಈಕೆ ಎಂಬ ಸರ್ವನಾಮಗಳು, ನೋರ್ತಿಬಾಯಿ ಎಂಬ ವ್ಯಕ್ತಿನಾಮ ಇದು ಮಹಿಳೆಗೆ ಸಂಬಂಧಿಸಿದ ವಿಷಯ ಎಂದು ಸ್ಪಷ್ಟಪಡಿಸುವಲ್ಲಿ ಸಹಕರಿಸುತ್ತವೆ.

ಒಟ್ಟಾರೆ ಈ ಅಧ್ಯಾಯದಲ್ಲಿ ಭಾಷೆಯ ರಚನೆಯ ಸ್ತರದಲ್ಲಿ ಪದ ಮತ್ತು ಪದಗಳ ಅರ್ಥಗಳು ಪುರುಷ ಮತ್ತು ಸ್ತ್ರೀಯರಿಗೆ ಅನ್ವಯವಾಗುವ ವಿವಿಧ ನೆಲೆಗಳನ್ನು ಗುರುತಿಸಲಾಗಿದೆ. ಬಳಕೆಯ ಸ್ತರದಲ್ಲಿ ಸಮಾಜದಲ್ಲಿನ ಲಿಂಗಸಂಬಂಧಿ ನಿಷೇಧಗಳು, ನಿರ್ಬಂಧಗಳು ಹೀಗೆ ಭಾಷಾ ಬಳಕೆಯನ್ನು ನಿಯಂತ್ರಿಸುತ್ತವೆ ಎಂಬುದನ್ನು ಗುರುತಿಸಲಾಗಿದೆ. ವ್ಯಾಕರಣಕಾರರು ಅನುಸರಿಸುವ ಲಿಂಗವಿಭಜನೆಯ ಮಾನದಂಡಗಳು, ನಿಘಂಟುಕಾರರು ಅನುಸರಿಸುವ ಪುರುಷ ಪ್ರಧಾನ್ಯತೆಯ ಅರ್ಥರಚನೆಯ ಮಾದರಿಗಳು ಹಾಗೂ ಪತ್ರಿಕೆಗಳಲ್ಲಿನ ಸ್ತ್ರೀವಾಚಕ ಮತ್ತು ಪುರುಷ ವಾಚಕಗಳ ಬಳಕೆಯ ವಿವಿಧ ನೆಲೆಗಳನ್ನು ಪರಿಶೀಲಿಸಲಾಗಿದೆ. ಸಮಾಜದಲ್ಲಿನ ಪೂರ್ವಕಲ್ಪಿತ ಮಾನದಂಡಗಳನ್ನು ಬದಲಾದ ಕಾಲಘಟ್ಟಗಳಲ್ಲಿ ಅವುಗಳನ್ನು ನೋಡುವ ದೃಷ್ಟಿಕೋನಗಳು ಬದಲಾಗಬೇಕಾದ ಅನಿವಾರ್ಯತೆಯನ್ನು ಈ ಅಧ್ಯಾಯದಲ್ಲಿ ಗುರುತಿಸಿಕೊಳ್ಳಲಾಗಿದೆ.

## ಉಲ್ಲೇಖಗಳು


೧. ಶ್ರೀಮತಿ. ಎಚ್.ಎಸ್., ೨೦೦೯, ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ, ಪು.ಸಂ. ೮೯-೯೦

೨. ಅದೇ, ಪು.ಸಂ. ೯೦-೯೧

೩. ನಡಹಳ್ಳಿ ವಸಂತ್, ಸುಧಾ ವಾರಪತ್ರಿಕೆ ಮಾರ್ಚ್ ೧೦, ೨೦೧೬, ಹೆಂಗಸರೇಕೆ ಗಂಡಸರಂತಲ್ಲ?, ಪು.ಸಂ. ೨೭

೪. ಮೂಲ: ಸಿಮೊನ್‌ದ ಬೋವಾ, ಅನು: ಶ್ರೀಮತಿ ಎಚ್.ಎಸ್, ೨೦೦೭, ದ ಸೆಕೆಂಡ್ ಸೆಕ್ಸ್, ಪು.ಸಂ. ೩೫

೫. ನಡಹಳ್ಳಿ ವಸಂತ್, ಸುಧಾ, ಮಾರ್ಚ್ ೧೦, ೨೦೧೬, ಹೆಂಗಸರೇಕೆ ಗಂಡಸರಂತಲ್ಲ?, ಪು.ಸಂ. ೨೨

೬. ಅದೇ, ಪು.ಸಂ. ೨೩

೭. ಶ್ಯಾಮಲಾ ಕೆ.ಸಿ, (ಸಂ): ನಾರಾಯಣ ಕೆ.ವಿ., ೨೦೦೭, ಭಾಷೆ ಮತ್ತು ಮೆದುಳು, ಭಾಷೆ ವಿಶ್ವಕೋಶ, ಪು.ಸಂ. ೨೪೮

೮. ನೇಮಿಚಂದ್ರ, ೨೦೧೧, ಮಹಿಳೆ, ಮಿದುಳು ಮತ್ತು ಪೂರ್ವಗ್ರಹ, ಸಂ: ಸುಮಿತ್ರ ಎಂ, ಸಾಹಿತ್ಯ ಸಮನ್ವಯ-೨. ಪು.ಸಂ. ೫೬

೯. ಸಂಗಮೇಶ ಸವದತ್ತಿಮಠ, ೨೦೧೦, ತೌಲನಿಕ ದ್ರಾವಿಡ ಭಾಷಾ ವಿಜ್ಞಾನ, ಪು.ಸಂ. ೧೨೧

೧೦. ಧಾರವಾಡಕರ ರಾ.ಯ., ೧೯೯೮, ಕನ್ನಡ ಭಾಷಾಶಾಸ್ತ್ರ, ಪು.ಸಂ. ೧೯೮

೧೧. ಕೆಂಪೇಗೌಡ ಕೆ., ೧೯೯೭, ಕನ್ನಡ ಭಾಷಾ ಸ್ವರೂಪ, ಪು.ಸಂ. ೧೬೪

೧೨. ಸಂಗಮೇಶ ಸವದತ್ತಿಮಠ, ೨೦೧೦, ತೌಲನಿಕ ದ್ರಾವಿಡ ಭಾಷಾ ವಿಜ್ಞಾನ, ಪು.ಸಂ. ೧೨೩

೧೩. ಶಾಲಿನಿ ರಘನಾಥ, ೧೯೯೪, ಭಾಷೆ ಸಾಹಿತ್ಯ ಸಂಸ್ಕೃತಿ, ಪು.ಸಂ. ೨೮

೧೪. ಮರುಳಯ್ಯ ಸಾ.ಶಿ., ೨೦೧೫, ಕನ್ನಡ ಭಾಷೆಯ ಚರಿತ್ರೆ, ಪು.ಸಂ. ೩೩

೧೫. ಕೃಷ್ಣ ಪರಮೇಶ್ವರ ಭಟ್ಟ, ೨೦೦೨, ಕನ್ನಡ ರಚನೆ ಮತ್ತು ಬಳಕೆ, ಪು.ಸಂ. ೭೭-೭೮

೧೬. ಸಂ: ನರಸಿಂಹಾಚಾರ್ ಡಿ.ಎಲ್., ೨೦೦೧, ಕೇಶಿರಾಜ ವಿರಚಿತ ಶಬ್ದಮಣಿದರ್ಪಣಂ, ಪು.ಸಂ. ೨೨೦-೨೨೧

೧೭. ಕನ್ನಡ ವ್ಯಾಕರಣ ದರ್ಪಣ, ೨೦೧೦, ಕನ್ನಡ ಸಾಹಿತ್ಯ ಪರಿಷತ್, ಪು.ಸಂ. ೬೭-೬೮

೧೮. ಗಣಪತಿಭಟ್ಟ ಕೆ., ೧೯೯೬, ಸಿರಿಗನ್ನಡ ಭಾಷಾ ಬೋಧಿನಿ, ಪು.ಸಂ. ೩೨

೧೯. ತರಂಗ, ೨೦೧೫ ಅಕ್ಟೋಬರ್ ೨೯, ಪು.ಸಂ. ೭೧

೨೦. ಸುಧಾ, ೨೦೧೫ ನವೆಂಬರ್ ೧೨, ಪು.ಸಂ. ೭೬

೨೧. ತರಂಗ, ೨೦೧೫ ಅಕ್ಟೋಬರ್ ೨೯, ಪು.ಸಂ. ೬

೨೨. ಸುಧಾ, ೨೦೧೫ ನವೆಂಬರ್ ೧೨, ಪು.ಸಂ. ೭೪

೨೩. ಕರ್ಮವೀರ, ೨೦೧೫ ನವೆಂಬರ್ ೨೨, ಪು.ಸಂ. ೭೦

೨೪. ಕರ್ಮವೀರ, ೨೦೧೫ ಡಿಸೆಂಬರ್ ೧೩, ಪು.ಸಂ. ೩೭

೨೫. ಪ್ರಜಾವಾಣಿ, ೨೦೧೬ ಮೇ ೩೦, ಪು.ಸಂ. ೧

೨೬. ಪ್ರಜಾವಾಣಿ, ೨೦೧೬ ಮೇ ೩೦, ಆಟ ಅಂಕ, ಪು.ಸಂ. ೨

೨೭. ಪ್ರಜಾವಾಣಿ, ೨೦೧೬ ಜುಲೈ ೨೩, ಪು.ಸಂ. ೬

೨೮. ಕರ್ಮವೀರ, ೨೦೧೪ ನವೆಂಬರ್ ೩೦, ಪು.ಸಂ. ೫೦

೨೯. ಅಗ್ನಿ, ೨೦೧೬ ಮೇ ೨೬, ಪು.ಸಂ. ೯

## ಅಧ್ಯಾಯ-ನಾಲ್ಕು

# ಕನ್ನಡ ಸಮುದಾಯದ ಭಾಷಿಕ ನೆಲೆಗಳು: ಗಂಡು ಮತ್ತು ಹೆಣ್ಣು

ಅಧ್ಯಾಯ–ನಾಲ್ಕು

# ಕನ್ನಡ ಸಮುದಾಯದ ಭಾಷಿಕ ನೆಲೆಗಳು: ಗಂಡು ಮತ್ತು ಹೆಣ್ಣು

ಸಾಮಾಜಿಕ ಲಿಂಗತಾರತಮ್ಯದ ನೆಲೆಗಳು ಭಾಷಾ ಬಳಕೆಯ ವಿವಿಧ ಘಟಕಗಳಲ್ಲಿ ಗೋಚರವಾಗುವುದನ್ನು ಸ್ತ್ರೀವಾದಿಗಳು ಗುರುತಿಸುತ್ತಾರೆ. ಇವುಗಳನ್ನು ತಾರತಮ್ಯವನ್ನು ಪೋಷಿಸುವ, ನಿರ್ವಹಿಸುವ ಮಾದರಿಗಳೆಂದು ಪ್ರತಿಪಾದಿಸುತ್ತಾರೆ. ಈ ಹಿನ್ನೆಲೆಯಲ್ಲಿ ವ್ಯಕ್ತಿನಾಮಗಳು, ಸಂಬಂಧವಾಚಕಗಳು, ಸಂಬೋಧನಾ ರೂಪಗಳು, ಗಾದೆಗಳು, ಬೈಗುಳಗಳು, ಒಡಮುಗಳಲ್ಲಿನ ಲಿಂಗಸಂಬಂಧಿ ಆಯಾಮಗಳನ್ನು ಪರಿಶೀಲಿಸುವ ಉದ್ದೇಶವವನ್ನು ಈ ಅಧ್ಯಾಯ ಒಳಗೊಂಡಿದೆ.

ಸಮುದಾಯಗಳ ಮೌಲ್ಯಗಳು ಯಾವಾಗಲೂ ಆದರ್ಶೀಕೃತ ನೆಲೆಯಲ್ಲಿಯೇ ರಚಿತವಾಗಿರುತ್ತವೆ. ಆದರ್ಶ ಎಂಬ ಕಲ್ಪಿತ ವಾಸ್ತವದಲ್ಲಿ ತಾರತಮ್ಯಗಳಿರುತ್ತವೆ. ಸಮುದಾಯದ ಪ್ರಧಾನವಾಹಿನಿಯ ಹಿತಕ್ಕನುಗುಣವಾಗಿ ಆದರ್ಶೀಕೃತ ಪರಿಭಾಷೆಯನ್ನು ಅರ್ಥೈಸಿಕೊಳ್ಳಬೇಕಾಗುತ್ತದೆ. ಈ ಆದರ್ಶೀಕೃತ ಮೌಲ್ಯಗಳನ್ನು ಮೀರುವ ಪ್ರತಿರೋಧದ ಧ್ವನಿಗಳು ಸಮುದಾಯಗಳಲ್ಲಿ ಸಕ್ರಿಯವಾಗಿರುತ್ತದೆ. ಮೌಲ್ಯ ಮತ್ತು ಮೌಲ್ಯಗಳ ಮೀರುವಿಕೆಯ ಹಿನ್ನೆಲೆಯಲ್ಲಿ ಸಮುದಾಯದಲ್ಲಿನ ಲಿಂಗಸಂಬಂಧಿ ಗ್ರಹಿಕೆಗಳನ್ನು ಪರಿಶೀಲಿಸುವ ಅಗತ್ಯವಿದೆ. ವ್ಯತ್ಯಾಸ ಮತ್ತು ತಾರತಮ್ಯದ ಎರಡೂ ನೆಲೆಗಳಲ್ಲಿ ಇದನ್ನು ಪರಿಶೀಲಿಸಲಾಗುತ್ತಿದೆ.

### ೪.೧. ವ್ಯಕ್ತಿನಾಮಗಳು: ಲಿಂಗ ಭಿನ್ನತೆ

ಜೈವಿಕ ಭಿನ್ನತೆಯ ಹಿನ್ನೆಲೆಯಲ್ಲಿ ವ್ಯಕ್ತಿನಾಮಗಳು ಪುರುಷ ಮತ್ತು ಸ್ತ್ರೀಯರ ನಡುವಿನ ಭಿನ್ನತೆಯನ್ನು ತೋರಿಸುತ್ತವೆ. ಹೆಸರಿಡುವುದರ ಹಿಂದಿನ ಮುಖ್ಯ ಉದ್ದೇಶ ವ್ಯಕ್ತಿಯನ್ನು ಸಮಾಜದಲ್ಲಿ ಖಚಿತವಾಗಿ ಗುರುತಿಸಲು. ಜೊತೆಗೆ ಈ ಹೆಸರುಗಳು ಕುಟುಂಬ, ಸಮಾಜಗಳಲ್ಲಿ ಆಯಾ ವ್ಯಕ್ತಿಗಳ ಅಸ್ತಿತ್ವದ ಮತ್ತು ಅಸ್ಮಿತೆಯ ಗುರುತುಗಳಾಗಿರುತ್ತವೆ. ಪ್ರಾರಂಭಿಕ ಹಂತದಲ್ಲಿ ಹೆಸರಿಡುವುದರ ಉದ್ದೇಶ ಕೇವಲ ಗುರುತಿಸುವಿಕೆ ಮಾತ್ರವೇ ಆಗಿದ್ದರೂ ಕಾಲಾಂತರದಲ್ಲಿ ಅದಕ್ಕೆ ಸಾಮಾಜಿಕ, ಧಾರ್ಮಿಕ, ಆರ್ಥಿಕ ಸಂಗತಿಗಳು

ಸೇರ್ಪಡೆಯಾಗಿರುವುದು ತಿಳಿಯುತ್ತದೆ. ಉದಾಹರಣೆಗೆ ಸ್ಮೃತಿಕಾರನ ಪ್ರಕಾರ ಬ್ರಾಹ್ಮಣ – ಮಂಗಳ ಸೂಚಕ, ಕ್ಷತ್ರಿಯ – ಶಕ್ತಿಸೂಚಕ, ವೈಶ್ಯ –ಐಶ್ವರ್ಯ ಸೂಚಕ, ಶೂದ್ರ – ಸೇವಾ ವೃತ್ತಿ ಸೂಚಕ ಹೆಸರುಗಳನ್ನಿಟ್ಟುಕೊಳ್ಳಬೇಕೆಂದು ಸೂಚಿಸಿರುವುದನ್ನು ಗಮನಿಸಬಹುದು. ಇದರಿಂದ ಸಾಮಾಜಿಕ ವಿನ್ಯಾಸದ ಕೆಲವು ಅಂಶಗಳು ವ್ಯಕ್ತಿನಾಮಗಳ ಜೊತೆಗೆ ಸೇರ್ಪಡೆಯಾದವು ಎಂಬುದು ತಿಳಿಯುತ್ತದೆ.

ಇಡೀ ಸಮುದಾಯದಕ್ಕೆ ಅನ್ವಯವಾಗುವ ಕೆಲವು ಸಾಮಾಜಿಕ ನಿಯಮಗಳಿದ್ದರೆ ಅದರಲ್ಲಿ ಲಿಂಗವ್ಯವಸ್ಥೆ ಅನ್ವಯವಾಗುವ ಮತ್ತೆ ಕೆಲವು ನಿಯಮಗಳಿರುತ್ತವೆ. ಇಲ್ಲಿ ಜೈವಿಕಾಂಶ, ಸಾಮಾಜಿಕಾಂಶ ಎರಡೂ ಮುಖ್ಯವಾಗುತ್ತವೆ. ಗಂಡು ಮತ್ತು ಹೆಣ್ಣಿಗೆ ಹೆಸರಿಡುವಲ್ಲಿಯೂ ಕೆಲವು ಸಾಮಾಜಿಕ ಸಂಗತಿಗಳ ಪ್ರಭಾವವನ್ನು ಗುರುತಿಸಬಹುದು. ಸ್ಮೃತಿಕಾರ ಮನು ಹುಡುಗನಿಗೆ ಸಮಸಂಖ್ಯೆಯ ಅಕ್ಷರಗಳು, ಹುಡುಗಿಗೆ ಬೆಸಸಂಖ್ಯೆಯ ಅಕ್ಷರಗಳ ಹೆಸರಿಡಬೇಕು ಎಂಬ ಅಂಶವನ್ನು ವ್ಯಕ್ತಪಡಿಸುತ್ತಾನೆ. ಇದರ ಹಿಂದಿನ ಉದ್ದೇಶವೇನೆಂಬುದು ತಿಳಿಯದು. ವ್ಯಕ್ತಿನಾಮಗಳ ಅಕ್ಷರಗಳಲ್ಲಿ ಕೂಡ ಭಿನ್ನತೆ ಇರಬೇಕೆಂಬ ಅಂಶ ಲಿಂಗಭಿನ್ನತೆಯನ್ನು ಪೋಷಿಸಲು ಪೂರಕವಾಗಿ ಕಾರ್ಯನಿರ್ವಹಿಸುತ್ತಿದೆ ಎಂಬುದು ಸ್ಪಷ್ಟವಾಗುತ್ತದೆ. ಒಟ್ಟಾರೆ ಈ ಭಾಗದಲ್ಲಿ ವ್ಯಕ್ತಿನಾಮಗಳಲ್ಲಿನ ಲಿಂಗಭಿನ್ನತೆಯನ್ನು ಎರಡು ನೆಲೆಯಲ್ಲಿ ಪರಿಶೀಲಿಸಲಾಗುವುದು.

೧. ದಾಖಲೆಯ ರೂಪಗಳು.

೨. ಬಳಕೆಯ ರೂಪಗಳು.

ದಾಖಲೆಯ ರೂಪಗಳು ಎಂದರೆ ನಾಮಕರಣದ ಸಂದರ್ಭದಲ್ಲಿ ಅವರಿಗಿಟ್ಟ ನಿಜನಾಮಗಳು, ಮತದಾರರ ಪಟ್ಟಿ, ಶಾಲಾ ಹಾಜರಾತಿ ಮುಂತಾದವುಗಳಲ್ಲಿ ದಾಖಲೆಯಾದ ರೂಪಗಳನ್ನು ಒಳಗೊಂಡಿರುತ್ತವೆ. ಬಳಕೆಯ ರೂಪಗಳು ಸಾಮಾಜಿಕವಾಗಿ ಬಳಕೆಯಾಗುವ ಮಾದರಿಗಳನ್ನು ಒಳಗೊಂಡಿರುತ್ತವೆ. ವ್ಯಕ್ತಿನಾಮಗಳ ಘಟಕಗಳಾದ ನಿರ್ದಿಷ್ಟ ಮತ್ತು ವಾರ್ಗಿಕಗಳು ಎರಡೂ ಸಾಮಾಜಿಕ ವಿನ್ಯಾಸದ ವಿವಿಧ ಆಯಾಮಗಳನ್ನು ವ್ಯಕ್ತಪಡಿಸುತ್ತಿರುತ್ತವೆ. ಇವುಗಳಲ್ಲಿ ಲಿಂಗಭಿನ್ನತೆ, ವೃತ್ತಿ, ಜಾತಿ, ಧರ್ಮ, ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳು ವ್ಯಕ್ತವಾಗುತ್ತಿರುತ್ತವೆ. ವ್ಯಕ್ತಿನಾಮಗಳ ದಾಖಲೆರೂಪಗಳಲ್ಲಿ ಹಾಗೂ ಬಳಕೆಯ ಎರಡೂ ರೂಪಗಳಲ್ಲಿಯೂ ಈ ಮೇಲಿನ ಅಂಶಗಳು ವ್ಯಕ್ತವಾಗುತ್ತಿರುತ್ತವೆ.

ಕನ್ನಡ ಭಾಷಿಕರಲ್ಲಿ ವ್ಯಕ್ತಿನಾಮಗಳ ನಿರ್ದಿಷ್ಟ ಭಾಗಗಳಿಗೆ ವಾರ್ಗಿಕಗಳಾಗಿ ಸಂಬಂಧವಾಚಕಗಳನ್ನು ಸೇರಿಸುವ ಪರಿಪಾಠವಿದೆ. ಸಂಬಂಧವಾಚಕಗಳನ್ನು ವ್ಯಕ್ತಿನಾಮಗಳ ವಾರ್ಗಿಕಗಳಾಗಿ ಏಕೆ ಬಳಸಲಾಗಿದೆ ಎಂಬ ಅಂಶವನ್ನು ಪರಿಶೀಲಿಸುವುದಾದರೆ, ಸಾಮಾನ್ಯವಾಗಿ ಕನ್ನಡ ಭಾಷಿಕ ಪರಿಸರದಲ್ಲಿ ಸಂಬಂಧವಾಚಕಗಳನ್ನು ಕೌಟುಂಬಿಕ ವಲಯದಾಚೆ ಕೂಡ ಸಾಮಾಜಿಕವಾಗಿ ವ್ಯಕ್ತಿಗಳಿಗೆ ಗೌರವಸೂಚಿಸಲು ಬಳಸಲಾಗುತ್ತದೆ. ಮೊದಲು ಕೌಟುಂಬಿಕ ಪರಿಸರ ಹಾಗೂ ಸಾಮಾಜಿಕ ಪರಿಸರದಲ್ಲಿ ವ್ಯಕ್ತಿಗೆ ಗೌರವಸೂಚಿಸಲು ಬಳಕೆಯಾಗುತ್ತಿದ್ದ ಇವುಗಳು ಕಾಲಾಂತರದಲ್ಲಿ ವ್ಯಕ್ತಿನಾಮಗಳ ಭಾಗಗಳಾಗಿ ಸೇರ್ಪಡೆಯಾಗಿರಬಹುದೆಂದು ಊಹಿಸಲು ಅವಕಾಶವಿದೆ.

ಇಲ್ಲಿ ಎದುರಾಗುವ ಮತ್ತೊಂದು ಪ್ರಶ್ನೆ ಎಂದರೆ ಕೆಲವು ಸಂಬಂಧವಾಚಕಗಳು ಮಾತ್ರ ವ್ಯಕ್ತಿನಾಮಗಳಲ್ಲಿ ವಾರ್ಗಿಕಗಳಾಗಿ ಬಳಕೆಯಾಗುತ್ತಿರುವುದರ ಕುರಿತು. ಉದಾ: ಅಪ್ಪ, ಅಯ್ಯ, ಅಣ್ಣ, ಅವ್ವ, ಅಕ್ಕ, ಅಮ್ಮ.

| ಉದಾ: | **ಪುರುಷ** | – | ಸ್ತ್ರೀ |
|---|---|---|---|
| | ರಾಮಯ್ಯ | – | ರಾಮಕ್ಕ |
| | ನಿಂಗಪ್ಪ | – | ನಿಂಗವ್ವ |
| | ನಾಗಣ್ಣ | – | ನಾಗಮ್ಮ |

ಅಲ್ಲದೆ, ಕೆಲವು ವ್ಯಕ್ತಿನಾಮಗಳಲ್ಲಿ ಎರಡು ಸಂಬಂಧವಾಚಕಗಳು ಸೇರಿ ಪೂರ್ಣ ವ್ಯಕ್ತಿನಾಮಗಳು ಕೂಡ ಆಗಿವೆ.

ಉದಾ: ಅಣ್ಣಯ್ಯ, ಅಕ್ಕಮ್ಮ, ಅಯ್ಯಪ್ಪ, ಅಣ್ಣಪ್ಪ, ಅಪ್ಪಣ್ಣ ಮುಂತಾದವು.

ಈ ಹಿನ್ನೆಲೆಯಲ್ಲಿ ವ್ಯಕ್ತಿನಾಮಗಳ ವಾರ್ಗಿಕಗಳಾಗಿ ಬಳಕೆಯಾಗದ ಎರಡು ಸಂಬಂಧವಾಚಕಗಳನ್ನು ಪರಿಶೀಲಿಸುವುದಾದರೆ, ಉದಾ: 'ಅತ್ತೆ', 'ಮಾವ'. ಈ ಸಂಬಂಧವಾಚಕಗಳು ಅಪ್ಪ, ಅಮ್ಮ, ಅಣ್ಣ, ಅಕ್ಕಗಳ ಮಾದರಿಯಲ್ಲಿ ವ್ಯಕ್ತಿನಾಮಗಳಲ್ಲಿ ಬಳಕೆಯಾಗಿಲ್ಲ. 'ರಾಮಮಾವ', 'ರಾಮತ್ತೆ' ಎಂಬ ವ್ಯಕ್ತಿನಾಮಗಳಿಲ್ಲ. ಆದರೆ, 'ಮಾವಯ್ಯ', ಅತ್ತ್ಯಮ್ಮ' ಎಂಬ ರೂಪಗಳು ರಕ್ತಸಂಬಂಧಿ ವಲಯದಲ್ಲಿ ಮಾತ್ರ ಸಂಬಂಧವಾಚಕಗಳಾಗಿ ಮತ್ತು ಸಂಬೋಧನಾ ರೂಪಗಳಾಗಿ ಬಳಕೆಯಲ್ಲಿವೆ.

ಇದಕ್ಕೆ ಕಾರಣವನ್ನು ಪರಿಶೀಲಿಸುವುದಾದರೆ, ಈ ಅತ್ತೆ, ಮಾವ ರೂಪಗಳು ಅಪ್ಪ, ಅಮ್ಮ, ಅಕ್ಕ, ಅಣ್ಣ, ಅಯ್ಯ, ಅವ್ವಗಳಂತೆ ಕುಟುಂಬವಲಯದ ಆಚೆ ಸಾಮಾಜಿಕವಾಗಿ ಗೌರವಸೂಚಕಗಳಾಗಿ ಬಳಕೆಯಾಗಿಲ್ಲದ ಕಾರಣ ಇಂತಹ ಸಂಬಂಧವಾಚಕಗಳು ವ್ಯಕ್ತಿನಾಮಗಳ ವಾರ್ಗಿಕಗಳಲ್ಲಿ ಬಳಕೆಯಾಗಿಲ್ಲದೆ ಇರಬಹುದು. ಅಲ್ಲದೆ, ಸಾರ್ವಜನಿಕವಾಗಿ ಅಪರಿಚಿತರನ್ನು ಅಪ್ಪ, ಅಣ್ಣ, ಅಮ್ಮ, ಅಕ್ಕ ಎಂದು ಗೌರವಪೂರ್ವಕವಾಗಿ ಸಂಬೋಧಿಸುವಂತೆ ಅತ್ತೆ, ಮಾವ ಮುಂತಾದ ರೂಪಗಳನ್ನು ಬಳಸಲಾಗುವುದಿಲ್ಲ. ಇಲ್ಲಿ ಸಂಬಂಧವಾಚಕಗಳ ಕೌಟುಂಬಿಕ ಮತ್ತು ಸಾಮಾಜಿಕ ವಲಯಗಳಲ್ಲಿನ ಬಳಕೆಯ ಮಿತಿಗಳು ಕಾರಣವಾಗುತ್ತವೆ. ಆಧುನಿಕ ಸಂದರ್ಭದಲ್ಲಿ ಯುವಕರು ರಕ್ತಸಂಬಂಧವಲಯದಾಚೆಗೆ 'ಮಾಮು' ಎಂಬ ರೂಪವನ್ನು ಬಳಸಿದರೂ ಅದು ಸಮವಯಸ್ಕ ಸ್ನೇಹಿತವಲಯಕ್ಕೆ ಮಾತ್ರ ಸೀಮಿತವಾಗುತ್ತದೆಯೇ ಹೊರತು ಎಲ್ಲರಿಗೂ ಬಳಸಲಾಗುತ್ತಿಲ್ಲ.

ಈಗ ಕೆಲವು ಸಂಬಂಧವಾಚಿ ವ್ಯಕ್ತಿನಾಮಗಳಲ್ಲಿನ ಲಿಂಗ ಸಂಬಂಧಿ ಆಯಾಮಗಳನ್ನು ಪರಿಶೀಲಿಸುವುದಾದರೆ,

| ಉದಾ: | **ಪುರುಷ** | – ಸ್ತ್ರೀ |
|---|---|---|
| | ಮಲ್ಲಣ್ಣ | – ಮಲ್ಲಕ್ಕ |
| | ಹನುಮಪ್ಪ | – ಹನುಮವ್ವ |

ಶಾಂತಪ್ಪ – ಶಾಂತಮ್ಮ
ಯಂಕಪ್ಪ – ಯಂಕಮ್ಮ
ನಾಗಪ್ಪ – ನಾಗಮ್ಮ
ಲಕ್ಷ್ಮಿನಾರಾಯಣಪ್ಪ – ಲಕ್ಷ್ಮಿನಾರಾಯಣಮ್ಮ

ಮೇಲಿನ ಉದಾಹರಣೆಗಳು ದಾಖಲಾದ ವ್ಯಕ್ತಿನಾಮಗಳು. ಇವುಗಳ ಬಳಕೆಯ ವಿವಿಧ ರೂಪಗಳಲ್ಲಿ ಲಿಂಗ ಭಿನ್ನತೆಯನ್ನು ಗುರುತಿಸಬಹುದು. ಉದಾಹರಣೆಗೆ ಯಂಕಪ್ಪ, ಯಂಕಮ್ಮ, ರೂಪಗಳನ್ನು ಪರಿಶೀಲಿಸುವುದಾದರೆ,

**ಪುರುಷ** – ಯಂಕ + ಅಪ್ಪ = ಯಂಕಪ್ಪ
**ಸ್ತ್ರೀ** – ಯಂಕ + ಅಮ್ಮ = ಯಂಕಮ್ಮ

ಇಲ್ಲಿ 'ಯಂಕ' ಎಂಬ ನಿರ್ದಿಷ್ಟ ಪುರುಷವಾಚಕದಲ್ಲಿದೆ. ಇದು ಸ್ತ್ರೀನಾಮ ನಿರ್ದಿಷ್ಟದಲ್ಲೂ ಕೂಡ ಯಂಕ ಎಂಬ ರೂಪದಲ್ಲೇ ಇದೆ. ಅಲ್ಲಿನ ವಾರ್ಗಿಕಗಳಾದ ಅಪ್ಪ, ಅಮ್ಮ, ರೂಪಗಳು ಲಿಂಗ ಭಿನ್ನತೆಯನ್ನು ಸೂಚಿಸುತ್ತಿವೆ. ಸಾಮಾಜಿಕ ಬಳಕೆಯ ರೂಪಗಳು ಸಾಮಾನ್ಯವಾಗಿ ನಿರ್ದಿಷ್ಟವನ್ನು ಅವಲಂಬಿಸಿರುತ್ತವೆ. ಇದನ್ನು ಎರಡು ರೀತಿಯಲ್ಲಿ ಗುರುತಿಸಬಹುದು.

ಉದಾ: ೧. **ಪುರುಷ** – ಯಂಕ ಬಾರೋ ಇಲ್ಲಿ.
**ಸ್ತ್ರೀ** – ಯಂಕಿ ಬಾರೇ ಇಲ್ಲಿ.
ಉದಾ: ೨. **ಪುರುಷ** – ಯಂಕು ಚೆನ್ನಾಗಿದ್ದೀಯಾ?
**ಸ್ತ್ರೀ** – ಯಂಕು ಚೆನ್ನಾಗಿದ್ದೀಯಾ?

ಉದಾಹರಣೆ ೧ ರಲ್ಲಿ 'ಯಂಕ' ರೂಪವನ್ನು 'ಇ' ಕಾರಾಂತ್ಯಗೊಳಿಸಿ ಸ್ತ್ರೀವ್ಯಕ್ತಿನಾಮವನ್ನು ಸಂಬೋಧಿಸಲಾಗಿದೆ. ಉದಾಹರಣೆ ೨ ರಲ್ಲಿ ಇಬ್ಬರಿಗೂ 'ಯಂಕು' ಎಂಬ ರೂಪವನ್ನು ಬಳಸಲಾಗಿದೆ. ಇಲ್ಲಿ ಲಿಂಗ ಭಿನ್ನತೆ ಇಲ್ಲ. ಆದರೆ, ಬಳಕೆಯ ರೂಪಗಳಾದ 'ಯಂಕ', ಯಂಕು'ಗಳನ್ನು ಸ್ತ್ರೀಯರ ನಿಜವ್ಯಕ್ತಿನಾಮಗಳಲ್ಲಿ ಇಡುವುದಿಲ್ಲ. 'ಯಂಕಮ್ಮ' ಎಂದೇ ಇಡುತ್ತಾರೆ. ಏಕೆಂದರೆ, ಬಳಕೆಯ ನೆಲೆಗಳಲ್ಲಿ ಮಾತ್ರ ಕೆಲವು ಸಂದರ್ಭಗಳಲ್ಲಿ ಲಿಂಗ ಭಿನ್ನತೆಗಳು ಕಂಡು ಬರುವುದಿಲ್ಲ.

ಸ್ತ್ರೀವಾಚಿ ನಿರ್ದಿಷ್ಟದ ಪುರುಷ ಹಾಗೂ ಸ್ತ್ರೀವ್ಯಕ್ತಿನಾಮಗಳನ್ನು ಪರಿಶೀಲಿಸುವುದಾದರೆ,

ಉದಾ: **ಪುರುಷ** – ಗಂಗಾ + ಅಪ್ಪ = ಗಂಗಪ್ಪ.
**ಸ್ತ್ರೀ** – ಗಂಗಾ + ಅಮ್ಮ = ಗಂಗಮ್ಮ.

ಮೇಲಿನ ಉದಾಹರಣೆಯಲ್ಲಿ 'ಗಂಗಾ' ಎಂಬ ನಿರ್ದಿಷ್ಟವು ಜಲವಾಚಿಯಾದರೂ ಭಾರತೀಯರು ನದಿಯನ್ನು ಹೆಣ್ಣಿಗೆ ಹೋಲಿಸುವುದರಿಂದ 'ಗಂಗಾ' ರೂಪವು ಸ್ತ್ರೀವಾಚಿಯಾಗಿ ಬಳಕೆಯಲ್ಲಿದೆ. ಈ ವ್ಯಕ್ತಿನಾಮದ ಬಳಕೆ ವಿವಿಧ ರೂಪವನ್ನು ಪರಿಶೀಲಿಸುವುದಾದರೆ,

ಉದಾ: ೧. **ಪುರುಷ** – ಗಂಗಾ ಬಾರೋ.

**ಸ್ತ್ರೀ** – ಗಂಗಿ ಬಾರೇ.

ಉದಾ: ೨. **ಪುರುಷ** – ಗಂಗಾ ಬಾ.

**ಸ್ತ್ರೀ** – ಗಂಗಾ ಬಾ.

ಉದಾ: ೩. **ಪುರುಷ** – ಗಂಗು ಎಲ್ಲಿದ್ದೀಯಾ?

**ಸ್ತ್ರೀ** – ಗಂಗು ಎಲ್ಲಿದ್ದೀಯಾ?

ಉದಾಹರಣೆ ೧ ರಲ್ಲಿ 'ಗಂಗಾ' ರೂಪವನ್ನು 'ಇ' ಕಾರಾಂತ್ಯಗೊಳಿಸಿ ಸ್ತ್ರೀವ್ಯಕ್ತಿನಾಮವನ್ನು ಬಳಸಲಾಗಿದೆ. ಉದಾಹರಣೆ ೨ ರಲ್ಲಿ ಪುರುಷ ಮತ್ತು ಸ್ತ್ರೀ ಇಬ್ಬರಿಗೂ 'ಗಂಗಾ' ರೂಪವನ್ನು ಬಳಸಲಾಗಿದೆ. ಉದಾಹರಣೆ ೩ ರಲ್ಲಿ ಇಬ್ಬರಿಗೂ 'ಗಂಗೂ' ಎಂಬ ರೂಪವನ್ನು ಬಳಸಲಾಗಿದೆ. ಆದರೆ ಉದಾಹರಣೆ ೨ರಲ್ಲಿ ಬಳಕೆಯಾದಂತೆ ಪುರುಷರಿಗೆ 'ಗಂಗಾ' ಎಂದು ನಿಜವ್ಯಕ್ತಿನಾಮವನ್ನು ಇಡುವುದಿಲ್ಲ. ಬದಲಿಗೆ ಗಂಗಯ್ಯ, ಗಂಗಪ್ಪ, ಗಂಗಾಧರ ಎಂಬಂತಹ ರೂಪಗಳನ್ನು ಇಡುತ್ತಾರೆ. ಆದರೆ, ಸ್ತ್ರೀಯರಿಗೆ ನಿಜನಾಮವಾಗಿ ಕೇವಲ 'ಗಂಗಾ' ಎಂಬ ರೂಪವನ್ನು ಇಡುತ್ತಾರೆ.

ವಿಷಯವಾಚಿ ನಿರ್ದಿಷ್ಟದ ವ್ಯಕ್ತಿನಾಮಗಳ ದಾಖಲೆ ರೂಪಗಳ ಹಾಗೂ ಬಳಕೆಯ ರೂಪಗಳನ್ನು ಪರಿಶೀಲಿಸುವುದಾದರೆ,

ಉದಾ: **ಪುರುಷ** – ಶಾಂತ + ಅಪ್ಪ = ಶಾಂತಪ್ಪ

**ಸ್ತ್ರೀ** – ಶಾಂತ + ಅಮ್ಮ = ಶಾಂತಮ್ಮ

ಮೇಲಿನ ಉದಾಹರಣೆಗಳಲ್ಲಿ 'ಶಾಂತ' ಎಂಬ ನಿರ್ದಿಷ್ಟವು ಪುರುಷ ಮತ್ತು ಸ್ತ್ರೀಯರಿಗೆ ಸಮಾನವಾಗಿ ಬಳಕೆಯಾಗಿದೆ. 'ಶಾಂತ' ಎಂಬುದು ಒಂದು ಮನಃಸ್ಥಿತಿಯ ವಿಷಯ. ಇಲ್ಲಿನ ಅಪ್ಪ, ಅಮ್ಮ ಸಂಬಂಧವಾಚಿ ವಾರ್ಗಿಕಗಳು ಲಿಂಗಭಿನ್ನತೆಯನ್ನು ಸೂಚಿಸುತ್ತಿವೆ. ಇದರ ವಿವಿಧ ಬಳಕೆಯ ರೂಪಗಳನ್ನು ಪರಿಶೀಲಿಸುವುದಾದರೆ,

| ಉದಾ: | **ಪುರುಷ** | – | **ಸ್ತ್ರೀ** |
|---|---|---|---|
| | ೧. ಶಾಂತ | – | ಶಾಂತಿ |
| | ೨. ಶಾಂತಾ | – | ಶಾಂತಾ |
| | ೩. ಶಾಂತು | – | ಶಾಂತು |

ಉದಾಹರಣೆ ೧ ರಲ್ಲಿ 'ಶಾಂತ' ರೂಪವನ್ನು 'ಇ' ಕಾರಾಂತ್ಯಗೊಳಿಸಿ ಸ್ತ್ರೀನಾಮವಾಗಿ ಸಂಬೋಧಿಸಲಾಗಿದೆ. ಉದಾಹರಣೆ ೨ ರಲ್ಲಿ ಪುರುಷ ಮತ್ತು ಸ್ತ್ರೀ ಇಬ್ಬರಿಗೂ 'ಶಾಂತಾ' ಎಂಬ ರೂಪವನ್ನು ಬಳಸಲಾಗಿದೆ. ಇಲ್ಲಿ ಲಿಂಗಭಿನ್ನತೆ ಇಲ್ಲ. ಮೂರನೆಯ ಉದಾರಣೆಯಲ್ಲಿ ಇಬ್ಬರಿಗೂ 'ಶಾಂತು' ರೂಪವನ್ನು ಬಳಸಿ ಸಂಬೋಧಿಸಲಾಗಿದೆ. ಇಲ್ಲಿ ಕೂಡ ಲಿಂಗಭಿನ್ನತೆ ಇಲ್ಲ. ಆದರೆ ನಿಜನಾಮಗಳನ್ನು ಇಡುವಲ್ಲಿ ಸ್ತ್ರೀಯರಿಗೆ 'ಶಾಂತಾ', 'ಶಾಂತಿ' ಎರಡು ರೂಪಗಳನ್ನು ಇಡುತ್ತಾರೆ.

ಪುರುಷರಿಗೆ 'ಶಾಂತ' ಎಂಬ ರೂಪವಷ್ಟನ್ನೇ ಇಡದೆ ಶಾಂತಪ್ಪ, ಶಾಂತರಾಜು, ಮುಂತಾದ ವಾರ್ಗಿಕಗಳನ್ನು ಸೇರಿಸಿ ನಿಜನಾಮಗಳನ್ನು ಇಡುತ್ತಾರೆ.

ಸಂಬಂಧವಾಚಕಗಳು ವ್ಯಕ್ತಿನಾಮಗಳ ಭಾಗವಾಗಿ ಬಳಕೆಯಾದಾಗ ಅಲ್ಲಿನ ಭಿನ್ನತೆಗಳನ್ನು ಗಮನಿಸುವುದು ಒಂದು ಮಾದರಿಯಾದರೆ, ನಿಜನಾಮಗಳ ಹೊರತಾಗಿ ಸಂಬಂಧವಾಚಿ ನಾಮಗಳಿಗೆ ಭಿನ್ನ ಆಯಾಮಗಳಿವೆ. ಅವುಗಳನ್ನು ಈ ಕೆಳಕಂಡಂತೆ ಗುರುತಿಸಬಹುದು.

ಉದಾ: ೧. ವರ್ಗಾಧಾರಿತ.
೨. ವಯೋ ಆಧಾರಿತ.
೩. ಹುದ್ದೆ ಆಧಾರಿತ.

ಈ ಹಿಂದೆ ಚರ್ಚಿಸಿದಂತೆ ಸಾಮಾಜಿಕವಾಗಿ ವ್ಯಕ್ತಿಗಳಿಗೆ ಗೌರವಸೂಚಿಸುವ ಹಿನ್ನೆಲೆಯಲ್ಲಿ ಸಂಬಂಧವಾಚಕಗಳ ಪಾತ್ರ ಪ್ರಮುಖವಾದದ್ದು. ಮೇಲ್ವರ್ಗದ ವ್ಯಕ್ತಿನಾಮಗಳು ಉದಾ: 'ಶಂಕರ', 'ಲಕ್ಷ್ಮಿ' ಎಂದಿದ್ದರೆ ಅವರಿಗಿಂತ ಕೆಳವರ್ಗದಲ್ಲಿರುವವರು ಹಿರಿಯರಾಗಿರಲಿ, ಕಿರಿಯರಾಗಿರಲಿ ಅವರನ್ನು ಹೆಸರಿಸುವುದು 'ಶಂಕ್ರಪ್ಪ', 'ಲಕ್ಷ್ಮವ್ವ' ಎಂದು. ಅದೇ ಕೆಳವರ್ಗದ ವ್ಯಕ್ತಿನಾಮಗಳು 'ತಿಮ್ಮಪ್ಪ', 'ಸಾಕವ್ವ' ಎಂದಿದ್ದರೂ ಮೇಲ್ವರ್ಗದ ಹಿರಿಯರು, ಕಿರಿಯರು, 'ತಿಮ್ಮ', 'ಸಾಕಿ' ಎಂದು ಬಳಸುವ ಒಂದು ಮಾದರಿ ಸಮಾಜದಲ್ಲಿದೆ.

ಸಾಮಾಜಿಕ ಸಂರಚನೆಯಲ್ಲಿ ಹಿರಿಯರಿಗೆ ಗೌರವ ಸೂಚಕ ರೂಪಗಳನ್ನು ಬಳಸಬೇಕು ಎಂಬ ನಿಯಮವಿರುತ್ತದೆ. ಹಿರಿಯ ವ್ಯಕ್ತಿಗಳ ನಿಜನಾಮಗಳು ಬಸವರಾಜ, ಸಾವಿತ್ರಿ ಎಂದಿದ್ದರು ಬಸವಪ್ಪ, ಬಸವಯ್ಯ, ಬಸಣ್ಣ, ಬಸಜ್ಜ, ಸಾವಿತ್ರಮ್ಮ, ಸಾವಿತ್ರಕ್ಕ, ಸಾವಿತ್ರಜ್ಜಿ ಎಂಬಂತಹ ಬಳಕೆಯ ರೂಪಗಳಿರುವುದನ್ನು ಗಮನಿಸಬಹುದು. ಆಧುನಿಕ ಸಂದರ್ಭದಲ್ಲಿ ವ್ಯಕ್ತಿ ಯಾವುದೇ ವರ್ಗ, ಜಾತಿ, ಧರ್ಮದವನಾಗಿದ್ದರೂ ಅವರು ಉನ್ನತ ಹುದ್ದೆಯಲ್ಲಿದ್ದರೆ ಅಲ್ಲಿಯೂ ನಿಜನಾಮದ ಬಳಕೆಯ ರೂಪಗಳ ಬದಲಾಗುತ್ತವೆ. ಉದಾಹರಣೆಗೆ ಒಬ್ಬ ಕೆಳಜಾತಿಯ ವ್ಯಕ್ತಿ ಉನ್ನತ ಅಧಿಕಾರಿಯಾಗಿದ್ದರೆ ಅವರ ಹೆಸರು ಶೇಖರ್ ಎಂದಿದ್ದರೆ ಶೇಖ್ರಪ್ಪ, ಶೇಖ್ರಣ್ಣ ಎಂಬಂತಹ ರೂಪಗಳು ಬಳಕೆಯಲ್ಲಿರುತ್ತವೆ.

**೪.೧.೧. ವೃತ್ತಿ ಅಥವಾ ಜಾತಿ ಸೂಚಕ ವ್ಯಕ್ತಿನಾಮಗಳು ಮತ್ತು ಲಿಂಗಭಿನ್ನತೆ**

ವೃತ್ತಿ ಸೂಚಕಗಳೇ ಕಾಲಾಂತರದಲ್ಲಿ ಜಾತಿವಾಚಕಗಳಾಗಿ ರೂಢಿಗೆ ಬಂದಿವೆ. ತಮ್ಮ ಕೆಲಸದ ಅಥವಾ ಜಾತಿಯ ಮುಖಾಂತರ ತಮ್ಮನ್ನು ಗುರುತಿಸುವಿಕೆಯ ಪ್ರವೃತ್ತಿ ಬೆಳೆದುದರ ಪರಿಣಾಮವಾಗಿ ವೃತ್ತಿ ಅಥವಾ ಜಾತಿವಾಚಕಗಳು ವ್ಯಕ್ತಿನಾಮಗಳ ಭಾಗಗಳಾಗಿ ಬಳಕೆಯಾಗಲು ಪ್ರಾರಂಭವಾದವು. ವ್ಯಕ್ತಿಯನ್ನು ಗುರುತಿಸುವಿಕೆಯ ಜೊತೆಗೆ ವ್ಯಕ್ತಿನಾಮಗಳ ಕೆಲಸ ವೃತ್ತಿ, ಜಾತಿಗಳನ್ನು ಗುರುತಿಸುವುದರೆಡೆಗೆ ವಿಸ್ತಾರವಾಯಿತು.

ವೃತ್ತಿ ಅಥವಾ ಜಾತಿ ಸೂಚಕ ವ್ಯಕ್ತಿನಾಮಗಳಲ್ಲಿನ ಲಿಂಗಭಿನ್ನತೆಯನ್ನು ಎರಡು ಮಾದರಿಗಳಲ್ಲಿ ನೋಡಬಹುದು.

ಮಾದರಿ – ೧. ಪುರುಷರ ಹೆಸರಿನ ಜೊತೆ ಮಾತ್ರ ವೃತ್ತಿ, ಜಾತಿ ಸೂಚಕಗಳನ್ನು ಸೇರಿಸುವಿಕೆ.

ಉದಾ: ತಂದೆ – ರಾಮಕೃಷ್ಣೇಗೌಡ

ತಾಯಿ – ಸರಸ್ವತಿ

ಮಗ – ಚೇತನ್ ಗೌಡ

ಸೊಸೆ – ಲಕ್ಷ್ಮಿ

ಮಗಳು – ಚೈತ್ರ

ಮಗಳು – ವಿನುತ

ಮಾದರಿ – ೨. ಪುರುಷ, ಸ್ತ್ರೀ ಇಬ್ಬರ ಹೆಸರಿನ ಜೊತೆಯೂ ವೃತ್ತಿ ಅಥವಾ ಜಾತಿ ವಾಚಕಗಳನ್ನು ಸೇರಿಸುವಿಕೆ.

ಉದಾ: ತಂದೆ – ಮುನಿಸ್ವಾಮಿ ಬಣಕಾರ್

ತಾಯಿ – ಪದ್ಮ ಬಣಕಾರ್

ಮಗ – ಪ್ರಮೋದ್ ಬಣಕಾರ್

ಮಗಳು – ಸುಷ್ಮ ಬಣಕಾರ್

ಮಗಳು – ಮಧು ಬಣಕಾರ್

ಜಾತಿ ಅಥವಾ ವೃತ್ತಿವಾಚಕಗಳು ಕುಟುಂಬ ನಾಮಗಳಾಗಿ ಒಂದು ಹಂತದವರೆಗೂ ಕೇವಲ ಪುರುಷರ ಹೆಸರುಗಳ ಜೊತೆಗೆ ಮಾತ್ರ ಸೇರಿಸಲಾಗುತ್ತಿತ್ತು. ಈಗಲೂ ಕೆಲವು ಕುಟುಂಬಗಳು ಈ ಪದ್ಧತಿಯನ್ನು ಮುಂದುವರಿಸುತ್ತಿವೆ. ಇದಕ್ಕೆ ಕಾರಣ ಮಹಿಳೆ ಕೇವಲ ಕೆಲವು ವಲಯಕ್ಕೆ ಮಾತ್ರ ಸೀಮಿತವಾದದ್ದಾಗಿರಬಹುದು. ಸಾಮಾಜಿಕ ವ್ಯವಹಾರಗಳಲ್ಲಿ ಪುರುಷ ಮಾತ್ರ ಪಾಲ್ಗೊಳ್ಳುತ್ತಿರುವುದಾಗಿರಬಹುದು. ಸಮಾಜದಲ್ಲಿ ಗುರುತಿಸುವಿಕೆಯ ಉದ್ದೇಶವಿರಬಹುದು. ವಂಶವನ್ನು ಮುಂದುವರೆಸುವವ ಪುರುಷನೆಂಬ ನಂಬಿಕೆ ಕಾರಣವಾಗಿರಬಹುದು. ಇದಕ್ಕೆ ಮಾದರಿ ಒಂದು ಉದಾಹರಣೆಯಾಗಿದೆ.

ಆದರೆ ಬದಲಾದ ಕಾಲಘಟ್ಟದಲ್ಲಿ ಪ್ರಸ್ತುತ ಕೆಲವು ಕುಟುಂಬಗಳು ಸ್ತ್ರೀಯರ ಹೆಸರಿನ ಜೊತೆಯೂ ಜಾತಿ ಅಥವಾ ವೃತ್ತಿವಾಚಿಗಳನ್ನು ಸೇರಿಸುತ್ತಿದ್ದಾರೆ. ಇದಕ್ಕೆ ಕಾರಣ ಗಂಡು ಮತ್ತು ಹೆಣ್ಣನ್ನು ಸಮಾನ ದೃಷ್ಟಿಯಲ್ಲಿ ನೋಡುವ ಮನಃಸ್ಥಿತಿ ಇರಬಹುದು. ಇದಕ್ಕೆ ಮಾದರಿ ಎರಡು ಉದಾಹರಣೆಯಾಗಿದೆ.

ವ್ಯಕ್ತಿನಾಮಗಳಲ್ಲಿ ಬಳಕೆಯಾಗಿರುವ ವೃತ್ತಿ ಅಥವಾ ಜಾತಿವಾಚಕಗಳನ್ನು ನಾಲ್ಕು ಮಾದರಿಗಳಲ್ಲಿ ಗುರುತಿಸಬಹುದು.

೧. ವ್ಯಕ್ತಿನಾಮಗಳ ಪೂರ್ವದಲ್ಲಿ

೨. ವ್ಯಕ್ತಿನಾಮಗಳ ಉತ್ತರದಲ್ಲಿ

೩. ಪೂರ್ಣವ್ಯಕ್ತಿನಾಮವೇ ಜಾತಿ ಅಥವಾ ವೃತ್ತಿವಾಚಿಯಾಗಿರುವುದು

೪. ಇನಿಶಿಯಲ್ ರೂಪದಲ್ಲಿ ಬಳಸುವಿಕೆ

೧. ವ್ಯಕ್ತಿನಾಮಗಳ ಪೂರ್ವದಲ್ಲಿ

| ಉದಾ: | | ಪುರುಷ | – | ಸ್ತ್ರೀ |
|---|---|---|---|---|
| | ೧. | ಅಗಸರ ನಾಗಣ್ಣ | – | ಅಗಸರ ಚನ್ನಮ್ಮ |
| | ೨. | ಭೋವಿ ಭೀಮಣ್ಣ | – | ಭೋವಿ ನೀಲಮ್ಮ |
| | ೩. | ಲಿಂಗಾಯಿತ ಬಸಪ್ಪ | – | ಬಣಕಾರ ಹಾಲಮ್ಮ |
| | ೪. | ದಾಸರ ನಾಗರಾಜ | – | ಅಯ್ನೋರ ಈರಮ್ಮ |
| | ೫. | ಕುಂಬಾರ ಅಮರೇಶಿ | – | ಗೊಲ್ಲರ ಪ್ರೇಮಕ್ಕ |
| | ೬. | ಮಡಿವಾಳ ಕಲ್ಲೇಶಿ | – | ನಾಯಕರ ಬಸಮ್ಮ |
| | ೭. | ಬೇಲ್ದಾರ ಅಮರೇಶ್ | – | ಭೋವಿ ಶಾಂತಮ್ಮ |
| | ೮. | ಪೂಜಾರಿ ಲೋಕೇಶ್ | – | ಪೂಜಾರಿ ಲಕ್ಷ್ಮಮ್ಮ |

೨. ವ್ಯಕ್ತಿನಾಮಗಳ ಉತ್ತರ ಭಾಗವಾಗಿ ಬಳಕೆಯಾಗಿರುವ ಜಾತಿ ಅಥವಾ ವೃತ್ತಿವಾಚಿಗಳು ಈ ಕೆಳಕಂಡಂತಿವೆ

| ಉದಾ: | ಪುರುಷ | | ಸ್ತ್ರೀ |
|---|---|---|---|
| ೧. | ಗುಂಡುರಾವ್ ದೇಸಾಯಿ | – | ಅಡಿವೆಮ್ಮ ದಾಸರ |
| ೨. | ವೆಂಕಟೇಶ ಶೆಟ್ಟಿ | – | ಗಂಗಮ್ಮ ವಡ್ರ |
| ೩. | ರಾಜಪ್ಪ ದಳವಾಯಿ | – | ಸರಸ್ವತಿ ಈಡಿಗರ |
| ೪. | ಶೇಖರ್ ತಳವಾರ್ | – | ಮಂಗಳಮ್ಮ ಗೊಲ್ಲರ |
| ೫. | ಕರಿಯಪ್ಪ ಅಗಸರ | – | ದೇವಿರತ್ನ ನಾಯಕರ |
| ೬. | ಮಾನಪ್ಪ ಆಚಾರ್ | – | ಶೈಲಜ ದೇಸಾಯಿ |
| ೭. | ಕೆಂಚಪ್ಪ ಹರಿಜನ್ | – | ನೀಲಮ್ಮ ಭೋವಿ |
| ೮. | ಮಹದೇವ ಗೌಡ | – | ತನುಷ ಗೌಡ |

ಈ ಮೇಲಿನ ಎರಡು ಮಾದರಿಗಳನ್ನು ಗಮನಿಸಿದರೆ, ಒಂದು ರೀತಿಯ ವಿವರಣಾತ್ಮಕ ಮಾದರಿಯಲ್ಲಿ ವ್ಯಕ್ತಿನಾಮಗಳಿವೆ. ಇದಕ್ಕೆ ಕಾರಣಗಳನ್ನು ಪರಿಶೀಲಿಸುವುದಾದರೆ,

೧. ಸಾಮಾಜಿಕ ಬಳಕೆಯ ರೂಪಗಳು ದಾಖಲಾಗಿರುವ ಒಂದು ಸಾಧ್ಯತೆ ಇದೆ. ಇದು ವ್ಯಕ್ತಿನಾಮಗಳ ದಾಖಲಾತಿಯ ಸಂದರ್ಭದಲ್ಲಿ ಉಂಟಾಗಿರುವ ತೊಡಕಾಗಿರಬಹುದು. ಸರ್ಕಾರಿ ಪ್ರತಿನಿಧಿಗಳು ಎಲ್ಲೋ ಒಂದು ಕಡೆ ಕುಳಿತು ಆ ಪರಿಸರದ ವ್ಯಕ್ತಿನಾಮಗಳನ್ನು ದಾಖಲಿಸುತ್ತಿರುವಾಗ ಯಾರೋ ಒಬ್ಬರು ಎಲ್ಲರ ವ್ಯಕ್ತಿನಾಮಗಳನ್ನು ಹೇಳುವ ಸಂದರ್ಭದಲ್ಲಿ ಬಳಕೆಯ ರೂಪಗಳು ದಾಖಲಾಗಿರುವ ಸಾಧ್ಯತೆಯು ಉಂಟು. ಉದಾ: ಒಂದು ಪರಿಸರದಲ್ಲಿ ಚೆನ್ನಮ್ಮ ಎಂಬ ಮಹಿಳೆ ಇದ್ದಿರಬಹುದು. ಅವಳು ಅಗಸರ ಸಮುದಾಯಕ್ಕೆ ಸೇರಿದವಳಾಗಿರಬಹುದು. ಆ ಪರಿಸರದಲ್ಲಿ ಅವಳನ್ನು 'ಅಗಸರ ಚೆನ್ನಮ್ಮ' ಎಂದು ಗುರುತಿಸುತ್ತಿರುತ್ತಾರೆ. ಆದರೆ, ಅವಳ ನಿಜನಾಮ ಚೆನ್ನಮ್ಮ ಎಂದಷ್ಟೇ ಇರುತ್ತದೆ.

೨. ಭಾರತದಂತಹ ಸಮಾಜದಲ್ಲಿ ಜಾತಿ, ವೃತ್ತಿ, ಧರ್ಮಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಡುತ್ತಾರೆ. ಇವುಗಳನ್ನು ವ್ಯಕ್ತಿಗಳ ಬಹಳ ಮುಖ್ಯವಾದ ಐಡೆಂಟಟಿ ಮಾರ್ಕರ್ ಆಗಿ ಬಳಸಲಾಗುತ್ತಿದೆ. ಸ್ವ ಇಚ್ಛೆಯಿಂದ ಕೂಡ ಮೇಲಿನ ಮಾದರಿಯ ವ್ಯಕ್ತಿನಾಮಗಳು ಬಳಕೆಗೆ ಬಂದಿರಬಹುದು. ಇದು ಮೇಲಿನ ಮಾದರಿಯ ವ್ಯಕ್ತಿನಾಮಗಳ ರಚನೆಯ ಮತ್ತೊಂದು ಸಾಧ್ಯತೆ.

ಪೂರ್ಣ ವ್ಯಕ್ತಿನಾಮವೇ ಜಾತಿ ಅಥವಾ ವೃತ್ತಿಸೂಚಕವಾಗಿರುವ ಮಾದರಿಗಳು ಕೂಡ ದೊರೆಯುತ್ತವೆ.
ಉದಾ: ಗೌಡ + ಅಪ್ಪ = ಗೌಡಪ್ಪ.

ರೆಡ್ಡಿ + ಅಪ್ಪ = ರೆಡ್ಡಿಯಪ್ಪ.

ಇಂತಹ ರೂಪಗಳು ಸ್ತ್ರೀವ್ಯಕ್ತಿನಾಮಗಳಲ್ಲಿ ದೊರೆಯುವುದಿಲ್ಲ. ಸಾಮಾಜಿಕ ಬಳಕೆಯ ರೂಪಗಳಲ್ಲಿ 'ಗೌಡತಿ', 'ರೆಡ್ಡಿಯಮ್ಮ' ಎಂಬ ಬಳಕೆಗಳಿವೆ. ಆದರೆ, ಅವು ಅವರ ನಿಜನಾಮಗಳಲ್ಲ. 'ಗೌಡನ ಹೆಂಡತಿ', 'ರೆಡ್ಡಿಯ ಜಾತಿಯವಳು' ಎಂಬಂತಹ ಹಿನ್ನಲೆಯಲ್ಲಿ ಬಳಕೆಯಾಗುತ್ತಿರುತ್ತಿರುತ್ತವೆಯೇ ಹೊರತು, ಪುರುಷರಿಗಿರುವಂತೆ ಜಾತಿ ಮತ್ತು ವೃತ್ತಿ ಸೂಚಕ ಪೂರ್ಣವ್ಯಕ್ತಿನಾಮಗಳನ್ನು ಸ್ತ್ರೀಯರಿಗೆ ಬಳಸಲಾಗಿಲ್ಲ.

ಆಧುನಿಕ ಸಂದರ್ಭದಲ್ಲಿನ ವ್ಯಕ್ತಿನಾಮಗಳಲ್ಲಿ ಕೆಲವು ಇನಿಶಿಯಲ್‌ಗಳನ್ನು ಬಳಸಲಾಗುತ್ತಿದೆ. ಇವು ತಂದೆಯ ಹೆಸರಿನ ಮೊದಲಾಕ್ಷರ, ಜಾತಿ ಅಥವಾ ವೃತ್ತಿ ಸೂಚಕ ಮತ್ತು ಮನೆತನದ ಹೆಸರುಗಳನ್ನು ಒಳಗೊಂಡಿರುತ್ತವೆ. ಮೊದಲು ಜಾತಿ ಅಥವಾ ವೃತ್ತಿ ಸೂಚಕಗಳನ್ನು ಪೂರ್ಣಪ್ರಮಾಣದಲ್ಲಿ ವ್ಯಕ್ತಿನಾಮಗಳಲ್ಲಿ ಇಟ್ಟುಕೊಳ್ಳುತ್ತಿದ್ದರೆ, ಈಗ ಅವುಗಳನ್ನು ಇನಿಶಿಯಲ್ ರೂಪಗಳಲ್ಲಿ ಇಟ್ಟುಕೊಳ್ಳಲಾಗುತ್ತಿದೆ.

| ಉದಾ: | ಈಶ್ವರ. ವಿ | – | ವಡ್ಡರು |
|---|---|---|---|
| | ಚಂದ್ರಶೇಖರ್. ಬಿ | – | ಭೋವಿ |
| | ಎನ್. ಮಂಜುನಾಥ | – | ನಾಯಕರು |
| | ಕೆ. ದೊಡ್ಡಮಲ್ಲೇಶಪ್ಪ | – | ಕುರುಬರು |
| | ಎಸ್.ಆರ್. ಮಲ್ಲಿಕಾರ್ಜುನಗೌಡ | – | ಸುಗ್ಗೇನಹಳ್ಳಿ ರೆಡ್ಡಿ |
| | ಕವಿತ. ಎನ್ | – | ನಾಯಕ |
| | ಲಕ್ಷ್ಮಮ್ಮ. ವಿ | – | ವಡ್ಡರು |
| | ಶಿಲ್ಪ. ಕೆ | – | ಕುರುಬರು |
| | ಸುಕನ್ಯ. ಬಿ | – | ಭೋವಿ |
| | ಸಲೀಂ. ಎಂ | – | ಮುಸ್ಲಿಂ |

ಮೇಲಿನ ಉದಾಹರಣೆಗಳನ್ನು ಗಮನಿಸಿದರೆ ಕೆಲವು ಕೆಳಜಾತಿಯವರು ಮಾತ್ರ ಗಂಡು ಮತ್ತು ಹೆಣ್ಣು ಮಕ್ಕಳು ಇಬ್ಬರಿಗೂ ತಮ್ಮ ಜಾತಿವಾಚಿಗಳನ್ನು ಇನಿಶಿಯಲ್ ರೂಪಗಳಲ್ಲಿ ಮಕ್ಕಳ ಹೆಸರಿನ ಜೊತೆಯಲ್ಲಿ ಸೇರಿಸುತ್ತಿದ್ದಾರೆ. ಇದಕ್ಕೆ ಕಾರಣವನ್ನು ಪರಿಶೀಲಿಸುವುದಾದರೆ, ಜಾತಿವಾಚಿ ವ್ಯಕ್ತಿನಾಮಗಳು ಮಕ್ಕಳಿಗೆ ಶಾಲೆಯಲ್ಲಿ ಮುಜುಗರದ ವಿಷಯವಾಗಿರುವುದರಿಂದ ಇನಿಶಿಯಲ್ ರೂಪದಲ್ಲಿ ಬಳಕೆ

ಮಾಡುತ್ತಿರುವ ಒಂದು ಸಾಧ್ಯತೆ ಉಂಟು. ಮೇಲಿನ ಉದಾಹರಣೆಯಲ್ಲಿರುವ ಎಸ್.ಆರ್. ಮಲ್ಲಿಕಾರ್ಜುನ್ ಗೌಡ ಇವರು ಲಿಂಗಾಯಿತ ಸಮುದಾಯದವರು ಇವರಲ್ಲಿ ಪುರುಷರಿಗೆ ಮಾತ್ರ ಎಸ್.ಆರ್. ಎಂಬ ಇನಿಶಿಯಲ್‌ಗಳನ್ನು ಸೇರಿಸುತ್ತಾರೆ. ಸ್ತ್ರೀಯರಿಗೆ ಸೇರಿಸುವುದಿಲ್ಲ. ಕಾರಣವನ್ನು ಕೇಳಿದರೆ, ಹೆಣ್ಣು ಮಕ್ಕಳು ಬೇರೆಮನೆಗೆ ಹೋಗುತ್ತಾರೆ. ನಮ್ಮ ಮನೆತನವನ್ನು ಮುಂದುವರಿಸುವವರು ಗಂಡು ಮಕ್ಕಳು ಮಾತ್ರ. ಹಾಗಾಗಿ ಗಂಡು ಮಕ್ಕಳಿಗೆ ಮಾತ್ರ ಸೇರಿಸುತ್ತೇವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಸಾಮಾಜಿಕ ಸಂರಚನೆಯ ವಿನ್ಯಾಸವು ಹೇಗೆ ವ್ಯಕ್ತಿನಾಮಗಳಲ್ಲಿನ ಭಿನ್ನತೆಗೆ ಕಾರಣವಾಗುತ್ತದೆ ಎಂಬುದಕ್ಕೆ ಇದೊಂದು ಉದಾಹರಣೆ. ಭಾರತೀಯರಲ್ಲಿ ನಿಜನಾಮಕ್ಕಿಂತ ವೃತ್ತಿ ಸೂಚಕಗಳೇ ಪ್ರಧಾನವಾಗಿರುವ ವ್ಯಕ್ತಿನಾಮಗಳು ದೊರೆಯುತ್ತವೆ.

| ಉದಾ: | ವಿ.ಎಸ್. ಬಡಿಗೇರ್ | – | ವೀರೇಶ ಶಂಕ್ರಪ್ಪ ಬಡಿಗೇರ್ |
|---|---|---|---|
| | ಜೆ.ಎಚ್. ಪಟೇಲ್ | – | ಜಯದೇವಪ್ಪ ಹಾಲಪ್ಪ ಪಟೇಲ್ |
| | ಸಿ.ಎನ್. ಅಕ್ಕಸಾಲಿ | – | ಚಾಯಪ್ಪ ನಿಂಗಪ್ಪ ಅಕ್ಕಸಾಲಿಗ |
| | ವಿ.ಎಸ್. ಕಂಚುಗಾರ | – | ವೀರಭದ್ರಪ್ಪ ಸಿದ್ದಪ್ಪ ಕಂಚುಗಾರ |

ಮೇಲಿನ ವ್ಯಕ್ತಿನಾಮಗಳಲ್ಲಿ ನಿಜನಾಮ, ತಂದೆಯ ಹೆಸರು ಇನಿಶಿಯಲ್ ರೂಪಗಳಲ್ಲಿದ್ದು ವೃತ್ತಿ ವಾಚಿಗಳೇ ಪ್ರಧಾನವಾಗಿರುವುದನ್ನು ಗುರುತಿಸಬಹುದು. ಇಲ್ಲಿ ವೃತ್ತಿಯ ಜೊತೆಗೆ ತಂದೆಯ ಹೆಸರನ್ನು ಸೇರಿಸಿಕೊಂಡಿರುವುದನ್ನು ಗಮನಿಸಬಹುದು. ಇದಕ್ಕೆ ಕಾರಣವನ್ನು ಪರಿಶೀಲಿಸುವುದಾದರೆ, ತಂದೆ ಸಾಮಾಜಿಕವಾಗಿ ಹೆಚ್ಚು ಗುರುತಿಸಿಕೊಂಡಿರುವುದರ ಹಿನ್ನೆಲೆಯಲ್ಲಿ ಗಂಡು ಮಕ್ಕಳ ಐಡೆಂಟಿಯನ್ನು ಸುಲಭ ಮಾಡುವ ಉದ್ದೇಶ ಇಲ್ಲಿ ಸ್ಪಷ್ಟವಾಗುತ್ತದೆ. ಹೆಣ್ಣು ಮಕ್ಕಳಿಗೆ ಈ ರೀತಿಯ ವ್ಯಕ್ತಿನಾಮಗಳು ಬಳಕೆಯಲ್ಲಿಲ್ಲ.

ಆಧುನಿಕ ಸಂದರ್ಭಗಳಲ್ಲಿ ಮಹಿಳೆಯು ಸಮಾಜದಲ್ಲಿ ಪುರುಷನಷ್ಟೇ ಸಮರ್ಥಳಾಗಿ ಗುರುತಿಸಿಕೊಳ್ಳುತ್ತಾಳೆ. ಕಾರಣ ಅವಳ ಭಾಗವಹಿಸುವಿಕೆಯ ಅವಕಾಶಗಳು ಇಂದು ವಿಸ್ತರಿಸಿವೆ. ಈ ಹಿನ್ನೆಲೆಯಲ್ಲಿ ಕೆಲವು ವ್ಯಕ್ತಿನಾಮಗಳನ್ನು ಪರಿಶೀಲಿಸಬಹುದು:

ಉದಾ: ೧. ಸೌಂದರ್ಯ ಜಯಮಾಲ

೨. ಶ್ರಾವ್ಯ ರೇಖಾದಾಸ್

೩. ಅಶ್ವಿನಿ ವಿಜಯ ಮಠ್

೪. ಶ್ವೇತಾ ಎಸ್.ಆರ್.

ಮೇಲಿನ ಮೊದಲ ಎರಡು ಉದಾಹರಣೆಗಳು ಜನಪ್ರಿಯ ಚಿತ್ರತಾರೆಗಳಾದ ಜಯಮಾಲ ಮತ್ತು ರೇಖಾದಾಸ್‌ರವರ ಹೆಣ್ಣುಮಕ್ಕಳ ಹೆಸರುಗಳು. ಇಲ್ಲಿ ಅವರ ತಂದೆಯರಿಗಿಂತ ತಾಯಿಯಂದಿರು ಸಮಾಜದಲ್ಲಿ ಗುರುತಿಸಿಕೊಂಡಿರುವುದರಿಂದ ತಮ್ಮ ಮಕ್ಕಳ ಐಡೆಂಟಿಟಿಗೆ ತಾಯಿಯರ ಹೆಸರುಗಳನ್ನು ವ್ಯಕ್ತಿನಾಮಗಳಲ್ಲಿ ಸೇರಿಸಲಾಗಿದೆ. ಒಂದು ಕಾಲಘಟ್ಟದವರೆಗೂ ತಂದೆಯ ಹೆಸರನ್ನು ಮಾತ್ರ ಮಕ್ಕಳ ಹೆಸರಿನ ಜೊತೆಯಲ್ಲಿ

ಸೇರಿಸಲಾಗುತ್ತಿತ್ತು. ಅದರಲ್ಲಿಯೂ ಗಂಡು ಮಕ್ಕಳ ಹೆಸರಿಗೆ ಮಾತ್ರ ಸೇರಿಸಲಾಗುತ್ತಿತ್ತು. ಕಾಲಾಂತರದಲ್ಲಿ ಈ ದೃಷ್ಟಿಕೋನದಲ್ಲಿ ಸ್ವಲ್ಪ ಬದಲಾವಣೆ ಉಂಟಾಗಿ, ಹೆಣ್ಣು ಮಕ್ಕಳ ಹೆಸರಿನ ಜೊತೆಯಲ್ಲಿಯೂ ತಂದೆಯ ಹೆಸರನ್ನು ಸೇರಿಸುವ ಪರಿಪಾಠ ಶುರುವಾಯಿತು.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ತಂದೆಯ ಹೆಸರು ಅಥವಾ ತಾಯಿಯ ಹೆಸರು ಮುಖ್ಯ ಎನ್ನುವುದಕ್ಕಿಂತ ಅಥವಾ ಲಿಂಗತಾರತಮ್ಯದ ಪರಿಕಲ್ಪನೆಯನ್ನು ಹೇರುವುದಕ್ಕಿಂತ ಸಮಾಜದಲ್ಲಿ ತನ್ನ ಕುಟುಂಬದಲ್ಲಿ ಯಾರು ಹೆಚ್ಚು ಗುರುತಿಸಿಕೊಂಡಿರುತ್ತಾರೆ ಎಂಬುದು ಮುಖ್ಯವಾಗುತ್ತದೆ. ಒಂದು ಕಾಲದಲ್ಲಿ ತಂದೆಗೆ ಮಾತ್ರ ಸಾಮಾಜಿಕವಾಗಿ ಭಾಗವಹಿಸುವ ಅವಕಾಶವಿದ್ದದ್ದರಿಂದ ಅವನು ಪ್ರಸಿದ್ಧನಾಗುತ್ತಿದ್ದ. ಅವನ ಮುಖಾಂತರ ಮುಂದಿನ ಪೀಳಿಗೆ ಗುರುತಿಸಲ್ಪಡುತ್ತಿತ್ತು. ಈಗ ಮಹಿಳೆಗೂ ಪುರುಷನಷ್ಟೇ ಸಮಾಜಿಕವಾಗಿ ಭಾಗವಹಿಸುವ ಅವಕಾಶವಿರುವುದರಿಂದ ಅವಳ ಮೂಲಕವೂ ಮುಂದಿನ ಪೀಳಿಗೆ ಗುರುತಿಸಿಕೊಳ್ಳುವಿಕೆ ಪ್ರಾರಂಭವಾಗುತ್ತಿದೆ.

ಉದಾಹರಣೆ ಮೂರರ 'ಅಶ್ವಿನಿ ವಿಜಯ ಮಠ್' ಕೂಡ ತಾಯಿಯ ಹೆಸರನ್ನು ಸೇರಿಸಿಕೊಂಡಿರುವುದನ್ನು ನೋಡಬಹುದು. 'ವಿಜಯ ಮಠ್' ಎಂಬುದು ಕುಟುಂಬ ನಾಮವಲ್ಲ, ತಾಯಿಯ ಹೆಸರು. ಉದಾಹರಣೆ ನಾಲ್ಕರಲ್ಲಿ 'ಶ್ವೇತಾ ಎಸ್.ಆರ್.' ರೂಪವು ತಾಯಿ(ಸುನಿತಾ) ಮತ್ತು ತಂದೆ(ರಂಗಣ್ಣ) ಇಬ್ಬರ ಹೆಸರನ್ನು ಸೂಚಿಸುತ್ತದೆ. ಇಲ್ಲಿ ತಾಯಿ ಮತ್ತು ತಂದೆಯರ ಸಮಾನ ಪ್ರಾಮುಖ್ಯತೆಯನ್ನು ಗುರುತಿಸಬಹುದು.

ಆದರೆ ಇಲ್ಲಿ ಮತ್ತೊಂದು ಅಂಶವನ್ನು ಗಮನಿಸಬೇಕು. ಗಂಡು ಮತ್ತು ಹೆಣ್ಣು ಮಕ್ಕಳಿಗಿಬ್ಬರಿಗೂ ವ್ಯಕ್ತಿನಾಮಗಳಲ್ಲಿ ತಂದೆಯ ಹೆಸರನ್ನು ಸೇರಿಸಲಾಗುತ್ತಿದೆ. ಆದರೆ, ಸಾಮಾಜಿಕವಾಗಿ ಪ್ರಸಿದ್ಧ ತಾಯಿಯ ಹೆಸರನ್ನು ಗಂಡು ಮಗುವಿನ ಹೆಸರಿನ ಜೊತೆ ಸೇರಿಸಿರುವ ಉದಾಹರಣೆ ಕಂಡು ಬಂದಿಲ್ಲ. ಹೆಣ್ಣು ಮಗುವಿನ ಹೆಸರಿನ ಜೊತೆ ಮಾತ್ರ ಸೇರಿಸಿರುವ ಉದಾಹರಣೆಗಳು ದೊರೆಯುತ್ತವೆ.

**೪.೧.೨. ಏಕಘಟಕದ ವ್ಯಕ್ತನಾಮಗಳು ಮತ್ತು ಲಿಂಗಭಿನ್ನತೆ**

ವಾರ್ಗಿಕ ಮತ್ತು ನಿರ್ದಿಷ್ಟಗಳನ್ನು ಹೊರತುಪಡಿಸಿ ಭಾಷೆಯ ಒಂದು ಘಟಕವೇ ವ್ಯಕ್ತಿನಾಮ ಆಗುವುದುಂಟು.

ಉದಾ: **ಪುರುಷ** – ಸ್ತ್ರೀ
ಕೃಷ್ಣ – ಲಕ್ಷ್ಮೀ
ವೇಣು – ಕಾವೇರಿ
ರಘು – ಗೀತ
ಶ್ರೀ – ಹೂ

ಭಾಷೆಯ ಒಂದು ಘಟಕವೇ ವ್ಯಕ್ತಿನಾಮವಾಗುವಲ್ಲಿ, ವಿವಿಧ ನೆಲೆಗಳಲ್ಲಿ ಲಿಂಗ ಸಂಬಂಧಿ ಭಿನ್ನತೆಯನ್ನು ಗುರುತಿಸಬಹುದು. ಅವುಗಳೆಂದರೆ:

೧. ಏಕ ಘಟಕದ ಕೆಲವು ವ್ಯಕ್ತಿನಾಮಗಳಲ್ಲಿ ಸ್ತ್ರೀಯರಿಗೆ 'ಇ'ಕಾರಾಂತ್ಯಗೊಳಿಸಿ ಬಳಸಲಾಗುತ್ತಿದೆ.

| ಉದಾ: | ಮಯೂರ | – | ಮಯೂರಿ |
|---|---|---|---|
| | ಗೌತಮ್ | – | ಗೌತಮಿ |
| | ಸನಾತನ್ | – | ಸನಾತನಿ |

೨. ಕೆಲವು ಏಕ ಘಟಕದ ವ್ಯಕ್ತಿನಾಮಗಳನ್ನು ಪುರುಷರಿಗೆ ಬಳಸುವಾಗ ವ್ಯಂಜನಾಂತ್ಯವಾಗಿಯೂ, ಸ್ತ್ರೀಯರಿಗೆ ಬಳಸುವಾಗ ದೀರ್ಘಾಂತ್ಯವಾಗಿಯೂ ಮಾಡಲಾಗುತ್ತಿದೆ.

| ಉದಾ: | ಪುರುಷ – | ಸ್ತ್ರೀ |
|---|---|---|
| | ರಕ್ಷಿತ್ – | ರಕ್ಷಿತಾ |
| | ಕಿರಣ್ – | ಕಿರಣಾ |
| | ವಸಂತ – | ವಸಂತಾ |
| | ಪಂಕಜ್ – | ಪಂಕಜಾ |
| | ಚೇತನ್ – | ಚೇತನಾ |
| | ನವೀನ್ – | ನವೀನಾ |
| | ಅರುಣ್ – | ಅರುಣಾ |

ಮೇಲಿನ ಎರಡು ಮಾದರಿಯ ಉದಾಹರಣೆಗಳು ಎಲ್ಲ ಸಂದರ್ಭಗಳಲ್ಲಿಯೂ ಅನ್ವಯವಾಗುವುದಿಲ್ಲ. ಉದಾಹರಣೆಗೆ ಒಂದಕ್ಕೆ ಸಂಬಂಧಿಸಿದಂತೆ ನೋಡುವುದಾದರೆ ಎಲ್ಲ ಸಂದರ್ಭಗಳಲ್ಲೂ ಪುರುಷ ವ್ಯಕ್ತಿನಾಮಗಳು ವ್ಯಂಜನಾಂತ್ಯಗಳಾಗಿ ಇರುವುದಿಲ್ಲ. ಸ್ತ್ರೀವ್ಯಕ್ತಿನಾಮಗಳು ಎಲ್ಲ ಸಂದರ್ಭಗಳಲ್ಲಿಯೂ 'ಇ'ಕಾರಾಂತ್ಯವಾಗುವುದಿಲ್ಲ. 'ಇ'ಕಾರಾಂತ್ಯ ಪುರುಷನಾಮಗಳು ಬಳಕೆಯಲ್ಲಿವೆ.

| ಉದಾ: | ಕೃಷ್ಣಮೂರ್ತಿ | ನಿಧಿ |
|---|---|---|
| | ಪಂಪಾಪತಿ | ಮೈತ್ರಿ |
| | ನಾರಾಯಣಿ | ಮಲ್ಲೇಶಿ |
| | ಶಕ್ತಿ | ಹಾಲೇಶಿ |

ಮುಂತಾದ ರೂಪಗಳನ್ನು ನೋಡಬಹುದು. ಉದಾಹರಣೆ ಎರಡರಂತೆ ಪುರುಷ ವ್ಯಕ್ತಿನಾಮಗಳು ಎಲ್ಲ ಸಂದರ್ಭಗಳಲ್ಲಿಯೂ ವ್ಯಂಜನಾಂತ್ಯಗಳಾಗಿರುವುದಿಲ್ಲ. ಆಧುನಿಕ ಸಂದರ್ಭದಲ್ಲಿ ವ್ಯಂಜನಾಂತ್ಯ ಹೆಸರುಗಳನ್ನು ಸ್ತ್ರೀಯರಿಗೂ ಬಳಸುತ್ತಾರೆ.

| ಉದಾ: | ಪುರುಷ | – | ಸ್ತ್ರೀ |
|---|---|---|---|
| | ಕಿರಣ್ | – | ಕಿರಣ್ |
| | ಕೋಮಲ್ | – | ಕೋಮಲ್ |
| | ಮನಿಷ್ | – | ಮನಿಷ್ |

**೪.೧.೩. ಆಧುನಿಕ ಸಂದರ್ಭದಲ್ಲಿನ ವ್ಯಕಿನಾಮಗಳು**

ಆಧುನಿಕ ಸಂದರ್ಭದ ವ್ಯಕ್ತಿನಾಮಗಳಲ್ಲಿನ ಮತ್ತೊಂದು ಭಿನ್ನ ಅಂಶವೆಂದರೆ, ಕೆಲವು ಹೆಸರುಗಳಲ್ಲಿ ಲಿಂಗ ಸೂಚಿಸಲು ಸಾಧ್ಯವಾಗುವುದಿಲ್ಲ. ಇಬ್ಬರಿಗೂ ಒಂದೇ ಮಾದರಿಯ ಹೆಸರನ್ನಿಡುವ ಪರಿಪಾಠ ಶುರುವಾಗುತ್ತಿದೆ.

| ಉದಾ: | **ಪುರುಷ** – | **ಸ್ತ್ರೀ** |
|---|---|---|
| | ನೀತು – | ನೀತು |
| | ಮಧು – | ಮಧು |
| | ವೈಶಾಖ – | ವೈಶಾಖ |
| | ಸಮಂತ – | ಸಮಂತ |
| | ದೀಪು – | ದೀಪು |
| | ನಿಧಿ – | ನಿಧಿ |
| | ನಿತ್ಯ – | ನಿತ್ಯ |
| | ಆರಾಧ್ಯ – | ಆರಾಧ್ಯ |
| | ಕೃಪ – | ಕೃಪ |
| | ಕ್ಷಣ – | ಕ್ಷಣ |

ಮುಂತಾದ ವ್ಯಕ್ತಿನಾಮಗಳಲ್ಲಿ ಲಿಂಗವನ್ನು ಗುರುತಿಸಲಾಗುವುದಿಲ್ಲ. ವ್ಯಕ್ತಿನಾಮಗಳಲ್ಲಿನ ಲಿಂಗಭಿನ್ನತೆಯನ್ನು ಪರಿಶೀಲಿಸುವ ಹಿನ್ನೆಲೆಯಲ್ಲಿ ಈ ಉದಾಹರಣೆಗಳು ವಿಶಿಷ್ಟವಾಗಿ ನಿಲ್ಲುತ್ತವೆ. ಲಿಂಗತಾರತಮ್ಯ, ಲಿಂಗಭಿನ್ನತೆ, ಲಿಂಗ ಅಸಮಾನತೆ ಈ ಮೂರು ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ನಿರ್ದಿಷ್ಟವಾಗಿ ಲಿಂಗವನ್ನು ಸೂಚಿಸದ ಈ ರೀತಿಯ ಉದಾಹರಣೆಗಳು ಇಂದು ಪ್ರಚಲಿತದಲ್ಲಿವೆ.

**೪.೨. ಸಂಬೋಧನಾ ರೂಪಗಳು : ಲಿಂಗಭಿನ್ನತೆ**

ಒಂದು ಭಾಷೆಯಲ್ಲಿ ಬಳಸಲ್ಪಡುವ ಸಂಬೋಧನಾ ರೂಪಗಳಿಗೆ ಕೇವಲ ಭಾಷಿಕರೂಪವಷ್ಟೇ ಇರುವುದಿಲ್ಲ. ಬದಲಿಗೆ ಸಾಮಾಜಿಕ, ಸಾಂಸ್ಕೃತಿಕ ಆಯಾಮಗಳಿರುತ್ತವೆ. ಸಂಬೋಧನಾ ರೂಪಗಳ ಅಧ್ಯಯನದಿಂದ ಆ ಸಮಾಜದ ಸ್ತರವಿನ್ಯಾಸದ ಬಹುಮುಖಗಳು ಪ್ರಕಟಗೊಳ್ಳುತ್ತಿರುತ್ತವೆ. ಕೆಲವು ಸಂಬೋಧನಾರೂಪಗಳು ಯಾರಿಂದ, ಯಾರಿಗೆ, ಯಾವ ಸಂದರ್ಭದಲ್ಲಿ ಬಳಸಲ್ಪಡುತ್ತವೆ ಎಂಬುದರ ಆಧಾರದ ಮೇಲೆ ಆ ಸಮುದಾಯದ ಸ್ವರೂಪವನ್ನು ತಿಳಿಯಬಹುದು. ಸಂಬೋಧನಾ ರೂಪಗಳು ಜಾತಿ, ವರ್ಗ, ಪ್ರಾದೇಶಿಕತೆ, ಶಿಕ್ಷಣ, ವಯಸ್ಸು ಮತ್ತು ಲಿಂಗ ಹೀಗೆ ವಿವಿಧ ಆಯಾಮಗಳಲ್ಲಿ ಭಿನ್ನವಾಗುತ್ತವೆ. ಈ ಭಾಗದ ಪ್ರಮುಖ ಉದ್ದೇಶ ಸಂಬೋಧನಾ ರೂಪಗಳು ಲಿಂಗ ಆಧಾರಿತವಾಗಿ ಹೇಗೆ ವ್ಯತ್ಯಾಸ ಹೊಂದುತ್ತವೆ ಎಂಬುದನ್ನು ಪರಿಶೀಲಿಸುವುದಾಗಿದೆ.

ಸಂಬೋಧನಾ ರೂಪಗಳನ್ನು ಎರಡು ನೆಲೆಗಳಲ್ಲಿ ಅಭ್ಯಸಿಸಬಹುದು. ಅವುಗಳೆಂದರೆ:

೧. ಕೌಟುಂಬಿಕ ನೆಲೆ

೨. ಸಾಮಾಜಿಕ ನೆಲೆ

ಕೌಟುಂಬಿಕ ನೆಲೆಯಲ್ಲಿ ಬಳಕೆಯಾಗುವ ಸಂಬೋಧನಾ ರೂಪಗಳಿಗೂ, ಸಾಮಾಜಿಕವಾಗಿ ಬಳಕೆಯಾಗುವ ಸಂಬೋಧನಾ ರೂಪಗಳಿಗೂ ವ್ಯತ್ಯಾಸವಿದೆ. ಉದಾ: ಒಬ್ಬ ಆಧುನಿಕ ಶಿಕ್ಷಿತ ಮಹಿಳೆ ಕೌಟುಂಬಿಕ ನೆಲೆಯಲ್ಲಿ ತನ್ನ ಗಂಡನಿಗೆ ಅವನ ಹೆಸರಿನಿಂದ ಅಥವಾ ಏಕವಚನದಲ್ಲಿ ಸಂಬೋಧಿಸಬಹುದು. ಆದರೆ, ಸಾರ್ವಜನಿಕವಾಗಿ ಆಕೆ ತನ್ನ ಗಂಡನಿಗೆ ಗೌರವಸೂಚಕ ಬಹುವಚನ ಸಂಬೋಧನಾ ರೂಪಗಳನ್ನು ಬಳಸುತ್ತಿರುತ್ತಾಳೆ.

ಕೌಟುಂಬಿಕ ವಲಯದಲ್ಲಿನ ಸಂಬೋಧನಾ ರೂಪಗಳು ಸಾಮಾನ್ಯವಾಗಿ ಸಂಬಂಧವಾಚಕ ರೂಪಗಳೇ ಆಗಿರುತ್ತವೆ. ಈ ರೂಪಗಳನ್ನು ಎರಡು ನೆಲೆಗಳಲ್ಲಿ ಗುರುತಿಸಬಹುದು.

೧. ನೇರ ಸಂಬೋಧನಾ ರೂಪಗಳು

೨. ಪರೋಕ್ಷ ಸಂಬೋಧನಾ ರೂಪಗಳು

ಅ) ತಂದೆ – ತಾಯಿ

ಕನ್ನಡ ಭಾಷಿಕ ಪರಿಸರದಲ್ಲಿ ತಂದೆ – ತಾಯಿಗೆ ಬಳಸುವ ಸಂಬೋಧನಾ ರೂಪಗಳನ್ನು ಈ ಕೆಳಕಂಡಂತೆ ಪಟ್ಟಿಮಾಡಬಹುದು.

ರೂಪಗಳು: ಅಪ್ಪ – ಅಮ್ಮ
ಅಪ್ಪಾಜಿ – ಮಾ
ಯಪ್ಪ – ಅವ್ವ
ಯಪ – ಯವ
ಅಯ್ಯ – ಯಾವಾ
ಅಣ್ಣ – ಯಮ್ಮ

ಪ್ರಯೋಗಗಳು: ೧. ಅಪ್ಪಾಜಿ ಬನ್ನಿ
ಅಮ್ಮ ಬಂದ್ರು
೨. ನಿಮ್ ಅಪ್ಪ ಇದಾನಾ
ಅವ್ವ ಎಲ್ಲೋದ್ಲು
೩. ಅಪ್ಪ ಬಂತು
ಅವ್ವ ಐತಾ
ಅಯ್ಯ ಎಲ್ಲೋತು
ಅಣ್ಣ ಬಂತಾ

ಮೇಲಿನ ಪ್ರಯೋಗಗಳಲ್ಲಿ ಗುರುತಿಸಬಹುದಾದ ಅಂಶವೆಂದರೆ, ತಂದೆ ತಾಯಿಗೆ ಬಳಸುವ ಸಂಬೋಧನಾ ರೂಪಗಳು ಏಕವಚನ, ಬಹುವಚನಗಳೆರಡರಲ್ಲೂ ಕಂಡುಬರುತ್ತವೆ. ಜೊತೆಗೆ ನಪುಂಸಕವಾಚಕಗಳಾದ ಬಂತು, ಹೋತು, ಐತಾ ಮುಂತಾದ ರೂಪಗಳ ಬಳಕೆಯನ್ನು ಕೂಡ ಗಮನಿಸಬಹುದು.

| ಆ) | **ಗಂಡ** | – | **ಹೆಂಡತಿ** |
|---|---|---|---|
| ರೂಪಗಳು: | ರೀ | – | ಲೇ |
| | ಏನೂಂದ್ರೆ | – | ಏನೇ |
| | ಏನ್ರಿ | – | ಇವ್ಳೇ |
| | ಬರ್ರೀ | – | ಬಾರೆ |
| | ಮಾಮ | – | ಅಮ್ಮಿ |
| | ನಮ್ಮವರು | – | ನಮ್ಮವಳು |
| | ಯಜಮಾನ್ರು | – | ನಮ್ಮ ಹೆಂಗಸ್ರು |
| | ಮನೆಯವ್ರು | – | ಮನಿಯವಳು |
| | ಇಂವ | – | ಇಕಿನ |
| | ಅಂವ | – | ಆಕಿ |
| | ಏಯ್ | – | ಏಯ್ |
| | ಹೋಯ್ | – | ಹೋಯ್ |
| | ಯಾನ | – | ಯಾನೆ |

ಈ ರೂಪಗಳಲ್ಲಿ ಪ್ರಾದೇಶಿಕ ಭಿನ್ನತೆಗಳಿವೆ. ಗುಲ್ಬರ್ಗ ಭಾಗದಲ್ಲಿ ಇಕಿನ, ಆಕಿನ, ಅಂವ, ಇಂವ ಎಂಬ ರೂಪಗಳನ್ನು ಗಂಡ ಹೆಂಡತಿಯರು ಪರಸ್ಪರ ಬಳಸುತ್ತಾರೆ. ತುಮಕೂರಿನ ಭಾಗದಲ್ಲಿ ಹೆಂಡತಿಗೆ 'ಅಮ್ಮಿ' ಎಂಬ ರೂಪವನ್ನು ಬಳಸುತ್ತಾರೆ. ತಾಯಿಯ ಸಹೋದರನನ್ನು ಮದುವೆಯಾಗಿದ್ದರೆ 'ಮಾಮ' ಎಂಬ ರೂಪವನ್ನು ಕೂಡ ಸಂಬೋಧನೆಯಲ್ಲಿ ಬಳಸುತ್ತಾರೆ.

| | **ಹೆಂಡತಿಗೆ** | – **ಗಂಡನಿಗೆ** |
|---|---|---|
| ಪ್ರಯೋಗಗಳು: ೧. | ಲೇ ಬಾರೆ ಇಲ್ಲಿ | – ರೀ ಬನ್ನಿ ಇಲ್ಲಿ |
| | ಏನೇ ಎಲ್ಲೋದೆ | |
| | ಆಕಿ ಎಲ್ಲೋದ್ಲು | |
| | ಏಯ್ ಇಕಿನ ಬಾ ಇಲ್ಲಿ | |

೨. ನಮ್ಮಾಕಿ ಬಂದ್ಲಾ– ನಮ್ಮ ಯಜಮಾನ್ರು ಇದಾರಾ
ನಮ್ ಹೆಂಗಸ್ರು ಎಲ್ಲಿ – ನಮ್ ಮನೆಯವರು ಹೊರಗೋಗಿದರೆ
ನಮ್ಮ ಹೆಂಗಸ್ರು ಬೇಡ
ಅಂದ್ರು

೩. ನಮ್ ಲೀಲಾ ಅಮ್ಮ – ನಮ್ ರಾಮುವಿನ ಅಪ್ಪ
ನೀರಿಗೊಗಾಳೆ ಇಲ್ಲ ಮೈಸೂರಿಗೆ ಹೋಗಿದಾರೆ.

ಮೇಲಿನ ಪ್ರಯೋಗಗಳಲ್ಲಿ ಪುರುಷನಿಗೆ ಹೆಚ್ಚು ಬಹುವಚನ ಸಂಬೋಧನಾ ರೂಪಗಳನ್ನು ಬಳಸಲಾಗಿದೆ. ಇದಕ್ಕೆ ಕಾರಣ ಆಯಾ ಸಮಾಜದಲ್ಲಿರುವ ನಂಬಿಕೆಗಳು. ಗಂಡನ ಹೆಸರಿಡಿದು ಕರೆದರೆ ಅವನ ಆಯಸ್ಸು ಕಡಿಮೆ ಆಗುತ್ತದೆ ಮತ್ತು ಅಗೌರವ ತೋರಿದಂತಾಗುತ್ತದೆ ಎಂಬ ನಂಬಿಕೆಗಳು ಕಾರಣವಾಗಿದೆ. ಆದರೂ ಕೆಳವರ್ಗದ ಮಹಿಳೆಯರು ಮತ್ತು ಗ್ರಾಮೀಣ ಪ್ರದೇಶದ ಮಹಿಳೆಯರು ತಮ್ಮ ಗಂಡನಿಗೆ ಏಕವಚನವನ್ನು ಬಳಸಿ ಸಂಬೋಧಿಸುತ್ತಾರೆ.

ಉದಾ: ನನ್ ಗಂಡ ಬಂದ್ನ,
ನಿಮ್ಮಪ್ಪ ಎಲ್ಲೋದ?

ಕೆಲವು ಸಂದರ್ಭಗಳಲ್ಲಿ ತಮ್ಮ ಮಕ್ಕಳ ಮುಖಾಂತರ ಉಲ್ಲೇಖಿಸುವಿಕೆಯನ್ನು ಗಮನಿಸಬಹುದು. ಆಧುನಿಕ ಸಂದರ್ಭದಲ್ಲಿ ಗಂಡ, ಹೆಂಡತಿಯರು ಪರಸ್ಪರ ಹೆಸರಿಡಿದು ಸಂಬೋಧಿಸುತ್ತಾರೆ. ಅಥವಾ ಪರಸ್ಪರ ಬಹುವಚನವನ್ನು ಬಳಸುತ್ತಾರೆ. ಹಾಗೂ ಪರಸ್ಪರ ಏಕವಚನವನ್ನು ಬಳಸಿ ಸಂಬೋಧಿಸುವುದು ಉಂಟು.

ಸಾಮಾಜಿಕ ಪರಿಸರದಲ್ಲಿ ಅಪರಿಚಿತ ವ್ಯಕ್ತಿಗಳಿಗೆ, ಪರಿಚಿತ ವ್ಯಕ್ತಿಗಳಿಗೆ ಬಳಸುವ ಸಂಬೋಧನಾ ರೂಪಗಳಿಗೆ ಉದಾಹರಣೆಗಳು:

ಅ) ಗೌರವ ಸೂಚಕ ಸಂಬೋಧನಾ ರೂಪಗಳು

ಸಾಮಾಜಿಕ ವಲಯದಲ್ಲಿ ಕೆಲವು ಗೌರವ ಸೂಚಕ ಸಂಬೋಧನಾ ರೂಪಗಳನ್ನು ಬಳಸಲಾಗುತ್ತದೆ. ಅವುಗಳೆಂದರೆ:

ಉದಾ:

| **ಗಂಡು** | – | **ಹೆಣ್ಣು** |
|---|---|---|
| ಸ್ವಾಮಿ | – | ಅಮ್ಮಾವ್ರೇ |
| ಸಾಹುಕಾರ್ರೇ | – | ಅಕ್ಕವ್ರೇ |
| ಯಜಮಾನ್ರೇ | – | ಯಜಮಾನಮ್ಮ |
| ಗೌಡ್ರೇ | – | ಅಬ್ಬೆ |
| ಧಣಿ | | – |
| ಬುಧ್ಧಿ | | – |

ಅಣ್ಣೋರೆ –

ಅಪ್ಪೋರೆ –

ಸಾರ್ವಜನಿಕ ವಲಯದಲ್ಲಿ ಬಳಸುವ ಕೆಲವು ಗೌರವ ಸೂಚಕ ಸಂಬೋಧನಾ ರೂಪಗಳಲ್ಲಿ ಪುರುಷ ಸಂಬೋಧನಾ ರೂಪಗಳು ಹೆಚ್ಚು. ಸಂಬಂಧವಾಚಕಗಳನ್ನೇ ಮಹಿಳೆಗೆ ಬಳಸಲಾಗುತ್ತದೆ. ಇಂದಿನ ಪತ್ರಿಕೆಗಳು, ಮಾಧ್ಯಮಗಳು, ಕೆಲವು ಸ್ತ್ರೀವಾದಿಗಳು ಇವುಗಳಿಗೆ ಪರ್ಯಾಯವಾಗಿ 'ಸ್ವಾಮಿಣಿ' ಮುಂತಾದ ರೂಪಗಳನ್ನು ರಚಿಸುತ್ತಿರುವುದನ್ನು ಕಾಣಬಹುದಾಗಿದೆ.

ಆ) ಪರಭಾಷಾ ಸಂಬೋಧನಾ ರೂಪಗಳು

ರೂಪಗಳು: ಸರ್ – ಸರ್ ಯಾವಾಗ ಬಂದ್ರಿ?

ಮೇಡಂ – ಮೇಡಂ ಚೆನ್ನಾಗಿದ್ದೀರಾ?

ಮಿಸ್ಟರ್ – ಮಿಸ್ಟರ್ ಅಲ್ಲಿ ನೋಡಿ

ಮಿಸ್ – ಮಿಸ್ ಪೆನ್ ಕೊಡುತ್ತೀರಾ?

ಸಾಹೇಬ್ರೆ – ಸಾಹೇಬ್ರೆ ಊಟ ಆಯ್ತಾ?

ಆಧುನಿಕ ಸಂದರ್ಭದಲ್ಲಿ ಎಲ್ಲ ಅಪರಿಚಿತ ವ್ಯಕ್ತಿಗಳಿಗೆ ಈ ರೂಪಗಳನ್ನು ಬಳಸುತ್ತಾರೆ. ಅರೇಬಿಕ್ ಪದವಾದ 'ಸಾಹೇಬ್' ಅಧಿಕಾರಿಗಳನ್ನು ಕುರಿತು ಸಂಬೋಧಿಸುವಾಗ ಬಳಕೆಯಾಗುತ್ತದೆ. ಇಂಗ್ಲಿಷ್ ಭಾಷೆಯ ಪ್ರಭಾವದಿಂದ ಸರ್, ಮಿಸ್ಟರ್, ಮೇಡಂ ಮುಂತಾದ ರೂಪಗಳು ಇಂದು ಹೆಚ್ಚು ಬಳಕೆಯಾಗುತ್ತಿವೆ.

ಇಂದಿನ ಯುವ ಪೀಳಿಗೆಯಲ್ಲಿ ಪರಸ್ಪರ ಆತ್ಮೀಯರನ್ನು ಸಂಬೋಧಿಸುವಾಗ ಕೆಲವು ಹೊಸ ರೂಪಗಳನ್ನು ಬಳಸುತ್ತಾರೆ. ಅವುಗಳೆಂದರೆ:

ರೂಪಗಳು: ಮಗ – ಬಾರೋ ಮಗ

ಮಚ್ಚಿ – ಮಚ್ಚಿ ಯಾಕೊ ಲೇಟು?

ಗುರು – ಏನ್ ಗುರು ಸಮಾಚಾರ?

ಶಿಷ್ಯ – ಶಿಷ್ಯ ಎಲ್ಲಿದ್ಯೋ?

ಮಾಮು – ಮಾಮು ಬೇಗ ಬಾ

ಈ ಮೇಲಿನ ಸಂಬೋಧನ ರೂಪಗಳು ಹೆಚ್ಚಾಗಿ ಪುರುಷರಲ್ಲಿ ಬಳಕೆಯಾಗುತ್ತವೆ. ಹುಡುಗರನ್ನು ಅನುಕರಿಸಲು ಕೆಲವು ಹುಡಗಿಯರು ಕೂಡ ತಮ್ಮಲ್ಲಿ ಮಗ, ಮಚ್ಚಿ ರೂಪಗಳನ್ನು ಬೆಂಗಳೂರಿನ ಪ್ರದೇಶದಲ್ಲಿ ಬಳಸುವುದುಂಟು. ಆದರೆ, ಪುರುಷರಲ್ಲಿಯೇ ಇವುಗಳೂ ಅಧಿಕ ಪ್ರಮಾಣದಲ್ಲಿ ಬಳಕೆಯಾಗುತ್ತವೆ.

**ಸಂಬೋಧನೆಯಲ್ಲಿ ವರ್ಗ, ಜಾತಿ ಭಿನ್ನತೆಗಳು**

ಸಂಬೋಧನಾ ರೂಪಗಳು ವರ್ಗ, ಜಾತಿಯಾಧಾರಿತವಾಗಿ ಭಿನ್ನವಾಗುತ್ತವೆ. ಉದಾಹರಣೆಗೆ ಒಬ್ಬ ಮೇಲು ವರ್ಗದ ಪುರುಷ, ಸ್ತ್ರೀ, ಮಕ್ಕಳನ್ನು ಒಳಗೊಂಡಂತೆ ಕೆಳವರ್ಗದ, ಕೆಳಜಾತಿಯ ಹಿರಿಯರನ್ನು ಕೂಡ ಏಕವಚನದಲ್ಲಿ ಸಂಬೋಧಿಸುತ್ತಾನೆ. ಅದೇ ಕೆಳಜಾತಿಯ ಹಿರಿಯರು ಮೇಲು ಜಾತಿಯ ಮಕ್ಕಳನ್ನು

ಕೂಡ ಗೌರವದಿಂದ ಮತ್ತು ಬಹುವಚನದಲ್ಲಿ ಸಂಬೋಧಿಸುತ್ತಾರೆ. ಕೆಲವು ಉದಾಹರಣೆಗಳನ್ನು ಗಮನಿಸಬಹುದು.

ಅ) ಮೇಲುವರ್ಗದ ಕಿರಿಯರು ಕೆಳವರ್ಗದ ಹಿರಿಯರನ್ನು ಸಂಬೋಧಿಸುವ ರೀತಿ

ಉದಾ: ಪುರುಷರಿಗೆ – ಸ್ತ್ರೀಯರಿಗೆ

೧. ಲೋ ಸಿದ್ದ ಬಾ – ಕೆಂಪಿ ಬಾರೇ

೨. ಬಾರೋ ಇಲ್ಲಿ ಕೆಂಪ – ಲೇ ಸಿದ್ದಿ

ಮೇಲಿನ ಉದಾಹರಣೆಗಳಲ್ಲಿ ಕೆಳವರ್ಗದವರ ಹೆಸರುಗಳನ್ನು ಹ್ರಸ್ವಗೊಳಿಸಿ ಸಂಬೋಧಿಸಲಾಗಿದೆ. ಸಿದ್ದಪ್ಪ ಎಂಬ ಹೆಸರನ್ನು ಸಿದ್ದ ಎಂದು, ಕೆಂಪಮ್ಮ ಎಂಬ ಹೆಸರನ್ನು ಕೆಂಪಿ ಎಂದು ಕರೆಯಲಾಗಿದೆ. ಇದಕ್ಕೆ ವಿರುದ್ಧವಾಗಿ ಕೆಳಜಾತಿಯವರು ಮೇಲು ವರ್ಗದದವರನ್ನು ಬಹುವಚನ ಗೌರವ ಸೂಚಕಗಳ ಜೊತೆಗೆ ಸಂಬಂಧ ಸೂಚಕಗಳಾದ ಅಪ್ಪ ಅಮ್ಮ, ಅವ್ವ ಮುಂತಾದ ರೂಪಗಳನ್ನು ಸೇರಿಸಿ ಸಂಬೋಧಿಸುತ್ತಾರೆ.

ಉದಾ: ಸುರೇಶಪ್ಪ

ರಮೇಶಪ್ಪ

ಲಕ್ಷ್ಮವ್ವ

ಕುಸುಮಕ್ಕ

ಸಂಬೋಧನಾ ರೂಪಗಳ ಬಳಕೆಯ ರೀತಿ ಪ್ರತಿಯೊಬ್ಬ ವ್ಯಕ್ತಿಯ ಸಾಮಾಜಿಕ ಸ್ಥಾನಮಾನಗಳನ್ನು ಪ್ರತಿಬಿಂಬಿಸುತ್ತಿರುತ್ತವೆ. ಈ ಹಿನ್ನೆಲೆಯಲ್ಲಿ ತೃತೀಯ ಲಿಂಗಿಗಳ ಸಂಬೋಧನಾ ರೂಪಗಳು ಭಿನ್ನವಾಗಿ ನಿಲ್ಲುತ್ತವೆ. ಸಾರ್ವಜನಿಕವಾಗಿ ಅವರಿಗೆ ಬಳಸುವ ರೂಪಗಳು ಹಾಗೂ ಅವರ ಆತ್ಮಕತೆಗಳಲ್ಲಿ ಅವರು ಹೇಳಿಕೊಂಡಿರುವ ಅಂಶಗಳ ಹಿನ್ನೆಲೆಯಲ್ಲಿ ಅವರ ಸಂಬೋಧನಾ ರೂಪಗಳನ್ನು ಪರಿಶೀಲಿಸಬಹುದು. ಎರಡು ಭಿನ್ನ ನೆಲೆಗಳಲ್ಲಿ ತೃತೀಯ ಲಿಂಗದವರ ಸಂಬೋಧನಾ ರೂಪಗಳನ್ನು ಪರಿಶೀಲಿಸಬಹುದು. ಅವುಗಳೆಂದರೆ:

೧. ಸಮಾಜ ಅವರನ್ನು ಸಂಬೋಧಿಸುವ ರೀತಿ

೨. ಅವರ ಸಮುದಾಯದ ಒಳಗೆ ಬಳಕೆಯಾಗುತ್ತಿರುವ ಸಂಬೋಧನಾ ರೂಪಗಳ ಬಗೆ

ಸಾಮಾನ್ಯವಾಗಿ ತೃತೀಯ ಲಿಂಗಿಗಳ ಕುಟುಂಬದವರು ಪುರುಷನ ರೀತಿಯಲ್ಲಿ ಸಂಬೋಧಿಸುವುದು ಕಂಡು ಬರುತ್ತದೆ. ಅವರು ನಿರ್ವಾಣವಾದ ನಂತರ ಕೂಡ ಮಗನೆಂದೇ ಸಂಬೋಧಿಸುತ್ತಾರೆ. ಅಥವಾ ಮೊದಲಿನಿಂದಲೂ ಸಂಬೋಧಿಸಿ ರೂಢಿಯಾದದ್ದನ್ನು ಹಾಗೇ ಮುಂದುವರಿಸುತ್ತಾರೆ.

ಉದಾ: ಲೋ ಯಾಕೊ ಅಳ್ತಿಯ,

ಹೋಗೋ,

ಬಾರೋ.

ಮೇಲಿನ ಉದಾಹರಣೆಗಳಿಗೆ ಅಪವಾದವೆಂಬಂತೆ ಹಿಜ್ರಾಗಳಿಗೆ ನಿರ್ವಾಣವಾದ ನಂತರ ಅವರ ಕುಟುಂಬಗಳ ಕೆಲವು ಸದಸ್ಯರು ಇವರನ್ನು ಹೆಣ್ಣು ಎಂದು ಸ್ವೀಕರಿಸಿ ನಂತರ ಸ್ತ್ರೀ ಸಂಬೋಧನಾ ರೂಪಗಳನ್ನು ಬಳಸುತ್ತಾರೆ. ಉದಾ: ಹೋಗೆ, ಬಾರೇ, ಅವಳು, ಹುಡುಗಿ ಮುಂತಾದ ರೂಪಗಳನ್ನು ಬಳಸುತ್ತಾರೆ. ಇಲ್ಲಿ ಗಮನಿಸಬಹುದಾದ ಮತ್ತೊಂದು ಅಂಶವೆಂದರೆ, ಅವರನ್ನು ಹೆಣ್ಣು ಎಂದು ಒಪ್ಪಿಕೊಂಡು ಸ್ತ್ರೀಯರ ರೀತಿಯಲ್ಲಿ ಸಂಬೋಧಿಸಿದರೂ ಅದು ವ್ಯಂಗ್ಯದ ಮಾದರಿಯಲ್ಲಿರುತ್ತದೆ.

ಸಾರ್ವಜನಿಕವಾಗಿ ಇವರನ್ನು ಅನೇಕ ಭಿನ್ನ ಮಾದರಿಗಳಲ್ಲಿ ಗುರುತಿಸುತ್ತಾರೆ. ಉದಾ: ಛಕ್ಕ, ನಂಬರ್ ನೈನ್, ೫೦-೫೦, ಹೆಣ್ಣಿಗ, ಹೆಂಗಂಡಸು, ಮಾಮ, ಮಂಗಳಮುಖಿ, ನಿತ್ಯಸುಮಂಗಲಿ ಮುಂತಾದವುಗಳು. ಈ ಹಿನ್ನೆಲೆಯಲ್ಲಿ ಸಾರ್ವಜನಿಕವಾಗಿ ಬಳಸುವ ಸಂಬೋಧನಾ ರೂಪಗಳನ್ನು ಮೂರು ರೀತಿಯಲ್ಲಿ ಗುರುತಿಸಬಹುದು.

೧. ಪುರುಷ ಸಂಬೋಧನಾ ರೂಪಗಳು

೨. ಸ್ತ್ರೀ ಸಂಬೋಧನಾ ರೂಪಗಳು

೩. ನಪುಂಸಕ ಸಂಬೋಧನಾ ರೂಪಗಳು

**೧. ಪುರುಷ ಸಂಬೋಧನಾ ರೂಪಗಳು**

ಕೆಲವು ಸಂದರ್ಭಗಳಲ್ಲಿ ಸಾರ್ವಜನಿಕರು ಹಿಜಿಡಾಗಳಿಗೆ ಪುರುಷ ಸಂಬೋಧನಾ ರೂಪಗಳನ್ನು ಬಳಸುತ್ತಾರೆ.

ಉದಾ: ಲೋ ದೊರೆ ಸಾಮಿ,
ಏನ್ ಸಾಮಿ,
ಈ ಹುಡುಗನ ಹುಚ್ಚನ ನೋಡಿ

**೨. ಸ್ತ್ರೀ ಸಂಬೋಧನಾ ರೂಪಗಳು**

ತೃತೀಯ ಲಿಂಗಿಗಳಿಗೆ ಕೆಲವರು ಸ್ತ್ರೀವಾಚಕಗಳನ್ನು ಬಳಸುತ್ತಾರೆ.

ಉದಾ: ಅಮ್ಮ ಚೆನ್ನಾಗಿದ್ದೀರಾ,
ಅಕ್ಕ ಒಂದ್ ಮೊಳ ಹೂ ತಗೊಂಡು ಬೋಣಿ ಮಾಡಕ್ಕ
ಮೇಡಂ ತಗೊಳಿ

ಇವರಿಗೆ ಗೌರವ ಸೂಚಕ ಸ್ತ್ರೀ ಸಂಬೋಧನಾ ರೂಪಗಳನ್ನು ಬಳಸುವ ಹಿನ್ನೆಲೆಯಲ್ಲಿ ಅವರಿಂದ ಬೋಣಿ ಆದರೆ ಅವರ ಆಶೀರ್ವಾದ ಪಡೆದರೆ ಶುಭವಾಗುತ್ತದೆ ಎಂಬ ನಂಬಿಕೆ ಕಾರಣವಾಗಿದೆ.

**೩. ನಪುಂಸಕ ವಾಚಕಗಳ ಬಳಕೆ**

ಸಾಮಾಜಿಕವಾಗಿ ಇವರನ್ನು ಛೇಡಿಸುವ, ರೇಗಿಸುವ ಹಿನ್ನೆಲೆಯಲ್ಲಿ ಪರೋಕ್ಷವಾಗಿ ನಪುಂಸಕ ಸಂಬೋಧನಾ ರೂಪಗಳನ್ನು ಬಳಸುತ್ತಾರೆ.

ಉದಾ: ಅದು ಬಂತು ನೋಡೋ

ಮಾಮ ಬಂತು

ಯಾಮಾರ್ಬೇಡ ಕಣೋ

ಅದು ಊಪರ್ ಶ್ರೀದೇವಿ, ನೀಚೆ ಅಮಿತಾಬ್ ಬಚ್ಚನ್

ಹೋಗ್ತಾ ಇದೆ ನೋಡೊ

ಟೈಮ್ ಈಗ ಒಂಭತ್ತಾ

ಮಚ್ಚ ಬಸ್ ಒಂಭತ್ತು ಗಂಟೆಗೆ ತಲುಪುತ್ತೆ ಕಣೋ

ಹೀಗೆ ಮೂರು ರೀತಿಯಲ್ಲಿ ಸಾರ್ವಜನಿಕವಾಗಿ ತೃತೀಯ ಲಿಂಗದವರನ್ನು ಸಂಬೋಧಿಸುವುದನ್ನು ಕಾಣಬಹುದು. ಈ ಸಮುದಾಯದವರಿಗೆ ಪುರುಷ, ಸ್ತ್ರೀಯರಿಗೆ ಇರುವಂತೆ ನಿರ್ದಿಷ್ಟವಾದ ಸಂಬೋಧನಾ ರೂಪಗಳು ಬಳಕೆಯಲ್ಲಿಲ್ಲ.

ಇವರು ತಮ್ಮನ್ನು ತಾವು ಗಂಡು ದೇಹದೊಳಗಿನ ಹೆಣ್ಣುಗಳೆಂದು ಭಾವಿಸುವುದರಿಂದ, ತಮ್ಮನ್ನು ಹೆಣ್ಣೆಂದು ಪರಿಗಣಿಸಿಕೊಂಡು ಸ್ತ್ರೀವಾಚಕಗಳನ್ನು ಬಳಸಿ ಸಂಬೋಧಿಸಿಕೊಳ್ಳುತ್ತಾರೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ, ನಿರ್ವಾಣವಾಗುವುದಕ್ಕಿಂತ ಮೊದಲು ಮತ್ತು ನಂತರದ ಸಂಬೋಧನಾ ರೂಪಗಳಲ್ಲಿ ವ್ಯತ್ಯಾಸಗಳನ್ನು ಗುರುತಿಸಬಹುದು.

೧. ನಿರ್ವಾಣಕ್ಕಿಂತ ಮೊದಲು: ಹಿಜಿಡಾ ಸಮುದಾಯದಲ್ಲಿ ನಿರ್ವಾಣಕ್ಕಿಂತ ಮೊದಲು ಅವರನ್ನು ಸಂಪೂರ್ಣವಾಗಿ ಹೆಣ್ಣೆಂದು ಒಪ್ಪಿಕೊಳ್ಳುವುದಿಲ್ಲ. ಉದಾ: ಈ ಗಂಡು ಹುಡ್ಗಿ ನೋಡ್ರಪ್ಪ ಹೆಣ್ಣಾಗೋಕೆ ಏನಾಸೆ.

೨. ನಿರ್ವಾಣದ ನಂತರ: ನಿರ್ವಾಣದ ನಂತರ ಅವರನ್ನು ಸಂಪೂರ್ಣ ಹೆಣ್ಣೆಂದು ಪರಿಗಣಿಸಿ ಸಂಬೋಧಿಸುತ್ತಾರೆ. ಉದಾ: ಬನ್ನಿ ಹೆಣ್ಮಕ್ಕಳೆ.

ರೇವತಿ ಅದೃಷ್ಟವಂತೆ

ಏಯ್ ಬಾರೇ

ಅಕ್ಕ ಹೋಗೆ

ಈ ರೀತಿಯಲ್ಲಿ ಅವರು ಪರಸ್ಪರ ಸ್ತ್ರೀ ಸಂಬೋಧನಾ ರೂಪಗಳನ್ನು ಬಳಸಿ ಸಂಬೋಧಿಸಿಕೊಳ್ಳುತ್ತಾರೆ.

ಒಟ್ಟಾರೆ ಸಂಬೋಧನಾ ರೂಪಗಳಲ್ಲಿನ ಲಿಂಗ ಭಿನ್ನತೆಯ ಹಿನ್ನೆಲೆಯಲ್ಲಿ ಕೆಲವು ಅಂಶಗಳು ಸ್ಪಷ್ಟವಾಗುತ್ತವೆ. ಅವುಗಳೆಂದರೆ:

೧. ಹಿರಿಯ, ಕಿರಿಯ, ಸಮವಯಸ್ಕರ ಪುರುಷ ಸ್ತ್ರೀಯರಲ್ಲಿ ಹಾಗೂ ಗಂಡ ಹೆಂಡತಿಯರ ನಡುವಿನ ಸಂಬೋಧನಾ ರೂಪಗಳಲ್ಲಿ ಸಂದರ್ಭಾನುಸಾರಿ ಏಕವಚನ, ಬಹುವಚನ ರೂಪಗಳೆರಡೂ ಬಳಕೆಯಾಗುತ್ತವೆ.

೨. ಸ್ತ್ರೀಯರಿಗೆ ಸ್ತ್ರೀವಾಚಕಗಳನ್ನು, ಪುರುಷರಿಗೆ ಪುರುಷ ವಾಚಕಗಳನ್ನು ನಿರ್ದಿಷ್ಟವಾಗಿ ಬಳಸಿದರೂ ಕೆಲವು ಸಂದರ್ಭಗಳಲ್ಲಿ ನಪುಂಸಕ ವಾಚಕಗಳಾದ ಹೋತಾ, ಐತಾ ಮುಂತಾದ ರೂಪಗಳನ್ನು ಬಳಸುವುದು ಕಂಡುಬರುತ್ತದೆ.

೩. ಭಾಷೆಯಲ್ಲಿ ಏಕವಚನ ಮತ್ತು ಬಹುವಚನ ಸಂಬೋಧನಾ ರೂಪಗಳಿವೆ. ಈ ಎರಡು ಆಯ್ಕೆಗಳಲ್ಲಿ ಕೆಲವು ಸಂದರ್ಭಗಳಲ್ಲಿ ಸಮಾಜ ಆಯ್ಕೆಗಳನ್ನು ನಿಯಂತ್ರಿಸಿ ನಿರ್ದೇಶಿಸುತ್ತಿರುತ್ತದೆ. ಈ ನಿಯಂತ್ರಣಗಳನ್ನು ಮೀರುವಿಕೆಯೂ ನಡೆಯುತ್ತಿರುತ್ತದೆ.

**೪.೩. ಸಂಬಂಧವಾಚಕಗಳು ಮತ್ತು ಸಂಬೋಧನಾ ರೂಪಗಳ ಬಳಕೆಯ ನೆಲೆಗಳು**

ಕನ್ನಡ ಭಾಷಿಕ ಪರಿಸರದಲ್ಲಿ ಸಂಬಂಧವಾಚಕಗಳು ಮತ್ತು ಸಂಬೋಧನಾ ರೂಪಗಳ ಬಳಕೆಯ ನೆಲೆಗಳು ಕುತೂಹಲಕಾರಿಯಾದವು. ಒಂದು ಸಂಬಂಧದ ಚೌಕಟ್ಟಿಗೆ ಒಳಪಡುವ ಸಂಬಂಧವಾಚಕವೂ ಸಂಬೋಧನಾ ರೂಪವಾಗಿ ಬಳಕೆಯಾಗುವಲ್ಲಿ ಬೇರೆ ಬೇರೆ ಸಂಬಂಧಗಳಿಗೂ ಬಳಕೆಯಾಗುತ್ತದೆ. ಈ ರೀತಿಯ ಬಳಕೆಗೆ ಕಾರಣಗಳನ್ನು ಪರಿಶೀಲಿಸುವ ಉದ್ದೇಶವನ್ನು ಈ ಭಾಗ ಒಳಗೊಂಡಿದೆ. ಈ ಹಿನ್ನೆಲೆಯಲ್ಲಿ ಇದನ್ನು ಎರಡು ನೆಲೆಗಳಲ್ಲಿ ಪರಿಶೀಲಿಸಬಹುದು.

೧. ರಕ್ತ ಸಂಬಂಧಿಗಳಲ್ಲಿ ಮತ್ತು ವೈವಾಹಿಕ ಸಂಬಂಧದಿಂದ ಉಂಟಾಗುವ ಸಂಬಂಧಗಳಲ್ಲಿ ಬಳಕೆಯಾಗುವ ಸಂಬೋಧನಾ ರೂಪಗಳು.

೨. ಸಾಮಾಜಿಕವಾಗಿ ಪರಿಚಿತ ಮತ್ತು ಅಪರಿಚಿತರಿಗೆ ಬಳಕೆಯಾಗುವ ಸಂಬೋಧನಾ ರೂಪಗಳು.

ತಂದೆ – ತಾಯಿ ಸಂಬಂಧ ವಾಚಕಗಳು ಸಂಬೋಧನಾ ನೆಲೆಯಲ್ಲಿ ಈ ಮುಂದಿನಂತೆ ಬಳಕೆಯಾಗುತ್ತವೆ.

ಅಪ್ಪ, ಯಪ್ಪ, ಯಪ, ಅಯ್ಯ, ಅಣ್ಣ, ಲಪ್ಪ, ಅಮ್ಮ, ಅವ್ವ, ಅವ, ಯವ, ಲವ್ವ

ದಾವಣಗೆರೆ ಪರಿಸರದಲ್ಲಿ ಕಿರಿಯ ಸಹೋದರಿ ಹಾಗೂ ಅಪರಿಚಿತ ಕಿರಿಯ ಹೆಣ್ಣುಮಕ್ಕಳನ್ನು ಸಂಬೋಧಿಸುವ ಸಂದರ್ಭದಲ್ಲಿ 'ತಾಯಿ' ರೂಪವನ್ನು ಬಳಸುತ್ತಾರೆ. ಅಪರಿಚಿತ ಕಿರಿಯ ಗಂಡು ಮಕ್ಕಳಿಗೆ ತಮ್ಮ ರೂಪವನ್ನು ಸಂಬೋಧಿಸುವಲ್ಲಿ ಬಳಸುತ್ತಾರೆ.

ಕೆಲವು ಕಡೆ ಅಪ್ಪ, ಅಮ್ಮ ರೂಪದ ಪದಾದಿಯ 'ಅ' ಕಾರವು 'ಯ' ಮತ್ತು 'ಲ' ಕಾರವಾಗಿ ಮಾರ್ಪಟ್ಟು ಬಳಕೆಯಾಗುತ್ತದೆ. ಉದಾ: ಅಪ್ಪ > ಯಪ್ಪ, ಅಪ್ಪ > ಲಪ್ಪ, ಅವ್ವ >ಯವ್ವ, ಅಮ್ಮ > ಲಮ್ಮ ಹೀಗೆ ಬಳಕೆಯಾಗುತ್ತವೆ. ಇದಕ್ಕೆ ಎರಡು ಕಾರಣಗಳನ್ನು ಗುರುತಿಸಬಹುದು.

೧. ಸಾಮಾಜಿಕ ಅಂತರ

೨. ಉಚ್ಚಾರಣಾ ಅನುಕೂಲ

ಸಮಾಜದಲ್ಲಿನ ಜಾತಿ, ವರ್ಗಗಳ ಅಂತರದಿಂದ ಉಚ್ಚಾರಣೆಯಲ್ಲಿ ಭಿನ್ನತೆಗಳು ಉಂಟಾಗುವುದನ್ನು ಗಮನಿಸಬಹುದು. ಕನ್ನಡ ಭಾಷಿಕ ಪರಿಸರದಲ್ಲಿ ಕೆಳವರ್ಗದ ಸಮುದಾಯದಲ್ಲಿ ಹೆಚ್ಚಾಗಿ ಯಪ್ಪ, ಲಪ್ಪ,

ಯವ್ವ, ಲಮ್ಮ ರೂಪಗಳು ಬಳಕೆಯಾಗುವುದನ್ನು ಗಮನಿಸಬಹುದು. ಕೆಲವು ಸಂದರ್ಭಗಳಲ್ಲಿ ಉಚ್ಚಾರಣಾ ಅನುಕೂಲತೆಗಾಗಿಯೂ ಈ ರೀತಿಯ ವ್ಯತ್ಯಾಸಗಳಾಗುವುದುಂಟು.

ಉದಾ: ಯೋ ಅಪ್ಪ > ಅ>ಎ>ಯ– ಯಪ್ಪ

ಲೋ ಅಪ್ಪ > ಲೋ+ಅಪ್ಪ> ಲಪ್ಪ

ಯೇ ಅವ್ವ > ಅ>ಎ>ಯ – ಯವ್ವ

ಲೇ ಅಮ್ಮ > ಲೇ+ಅಮ್ಮ> ಲಮ್ಮ

ಹೀಗೆ ಯೋ ಅಪ್ಪ, ಲೋ ಅಪ್ಪ, ಯೇ ಅವ್ವ, ಲೇ ಅಮ್ಮ ಎಂಬ ಸಂಬೋಧನಾ ರೂಪಗಳು ಸಂಕ್ಷೇಪಗೊಂಡು ಯಪ್ಪ, ಲಪ್ಪ, ಯವ್ವ, ಲಮ್ಮ ಆಗಿರಬಹುದು ಎಂದು ಊಹಿಸಲು ಅವಕಾಶವಿದೆ. ಇಲ್ಲಿ ಕೆಳವರ್ಗದ ಮಕ್ಕಳು ತಂದೆ, ತಾಯಿ ಇಬ್ಬರನ್ನು ಏಕವಚನದಲ್ಲಿ ಸಂಬೋಧಿಸುತ್ತಿರುವುದನ್ನು ಕಾಣಬಹುದು.

ಕನ್ನಡ ಭಾಷಿಕರಲ್ಲಿ ಬಳಕೆಯಾಗುವ 'ಅಯ್ಯ' ರೂಪವು ಬಳಕೆಯ ದೃಷ್ಟಿಯಿಂದ ವಿಶೇಷವಾದದ್ದು. ಈ ರೂಪ ಕೌಟುಂಬಿಕ ವಲಯದೊಳಗೆ ಮೂರು ನೆಲೆಯಲ್ಲಿ ಬಳಕೆಯಾಗುತ್ತದೆ.

ಅಯ್ಯಾ – ತಂದೆ, ಚಿಕ್ಕಪ್ಪ, ತಾತ.

ತುಮಕೂರು ಪರಿಸರದಲ್ಲಿ ತಂದೆ ಹಾಗೂ ತಂದೆಯ ಕಿರಿಯ ಸಹೋದರನಿಗೆ 'ಅಯ್ಯ' ಎಂಬ ಸಂಬೋಧನಾ ರೂಪವನ್ನು ಬಳಸಲಾಗುತ್ತದೆ. ಚಾಮರಾಜನಗರ ಜಿಲ್ಲೆಯಲ್ಲಿ ಮಾದಿಗರು ತಂದೆಗೆ ಅಯ್ಯ ಎಂದು, ಹೊಲೆಯರು ತಂದೆಯ ಅಥವಾ ತಾಯಿಯ ತಂದೆಗೆ 'ಅಯ್ಯ' ಎಂದು ಸಂಬೋಧಿಸುತ್ತಾರೆ.

ಅಯ್ಯ ಎಂಬ ರೂಪವು ತಂದೆ, ಚಿಕ್ಕಪ್ಪ, ತಾತ ಮುಂತಾದ ಸಂಬಂಧಗಳನ್ನು ಮಾತ್ರ ಸೂಚಿಸಲು ಬಳಕೆಯಾಗದೆ, ತುಮಕೂರು ಪರಿಸರದಲ್ಲಿ ಗೌರವ ಸೂಚಕವಾಗಿ ಕೌಟುಂಬಿಕ ವಲಯ ಹಾಗೂ ಸಾಮಾಜಿಕ ವಲಯಗಳೆರಡರಲ್ಲಿಯೂ ಸ್ತ್ರೀ–ಪುರುಷ ಇಬ್ಬರಿಗೂ ಸಂಬೋಧನಾ ರೂಪಗಳಲ್ಲಿ ಬಳಕೆಯಾಗುತ್ತದೆ.

ಉದಾ: ಅಪ್ಪ + ಅಯ್ಯ = ಅಪ್ಪಯ್ಯ

ಅಕ್ಕ + ಅಯ್ಯ = ಅಕ್ಕಯ್ಯ

ಅಮ್ಮ + ಅಯ್ಯ = ಅಮ್ಮಯ್ಯ

ಅಣ್ಣ + ಅಯ್ಯ = ಅಣ್ಣಯ್ಯ

ಮಾಮ + ಅಯ್ಯ = ಮಾಮಯ್ಯ

ತಾತ + ಅಯ್ಯ = ತಾತಯ್ಯ

ಮೇಲಿನ ಉದಾಹರಣೆಗಳಲ್ಲಿ 'ಅಯ್ಯ' ರೂಪದ ಬಳಕೆಯ ವಿವಿಧ ನೆಲೆಗಳನ್ನು ಗುರುತಿಸಬಹುದು. ಅವುಗಳೆಂದರೆ:

೧. 'ಅಯ್ಯ' ರೂಪವು ಗೌರವ ಸೂಚಕವಾಗಿ ಕೌಟುಂಬಿಕ ವಲಯ ಹಾಗೂ ಸಾಮಾಜಿಕ ವಲಯಗಳೆರಡರಲ್ಲಿಯೂ ಬಳಕೆಯಾಗಿದೆ. 'ಅಕ್ಕಯ್ಯ', 'ಅಣ್ಣಯ್ಯ' ರೂಪಗಳನ್ನು ಹಿರಿಯ ಸಹೋದರ, ಸಹೋದರಿಯರಿಗೆ ಬಳಸುವಂತೆ ಅಪರಿಚಿತ ಹಿರಿಯ ಪುರುಷ ಮತ್ತು ಮಹಿಳೆಗೂ ಬಳಸಲಾಗುತ್ತದೆ.

೨. 'ಅಯ್ಯ' ರೂಪವು ಪುರುಷ ಸಂಬೋಧನಾ ರೂಪವಾಗಿ ಬಳಕೆಯಾಗುವುದು ಒಂದು ಮಾದರಿಯಾದರೆ, ಅಕ್ಕಯ್ಯ, ಅಮ್ಮಯ್ಯ, ರೂಪಗಳಲ್ಲಿ ಗೌರವಸೂಚಕವಾಗಿ ಮಹಿಳೆಯರಿಗೂ ಬಳಕೆಯಾಗುವುದು ಮತ್ತೊಂದು ಮಾದರಿ.

೩. ತುಮಕೂರು ಪರಿಸರದಲ್ಲಿ 'ಅಮ್ಮಯ್ಯ' ರೂಪವು ಪರಿಚಿತ, ಅಪರಿಚಿತ ಕಿರಿಯ ಹೆಣ್ಣುಮಕ್ಕಳಿಗೆ ಬಳಕೆಯಾಗುತ್ತದೆ. ಉದಾ: ಅಮ್ಮಯ್ಯ, ದೊಡ್ಡಮ್ಮಯ್ಯ, ಚಿಕ್ಕಮ್ಮಯ್ಯ ಎಂಬ ರೂಪಗಳು ಬಳಕೆಯಲ್ಲಿವೆ.

೪. 'ತಾತಯ್ಯ' ಎಂಬ ರೂಪವು ತಂದೆಯ ತಂದೆ ಅಥವಾ ತಾಯಿಯ ತಂದೆಗೆ ಬಳಕೆಯಾದರೂ ಚಿಕ್ಕಮಕ್ಕಳಿಗೆ ಹಿರಿಯರು ದೇವರನ್ನು ಸಂಬೋಧಿಸುವ ರೂಪವಾಗಿ ಕೂಡ ಹೇಳಿಕೊಡುವುದುಂಟು.

೫. ಗೌಡ ಕನ್ನಡದಲ್ಲಿ ಅಯ್ಯ ರೂಪವು ತಾಯಿಗೆ ಸಂಬೋಧನಾ ರೂಪವಾಗಿ ಬಳಕೆಯಾಗುತ್ತದೆ.

ಕೌಟುಂಬಿಕ ಪರಿಸರದಲ್ಲಿ 'ಅಣ್ಣ' ರೂಪವೂ ಹಿರಿಯ ಸಹೋದರನಿಗೆ ಸಾಮಾನ್ಯವಾಗಿ ಹೆಚ್ಚು ಬಳಕೆಯಲ್ಲಿರುವ ರೂಪ. ಸಹೋದರನಿಗೆ ಮಾತ್ರವಲ್ಲದೆ ಈ ರೂಪವು ಕೌಟುಂಬಿಕ ವಲಯದಲ್ಲಿ ಮತ್ತು ಸಾಮಾಜಿಕ ವಲಯದಲ್ಲಿ ಹಿರಿಯ ವ್ಯಕ್ತಿಗಳಿಗೆ ಬಳಕೆಯಾಗುತ್ತದೆ. ಹಿರಿಯ ಸಹೋದರಿಯರಿಗೆ ಸಾಮಾನ್ಯವಾಗಿ ಅಕ್ಕ, ಅಕ್ಕಮ್ಮ, ಅಕ್ಕಯ್ಯ ಮುಂತಾದ ರೂಪಗಳು ಬಳಕೆಯಾಗುತ್ತವೆ. 'ಅಕ್ಕ' ರೂಪವೂ ಸಂಬೋಧನಾ ನೆಲೆಯಲ್ಲಿ ಬೇರೆ ಬೇರೆಯವರಿಗೆ ಕೌಟುಂಬಿಕ ವಲಯ ಮತ್ತು ಸಾಮಾಜಿಕ ವಲಯಗಳೆರಡರಲ್ಲಿಯೂ ಬಳಕೆಯಾಗುತ್ತದೆ.

'ಮಾಮಿ' ರೂಪವು ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಬಳಕೆಯಾಗುತ್ತಿದೆ. ಈ ರೂಪವು ಸಂಬೋಧನಾ ನೆಲೆಯಲ್ಲಿ ಬಳಕೆಯಾಗುವ ಸಂಬಂಧಗಳು ಈ ಮುಂದಿನಂತಿವೆ.

೧. ತಂದೆಯ ಹಿರಿಯ ಸಹೋದರಿ ಮತ್ತು ಕಿರಿಯ ಸಹೋದರಿ

೨. ತಂದೆಯ ಸಹೋದರಿಯ ಹಿರಿಯ ಮತ್ತು ಕಿರಿಯ ಮಗಳು

೩. ತಾಯಿಯ ಹಿರಿಯ ಸಹೋದರ ಮತ್ತು ಕಿರಿಯ ಸಹೋದರನ ಹೆಂಡತಿ

೪. ತಾಯಿಯ ಸಹೋದರನ ಹಿರಿಯ ಮತ್ತು ಕಿರಿಯ ಮಗಳು

ಈ ಮೇಲಿನ ಸಂಬಂಧಗಳಿಗೆ 'ಮಾಮಿ' ರೂಪ ಬಳಕೆಯಾಗುತ್ತಿದೆ. ಇಲ್ಲಿ ಒಂದು ಪ್ರಶ್ನೆ ಎದುರಾಗುತ್ತದೆ. 'ಮಾಮ' ರೂಪದಿಂದ 'ಮಾಮಿ' ರೂಪವನ್ನು ಸಾಧಿಸಲಾಗಿದೆಯೇ? ಎಂಬುದು. ಕೆಲವು ಪುರುಷ ವಾಚಕಗಳನ್ನು ಸ್ತ್ರೀವಾಚಕಗಳನ್ನಾಗಿ ಬದಲಾಯಿಸುವಲ್ಲಿ 'ಇ' ಕಾರಾಂತ್ಯಗೊಳಿಸುವ ಒಂದು ಮಾದರಿಯಿದೆ. ಮರಾಠಿ, ಹಿಂದಿ ಮತ್ತು ಕೆಲವು ಇಂಡೋ–ಆರ್ಯನ್ ಭಾಷೆಗಳಲ್ಲಿ 'ಮಾಮ' ರೂಪವು ಪುಲ್ಲಿಂಗವಾಗಿ, 'ಮಾಮಿ' ರೂಪವು ಸ್ತ್ರೀಲಿಂಗವಾಗಿ ಬಳಕೆಯಲ್ಲಿದೆ. ಕನ್ನಡದಲ್ಲಿ ಉತ್ತರ ಕರ್ನಾಟಕದ ಪ್ರದೇಶದಲ್ಲಿ ಮಾಮಿ ರೂಪವು ಬಳಕೆಯಲ್ಲಿದೆ. ಈ ರೂಪವು ಸ್ವೀಕೃತ ರೂಪ, ಮಾಮಿ ಪದವು ಮೂಲದಲ್ಲೇ 'ಇ' ಕಾರಾಂತ್ಯವಾಗಿ ಬಳಕೆಯಲ್ಲಿರುವುದನ್ನು ಸ್ವೀಕರಿಸಲಾಗಿದೆ. ಕನ್ನಡ ಭಾಷಿಕ ಪರಿಸರದಲ್ಲಿ ಇದನ್ನು ಸಾಧಿಸಲಾಗಿಲ್ಲ. 'ಮೈದುನಿ' (ಉತ್ತರ ಕರ್ನಾಟಕ) ರೂಪವು ಕನ್ನಡ ಭಾಷಿಕ ಪರಿಸರದಲ್ಲಿ 'ಮೈದುನ'

ರೂಪವನ್ನು 'ಇ' ಕಾರಾಂತ್ಯಗೊಳಿಸಿ ಸಾಧಿಸಲ್ಪಟ್ಟ ರೂಪವಾಗಿದೆ. ಈ ರೂಪವು ಹೆಂಡತಿಯ ತಂಗಿಗೆ ಮತ್ತು ಗಂಡನ ತಂಗಿಗೆ ಬಳಸಲಾಗುತ್ತಿರುವುದನ್ನು ಗುರುತಿಸಬಹುದು.

ಕರ್ನಾಟಕದ ವಿವಿಧ ಭಾಗಗಳಲ್ಲಿ ಅಜ್ಜ, ತಾತಾ, ಅಪ್ಪ, ಅಯ್ಯ, ಮುತ್ಯ, ಅಜ್ಜಿ, ಅಮ್ಮ, ಅಮ್ಮಣ್ಣಿ, ಅವ್ವ ಮುಂತಾದ ರೂಪಗಳು ತಂದೆಯ ತಂದೆ ಮತ್ತು ತಾಯಿ ಹಾಗೂ ತಾಯಿಯ ತಂದೆ ಮತ್ತು ತಾಯಿಗೆ ಸಂಬೋಧನಾ ರೂಪಗಳಾಗಿ ಬಳಕೆಯಾಗುತ್ತಿವೆ. 'ಅವ್ವ', 'ಅಮ್ಮ', ರೂಪಗಳು 'ಅಜ್ಜಿ'ಗೂ ಕೆಲವು ಕಡೆ ಬಳಕೆಯಲ್ಲಿದೆ. 'ಅಪ್ಪ' ರೂಪವೂ ಕೂಡ ಸಂಬೋಧನಾ ನೆಲೆಯಲ್ಲಿ ತಾತನಿಗೂ ಬಳಕೆಯಲ್ಲಿದೆ. ತಂದೆಯ ತಂದೆ ಮತ್ತು ತಾಯಿಯ ತಂದೆ ಇಬ್ಬರಿಗೂ 'ತಾತ' 'ಅಜ್ಜ' ರೂಪಗಳು ಸಾಮಾನ್ಯವಾಗಿ ಎಲ್ಲ ಕಡೆ ಬಳಕೆಯಲ್ಲಿದ್ದರೂ ಸ್ಪಷ್ಟತೆಗಾಗಿ 'ಹೆಣ್‌ತಾತ', 'ಗಂಡ್‌ತಾತ' ಎಂಬ ರೂಪಗಳೂ ಬಳಕೆಯಲ್ಲಿವೆ. ಅದೇ ರೀತಿ 'ಗಂಡವ್ವ', ಹೆಣ್ಣವ್ವ' ಎಂಬ ರೂಪಗಳು ತಂದೆಯ ತಾಯಿ, ತಾಯಿಯ ತಾಯಿ ಎಂಬುದನ್ನು ಸ್ಪಷ್ಟಪಡಿಸುತ್ತವೆ. ಅದೇ ರೀತಿ ತಂದೆಯ ತಂದೆಯ ತಂದೆಗೆ 'ಗಂಡ್ಮುತ್ತಜ್ಜ', ತಂದೆಯ ತಾಯಿಯ ತಾಯಿಗೆ 'ಗಂಡುಮುತ್ತಜ್ಜಿ', ತಾಯಿಯ ತಂದೆಯ ತಂದೆಗೆ 'ಹೆಣ್ಮುತ್ತಜ್ಜ', ಯಮ್ಮಜ್ಜ (ಉತ್ತರ ಕರ್ನಾಟಕ), ತಾಯಿಯ ತಾಯಿಗೆ 'ಹೆಣ್ಮುತ್ತಜ್ಜಿ' (ಧಾರವಾಡ), ಹೆಣ್ಣಬ್ಬೆ (ಕೋಲಾರ) ಎಂಬ ರೂಪಗಳು ಬಳಕೆಯಲ್ಲಿವೆ. ಇವು ನೇರ ಸಂಬೋಧನೆಯಲ್ಲಿ ಬಳಕೆಯಾಗುವುದಿಲ್ಲ. ಪರೋಕ್ಷ ಸಂಬೋಧನೆಯಲ್ಲಿ ಸ್ಪಷ್ಟತೆಗಾಗಿ ಬಳಕೆಯಲ್ಲಿವೆ.

ಮೇಲಿನ ವಿಚಾರಗಳ ಹಿನ್ನೆಲೆಯಲ್ಲಿ ಸಂಬಂಧವಾಚಕಗಳು ಮತ್ತು ಸಂಬೋಧನಾ ರೂಪಗಳು ಬಳಕೆಯ ಹಿನ್ನೆಲೆಯಲ್ಲಿ ವಿವಿಧ ಆಯಾಮಗಳಿಗೆ ಒಳಪಡುತ್ತವೆ. ಬಳಸುವ ವ್ಯಕ್ತಿ, ಬಳಸುವ ಸಂದರ್ಭಗಳ ಹಿನ್ನೆಲೆಯಲ್ಲಿ ಆಯಾ ಪರಿಸರದವರಿಗೆ ಅವುಗಳ ಸ್ಪಷ್ಟತೆ ಇರುತ್ತದೆ ಎಂಬುದನ್ನು ಗಮನಿಸಬಹುದು.

**೪.೪. ಗಾದೆಗಳು: ಲಿಂಗ ಸಂಬಂಧಿ ನೆಲೆಗಳು**

ಸಮಾಜ ಪತ್ರಿಪಾದಿಸುವ ಕೆಲವು ಮೌಲ್ಯಗಳು ಭಾಷೆಯ ವಿವಿಧ ರೂಪಗಳ ಮುಖಾಂತರ ಆಯಾ ಸಮಾಜಗಳಲ್ಲಿ ರೂಪುಗೊಳ್ಳುತ್ತಿರುತ್ತವೆ ಹಾಗೂ ಮುಂದಿನ ತಲೆಮಾರುಗಳಿಗೆ ಕೊಂಡೊಯ್ಯುತ್ತಿರುತ್ತವೆ. ಈ ಹಿನ್ನೆಲೆಯಲ್ಲಿ ಸಮುದಾಯದ ಮೌಲ್ಯ ಪ್ರತಿನಿಧಿಗಳಾದ 'ಗಾದೆ'ಗಳಲ್ಲಿ ಲಿಂಗ ಸಂಬಂಧಿ ನೆಲೆಗಳನ್ನು ಪರಿಶೀಲಿಸಬಹುದು. ಇವುಗಳನ್ನು ಮೂರು ಮಾನದಂಡಗಳ ಮುಖಾಂತರ ಪರಿಶೀಲಿಸಲಾಗಿದೆ. ಅವುಗಳೆಂದರೆ:

೧. ಮೌಲ್ಯಗಳ ರೂಪಿಸುವಿಕೆ ಮತ್ತು ಅವುಗಳ ನಿರ್ವಹಿಸುವಿಕೆ
೨. ಈ ಮೌಲ್ಯಗಳನ್ನು ಸಾರ್ವಕಾಲಿಕ ಮೌಲ್ಯಗಳೆಂಬಂತೆ ಮುಂದಿನ ತಲೆಮಾರಿಗೆ ಮುಂದುವರಿಸುವಿಕೆ
೩. ಇವುಗಳಿಗೆ ವಿರುದ್ಧವಾದಂತಹ ಪಾತ್ರಗಳು ಮತ್ತು ಸಮಾಜ ಅವರನ್ನು ಕುರಿತು ಪ್ರತಿಕ್ರಿಯಿಸುವ ರೀತಿ

ಗಾದೆಗಳು ಮತ್ತು ಲಿಂಗ ಸಂಬಂಧಿ ನೆಲೆಗಳನ್ನು ಪರಿಶೀಲಿಸಲು ಗಾದೆಗಳನ್ನು ನಾಲ್ಕು ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಅವುಗಳೆಂದರೆ:

೧. ಸಾರ್ವತ್ರಿಕವಾಗಿ ಎಲ್ಲರಿಗೂ ಅನ್ವಯವಾಗುವಂತಹ ಗಾದೆಗಳು

೨. ಗಂಡಿಗೆ ಬಳಸುವ ಗಾದೆಗಳು

೩. ಹೆಣ್ಣಿಗೆ ಬಳಸುವ ಗಾದೆಗಳು

೪. ಇಬ್ಬರಿಗೂ ಅನ್ವಯವಾಗುವಂತಹ ಗಾದೆಗಳು. (ಒಂದೇ ಗಾದೆಯಲ್ಲಿ ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಅನ್ವಯವಾಗುವಂತಹ ಭಿನ್ನ ವಿಚಾರಗಳು ಇರುವ ಗಾದೆಗಳು)

ಸಾಮಾಜಿಕವಾಗಿ ಎಲ್ಲರಿಗೂ ಅನ್ವಯವಾಗುವಂತಹ ಮೌಲ್ಯಗಳನ್ನು ಹೇಳುವ ಗಾದೆಗಳಲ್ಲಿ ಪುರುಷವಾಚಕಗಳನ್ನು ಹೆಚ್ಚು ಬಳಸಲಾಗಿದೆ.

ಉದಾ: ಆತುರಗಾರನಿಗೆ ಬುದ್ಧಿಮಟ್ಟ.
ಕೈಲಾಗದವನು ಮೈ ಪರಿಚಿಕೊಂಡ.
ತಾಳಿದವನು ಬಾಳಿಯಾನು.
ಬಾಯಿದ್ದವ ಬರದಲ್ಲು ಗೆಲ್ಲುತ್ತಾನೆ.
ಚಿಂತೆಯಿಲ್ಲದವನಿಗೆ ಸಂತೇಲೂ ನಿದ್ದೆ.

ಇದಕ್ಕೆ ಕಾರಣಗಳನ್ನು ಪರಿಶೀಲಿಸುವುದಾದರೆ, ಪುರುಷ ಪ್ರಧಾನ ಸಮಾಜದಲ್ಲಿನ ಬಹುತೇಕ ಭಾಷೆಗಳಲ್ಲಿ ಪುರುಷ ವಾಚಕಗಳನ್ನು ಸ್ತ್ರೀಯನ್ನು ಒಳಗೊಳ್ಳುವಂತೆ ಬಳಸಲಾಗಿರುತ್ತದೆ. ಒಂದು ಹಂತದವರೆಗೆ ಪುರುಷ ಸಮಾಜದ ಎಲ್ಲ ಪ್ರಮುಖ ಚಟುವಟಿಕೆಗಳ ಕೇಂದ್ರವಾಗಿದ್ದರಿಂದ ಈ ರೀತಿಯ ರಚನೆಗಳು ಉಂಟಾಗಿರುತ್ತವೆ. ಆದರೆ, ಗಾದೆಗಳ ಬಳಕೆಯ ವಿವಿಧ ನೆಲೆಗಳನ್ನು ಪರಿಶೀಲಿಸುವುದಾದರೆ ಸ್ತ್ರೀವಾಚಕಗಳುಳ್ಳ ಕೆಲವು ಗಾದೆಗಳು ಪುರುಷರಿಗೂ ಅನ್ವಯವಾಗುವಂತೆ ಬಳಕೆಯಲ್ಲಿವೆ.

ಉದಾ: ಅತ್ತೆಗೊಂದು ಕಾಲ ಸೊಸೆಗೊಂದು ಕಾಲ.
ಕುಣೀಲಾರದೋಳು ನೆಲ ಡೊಂಕು ಅಂದ್ಲಂತೆ.
ಹಳೇ ಗಂಡನ ಪಾದವೇ ಗತಿ.
ಮಳ್ಳಿ ಮಳ್ಳಿ ಮಂಚಕ್ಕೆ ಕಾಲೆಷ್ಟು ಅಂದ್ರೆ ಮೂರು ಮತ್ತೊಂದು ಅಂದ್ಲಂತೆ.

ಮೇಲಿನ ಗಾದೆಗಳು ರಚನೆಯಲ್ಲಿ ಸ್ತ್ರೀವಾಚಕಗಳನ್ನು ಹೊಂದಿದ್ದರೂ ಬಳಕೆಯ ನೆಲೆಯಲ್ಲಿ ಪುರುಷರಿಗೂ ಅನ್ವಯವಾಗುತ್ತವೆ. ಗಾದೆಗಳ ರಚನೆ ಮತ್ತು ಅವುಗಳ ಬಳಕೆಯ ನೆಲೆಗಳು ಭಿನ್ನವಾಗಿವೆ. ಒಂದು ಸಮಾಜ ಕೆಲವು ಮೌಲ್ಯಗಳನ್ನು ನಿರೂಪಿಸುವಲ್ಲಿ ಗಾದೆಗಳನ್ನು ಬಳಸುವ ಸಂದರ್ಭದಲ್ಲಿ ಅಲ್ಲಿ ಸ್ತ್ರೀವಾಚಕ, ಪುರುಷ ವಾಚಕಗಳನ್ನು ಪ್ರಜ್ಞಾಪೂರ್ವಕವಾಗಿ ಬಳಸುವುದಿಲ್ಲ. ಅಲ್ಲಿ ನೀತಿ ಅಷ್ಟೇ ಮುಖ್ಯವಾಗುತ್ತಿರುತ್ತದೆ.

ಸಮಾಜ ಗಂಡು ಮತ್ತು ಹೆಣ್ಣಿನ ಪಾತ್ರ ನಿರ್ವಹಣೆಯ ಕುರಿತಂತೆ ಒಳ್ಳೆಯ ಗುಣಗಳು ಮತ್ತು ಕೆಟ್ಟಗುಣಗಳು ಎಂಬ ಕಲ್ಪನೆಯ ಹಿನ್ನೆಲೆಯಲ್ಲಿ ಗಾದೆಗಳನ್ನು ಸೃಷ್ಟಿಸುತ್ತಿರುತ್ತದೆ. ಗಂಡಿಗೆ ಅನ್ವಯವಾಗುವಂತಹ ಕೆಲವು ಗುಣಗಳನ್ನು, ಹೆಣ್ಣಿಗೆ ಅನ್ವಯವಾಗುವಂತಹ ಕೆಲವು ಗುಣಗಳನ್ನು ಸಮಾಜ ನಿರ್ಧರಿಸಿ ಮಾನ್ಯ ಮಾಡಿರುತ್ತದೆ. ಅವುಗಳಿಗೆ ವಿರುದ್ಧವಾದಂತಹ ನಡತೆಗಳು ಅಪಹಾಸ್ಯಕ್ಕೆ ಗುರಿಯಾಗುತ್ತವೆ ಅಥವಾ

ಸಮಾಜದ ಸಿಟ್ಟಿಗೆ ಗುರಿಯಾಗುತ್ತವೆ. ಉದಾಹರಣೆಗೆ ಗಂಡ ಅಧಿಕಾರಯುತವಾಗಿ ವರ್ತಿಸಬೇಕು ಎಂಬುದನ್ನು ಸಮಾಜ ಮಾನ್ಯಮಾಡುತ್ತದೆ. ಅವನು ಹೆಂಡತಿಯ ಮಾತನ್ನು ಕೇಳಿದರೆ ಅಪಹಾಸ್ಯಕ್ಕೆ ಗುರಿಯಾಗುತ್ತಾನೆ.

ಉದಾ: ಊರಿಗೆ ಗೌಡ, ಹೆಂಡ್ತಿಗೆ ಗುಲಾಮ.

ಸಾವಿರ ಕುದುರೆ ಸರದಾರ, ಮನಿ ಹೆಂಡ್ತಿಗೆ ಪಿಂಜಾರ.

ಮನೇಲಿ ಇಲಿ ಬೀದೀಲಿ ಹುಲಿ.

ಗಂಡಸಿಗೇಕೆ ಗೌರಿ ದುಃಖ.

ಎಂಬಂತಹ ಗಾದೆಗಳು ಸೃಷ್ಟಿಯಾಗುತ್ತವೆ. ಪಾತಿವ್ರತ್ಯ, ತಾಯ್ತನ, ತ್ಯಾಗ ಮೊದಲಾದ ಆದರ್ಶಗಳನ್ನು ಹೆಣ್ಣಿನಿಂದ ಸಮಾಜ ಬಯಸುತ್ತದೆ. ಹೆಣ್ಣು ಸಂಸಾರದ ಕಣ್ಣು ಆಗಿರಬೇಕು ಎಂದು ಸಮಾಜ ಅಪೇಕ್ಷಿಸುತ್ತದೆ. ಇದಕ್ಕೆ ವಿರುದ್ಧವಾದಂತಹ ಗುಣಗಳನ್ನು ಸಮಾಜ ಅಂಗೀಕರಿಸುವುದಿಲ್ಲ. ಅಂತಹ ಹೆಣ್ಣನ್ನು ತಿರಸ್ಕಾರದಿಂದ ಕಾಣುತ್ತದೆ.

ಉದಾ: ನೋಡೋಕೆ ಮಳ್ಳಿ ಮಾತಿನಲ್ಲಿ ಮಲ್ಲಿ ಇಕ್ಕೋದು ಕೊಳ್ಳಿ.

ಮಿಂಡನ ಚಟ ಇದ್ದೋಳು ಗಂಡನ ಮನೆ ಉಳಿಸುತ್ತಾಳೆಯೇ?

ಎರೆ ಹೊಲ ಇರಬೇಕು ಕರೆ ಹೆಂಡತಿ ಇರಬೇಕು.

ಹಾರಿ ಹೋಗೋ ಬಡ್ಡಿ ಹಾಲಿಗೆ ಹೆಪ್ಪು ಇಟ್ಟಾಳೆಯೇ?

ಮೇಟಿ ಇಲ್ಲದ ಹೆಣ್ಣು ಕೋಟಿ ಕೊಟ್ಟರೂ ಬೇಡ.

ಗಂಡು ಮತ್ತು ಹೆಣ್ಣಿಗೆ ಸಂಬಂಧಿಸಿದಂತೆ ಕೆಲವು ಸಂದರ್ಭಗಳು ಹಾಗೂ ಕೆಲವು ಸಂಬಂಧಗಳಿಗೆ ಸಂಬಂಧಪಟ್ಟಂತೆ ಗಾದೆಗಳ ಬಳಕೆ ಹೆಚ್ಚಾಗಿರುವುದನ್ನು ಗಮನಿಸಬಹುದು. ಉದಾಹರಣೆಗೆ ಹೆಣ್ಣು ಮತ್ತು ತವರಿನ ಸಂಬಂಧ, ಹೆಣ್ಣು ಮತ್ತು ಗಂಡನ ಮನೆಯ ಸಂಬಂಧ ಹೇಗಿರಬೇಕು ಎಂಬುದನ್ನು ಗಾದೆಗಳಲ್ಲಿ ವ್ಯಕ್ತವಾಗುತ್ತಿರುತ್ತವೆ.

ಉದಾ: ಜಲ ನೋಡಿ ಬಾವಿ ತೋಡು, ಕುಲನೋಡಿ ಹೆಣ್ಣು ಕೊಡು.

ಕೆಟ್ಟು ತವರು ಸೇರಬೇಡ.

ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ.

ಗಂಡ ಇಲ್ಲದ ಮೇಲೆ ಮುಂಡೆ ಬಾಳು.

ಗಂಡ ಇಲ್ಲದವಳು ಗರತಿಯಲ್ಲ, ಮಂಡೆ ಇಲ್ಲದ್ದು ತುರುಬಲ್ಲ.

ಗಂಜಿಕುಡಿದರೂ ಗಂಡನ ಮನೆ ಲೇಸು.

ಹೆಣ್ಣು ಎಷ್ಟೇ ಕಷ್ಟಪಟ್ಟರು ತವರು ಮತ್ತು ಗಂಡನ ಮನೆಗೆ ಕೀರ್ತಿಯನ್ನು ತರುವಂತೆ ಗಂಡನ ಮನೆಯಲ್ಲೇ ಬಾಳಬೇಕು ಎಂಬ ಮೌಲ್ಯಗಳನ್ನು ಈ ಮೇಲಿನ ಗಾದೆಗಳಲ್ಲಿ ಕಾಣಬಹುದು. ಆದರೆ,

ಬದಲಾದ ಕಾಲದಲ್ಲಿ ಈ ಗಾದೆಗಳು ಅನ್ವಯವಾಗುವುದಿಲ್ಲ. ಕಾಲ ಬದಲಾದಂತೆ ಸಮಾಜದ ಮೌಲ್ಯಗಳು ಬದಲಾಗುತ್ತಿರುತ್ತವೆ ಎಂಬ ಅಂಶವನ್ನು ಪರಿಗಣಿಸಬೇಕಾಗುತ್ತದೆ.

ಗಂಡು ಮತ್ತು ಹೆಣ್ಣಿಗೆ ಸಂಬಂಧಪಟ್ಟಂತಹ ಕೆಲವು ಅಂಶಗಳು ನಿರಂತರವಾಗಿ ಸಮಾಜದಲ್ಲಿ ಹೀಯಾಳಿಸಲ್ಪಡುತ್ತಿರುತ್ತವೆ. ಉದಾಹರಣೆಗೆ ಹೆಣ್ಣಿನ ಬಂಜೆತನ ಹಾಗೂ ಗಂಡಿನ ನಪುಂಸಕತ್ವವನ್ನು ಕುರಿತು ಪರಿಶೀಲಿಸಬಹುದು. ಮಗುವಿನ ಜನನಕ್ಕೆ ಗಂಡು, ಹೆಣ್ಣು ಇಬ್ಬರೂ ಸಹಭಾಗಿಗಳಾಗಿರುತ್ತಾರೆ. ಆದರೆ, ಬಂಜೆತನದ ಕಲ್ಪನೆ ಆ ಸಮಾಜದಲ್ಲಿ ಹೆಣ್ಣನ್ನು ಹೀಯಾಳಿಸುವ ಮಟ್ಟಿಗೆ ಗಂಡಿಗೆ ಅನ್ವಯಿಸುವುದಿಲ್ಲ. ಇದಕ್ಕೆ ಸಂಬಂಧಿಸಿದಂತೆ ಕೆಲವು ಗಾದೆಗಳನ್ನು ಉದಾಹರಣೆಯಾಗಿ ನೋಡಬಹುದು.

ಉದಾ: ೧. ಬರೀ ಗಂಡು ಹೆತ್ತರೂ ಬಂಜೆ
ಬರೀ ಹೆಣ್ಣು ಹೆತ್ತರೂ ಬಂಜೆ
ಒಂದೂ ಇಲ್ಲದವಳು ನಿರ್ಬಂಜೆ.

೨. ಪಡೆದವಳಿಗೆ ಪಟ್ಟೇ ಸೀರೆ
ಪಡೆಯದವಳಿಗೆ ಮುತ್ತುಗದ ಹಾಳೆ.

ಗಂಡಿನ ನಪುಂಸಕತೆ ಕೂಡ ಸಮಾಜದಲ್ಲಿ ಹೀಯಾಳಿಸುವಿಕೆಗೆ ಗುರಿಯಾಗಿರುವುದನ್ನು ಗಾದೆಗಳಲ್ಲಿ ಗುರುತಿಸಬಹುದು.

ಉದಾ: ೧. ಏಳಲಾರದವನಿಗೆ ಏಳು ಜನ ಹೆಂಡ್ತೀರು.

೨. ಕೈಲಿ ಆಗದ ಗಂಡ ಹೊಟ್ಟೆ ತುಂಬ ಉಂಡ
ಸಂಜೆ ಹೊತ್ತಿಗೆ ಮುನಿಸಿಕೊಂಡ.

೩. ಓಡಲಾರದ ಒಡ್ಡನಿಗೆ ಓಣಿ ಓರೆ.

೪. ಕೆಲಸಕ್ಕೆ ಬಾರದವನು ವಲಸೆ ಹೋದರೇನು.

೫. ಅಟ್ಟಕ್ಕೆ ಹಾರದವನು ಬೆಟ್ಟ ಹತ್ತಿಯಾನೆ?

ಸಾಂಪ್ರದಾಯಿಕ ಸಮಾಜದಲ್ಲಿ ಪಾತಿವ್ರತ್ಯದ ಕಲ್ಪನೆ ಹೆಣ್ಣಿಗೆ ಅನ್ವಯವಾಗುವಂತೆ ಗಂಡಿಗೆ ಅನ್ವಯವಾಗುತ್ತಿರಲಿಲ್ಲ. ಪುರುಷನಿಗೆ ನೈತಿಕತೆಯ ಆರೋಪವಿರಲಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಹೆಣ್ಣಿಗೆ ಇದ್ದ ಮಟ್ಟಕ್ಕೆ ಪುರುಷನಿಗೆ ಇರಲಿಲ್ಲ ಎಂಬುದನ್ನು ಗಮನಿಸಬೇಕು. ಉದಾಹರಣೆಗೆ: ಕೆಚ್ಚೆದೆಯವನ ಕಚ್ಚೆ ಭದ್ರ ಎಂಬಂತಹ ಗಾದೆಗಳಿರುವುದನ್ನು ಗಮನಿಸಬಹುದು.

ಒಂದು ಸಮಾಜದಲ್ಲಿನ ದೃಷ್ಟಿಕೋನ ಗಂಡಿಗೆ ಸಂಬಂಧಿಸಿದಂತೆ ಹಾಗೂ ಹೆಣ್ಣಿಗೆ ಸಂಬಂಧಿಸಿದಂತೆ ಹೇಗೆ ಭಿನ್ನವಾಗಿರುತ್ತದೆ ಎಂಬುದನ್ನು ಗುರುತಿಸಲು ವ್ಯಭಿಚಾರಕ್ಕೆ ಸಂಬಂಧಪಟ್ಟಂತಹ ಗಾದೆಗಳನ್ನು ಗಮನಿಸಬಹುದು. ಪುರುಷನ ಇಂತಹ ಗುಣಗಳನ್ನು ಮಾನ್ಯಮಾಡುವ ಸಮಾಜ ಹೆಣ್ಣಿಗೆ ಅನ್ವಯಿಸುವಾಗ ಕೀಳಾಗಿ ಕಾಣುತ್ತದೆ. ಇದಕ್ಕಾಗಿಯೇ ವ್ಯಭಿಚಾರಕ್ಕೆ ಸಂಬಂಧಪಟ್ಟಂತಹ ಗಾದೆಗಳು ಹೇರಳವಾಗಿ ದೊರೆಯುತ್ತವೆ.

ಉದಾ: ಜಾರೆಗೆ ನೀತಿಯಿಲ್ಲ, ಮಾರಿಗೆ ಕರುಣೆಯಿಲ್ಲ.
ಸೂಳೆ ಮುಪ್ಪಾದರೂ ಚಾಳಿ ಮುಪ್ಪಾಗುವುದಿಲ್ಲ.
ಹಾದರಗಿತ್ತಿಗೆ ಹಗಲೊಬ್ಬ ಇರುಳೊಬ್ಬ.
ಸೂಳೆ ಗೇರೀಲಿ ಪತಿವ್ರತೆಯೂ ಹಾದರಗಿತ್ತಿ.

ಕೆಲವು ಗಾದೆಗಳು ಪುರುಷ ಮತ್ತು ಸ್ತ್ರೀಯರ ಕೆಲವು ಮೌಲ್ಯಗಳನ್ನು ಒಟ್ಟಿಗೆ ಒಂದೇ ಗಾದೆಯಲ್ಲಿ ಬಿಂಬಿಸುತ್ತಿರುತ್ತವೆ. ಇಂತಹ ಗಾದೆಗಳ ಮುಖಾಂತರ ಆಯಾ ಸಮಾಜದಲ್ಲಿನ ಹೆಣ್ಣಿನ ಬಗೆಗಿನ ಗ್ರಹಿಕೆ ಮತ್ತು ಗಂಡಿನ ಬಗೆಗಿನ ಗ್ರಹಿಕೆಗಳನ್ನು ಕುರಿತು ಪರಿಶೀಲಿಸಬಹುದು.

ಉದಾ: ೧. ಹಟ ಕಲಿತ ಹೆಣ್ಣು ಕೆಟ್ಟಳು, ಚಟ ಕಲಿತ ಗಂಡು ಕೆಟ್ಟ.
೨. ಮಾತಿಗೆ ತಪ್ಪದವನು ಮಗ, ನೀತಿಗೆ ತಪ್ಪದವಳು ಸೊಸೆ.
೩. ಮಲಗಾಕೋಗಿ ಮಗಕೆಟ್ಟ, ಬೀಸಾಕೋಗಿ ಸೊಸೆ ಕೆಟ್ಲು.
೪. ನೂರು ತಲೆಗಳು ಕೂಡುವುದಾದರೂ ಮೂರು ತುರುಬುಗಳು ಕೂಡುವುದಿಲ್ಲ.
೫. ಗಂಡಸರ ಕೈಲಿ ಕೂಸು ನಿಲ್ಲದು, ಹೆಂಗಸರ ಬಾಯಿಲಿ ಗುಟ್ಟು ನಿಲ್ಲದು.
೬. ಮಾತಿನ ಮಲ್ಲರನ್ನು ನಂಬಿದರೂ ಮಾಟಗಾತಿಯನ್ನು ನಂಬುವುದಕ್ಕಾಗದು.

ಮೇಲಿನ ಈ ಗಾದೆಗಳು ಗಂಡು ಮತ್ತು ಹೆಣ್ಣಿನ ಭಿನ್ನ ಪಾತ್ರ ನಿರ್ವಹಣೆಯ ಚಿತ್ರವನ್ನು ಕಟ್ಟಿಕೊಡುತ್ತವೆ. ಹೆಣ್ಣಿಗೆ ಹಟ ಇರಬಾರದು ಗಂಡಿಗೆ ಚಟ ಇರಬಾರದು, ಮಗ ಮಲಗಿ ಸೋಮಾರಿಯಾಗಿ ಕೆಟ್ಟರೆ ಸೊಸೆ ದುಡಿಯೋಕೆ ಹೋಗಿ ಕೆಟ್ಟಳು ಮುಂತಾದವುಗಳು ಒಂದು ಸಮಾಜದಲ್ಲಿನ ಪುರುಷ ಮತ್ತು ಸ್ತ್ರೀಯರ ಭಿನ್ನ ಪಾತ್ರಗಳನ್ನು ಕಟ್ಟಿಕೊಡುತ್ತವೆ. ಆದರೆ, ಇವು ಒಂದು ಹಂತದವರೆಗೆ ಮಾತ್ರ ಸೀಮಿತವಾಗುತ್ತವೆ. ಉದ್ಯೋಗಂ ಪುರುಷ ಲಕ್ಷಣಂ ಎಂಬ ನಿಲುವು ಇಂದು ಬದಲಾಗಿದೆ. ಉದ್ಯೋಗವು ಸ್ತ್ರೀ ಲಕ್ಷಣವೂ ಆಗಿದೆ.

**೪.೫. ಬೈಗುಳ: ಲಿಂಗಸಂಬಂಧಿ ನೆಲೆಗಳು**

ಸಮುದಾಯದ ಅಭಿವ್ಯಕ್ತಿ ನೆಲೆಗಳಲ್ಲಿ ಬೈಗುಳಗಳು ಪ್ರಮುಖ ಪಾತ್ರ ನಿರ್ವಹಿಸುತ್ತವೆ. ಮನಸ್ಸಿನ ಮೇಲೆ ಬೈಗುಳದಷ್ಟು ತೀವ್ರತರವಾದ ಪರಿಣಾಮವನ್ನು ಬೀರುವ ಭಾಷಿಕನೆಲೆ ಮತ್ತೊಂದು ಇರಲಾರದು. ಯಾವುದೇ ಅಡೆತಡೆ ಇಲ್ಲದೆ ಮನಸ್ಸಿನಲ್ಲಿರುವ ಎಲ್ಲ ವಿಷಯಗಳು ನೇರವಾಗಿ ಅಭಿವ್ಯಕ್ತಗೊಳ್ಳುತ್ತಿರುತ್ತವೆ. ಬೈಗುಳ ಮತ್ತು ಮಾತಿನ ಮಡಿವಂತಿಕೆ ಈ ಎರಡೂ ಪರಸ್ಪರ ವಿರೋಧದ ನೆಲೆಗಳಲ್ಲಿ ಚಲಿಸುವ ವಿಷಯುಗಳು. ಬೈಗುಳಗಳ ಬಳಕೆ ಸುಸಂಸ್ಕೃತತೆಯ ಲಕ್ಷಣವಲ್ಲ ಎಂಬ ಅಂಶ ಇಲ್ಲಿ ಕಾರ್ಯನಿರ್ವಹಿಸುತ್ತಿರುತ್ತದೆ.

ಪುರುಷ ಪ್ರಧಾನ ಸಮುದಾಯದಲ್ಲಿ ಭಾಷೆಯ ಬಳಕೆಯ ನೆಲೆಗಳಲ್ಲಿ ಗಂಡು ಮತ್ತು ಹೆಣ್ಣಿಗೆ ಸಂಬಂಧಿಸಿದಂತೆ ಕೆಲವು ನಿಯಮ ಮತ್ತು ನಿಷೇಧಗಳಿವೆ. ಉದಾಹರಣೆಗೆ 'ಅವನು ಗಂಡ್ಸು ಏನೇ ಮಾತಾಡಿದ್ರು ನಡೆಯುತ್ತೆ. ನೀನು ಒಬ್ಬ ಹೆಣ್ಣು ಮಗಳಾಗಿ ಹೀಗೆ ಮಾತಾಡಬಹುದಾ'! ಈ ರೀತಿಯ ಮಾತುಗಳು ಬಳಕೆಯಲ್ಲಿವೆ. ಇಲ್ಲಿ ಹೆಣ್ಣಿಗೆ ಭಾಷೆಯನ್ನು ಹೀಗೆ ಬಳಸಬೇಕೆಂಬ ನಿಯಮಗಳಿವೆ ಎಂಬುದು

ಮೇಲುನೋಟಕ್ಕೆ ಅನಿಸಿದರೂ ಅದನ್ನು ಪರಿಶೀಲಿಸುವ ಅಗತ್ಯವಿದೆ. ಎಲ್ಲ ವರ್ಗದ ಹೆಣ್ಣುಮಕ್ಕಳಿಗೂ ಈ ರೀತಿಯ ಮಾತುಗಳು ಅನ್ವಯವಾಗುತ್ತಿವೆಯೇ? ಅಥವಾ ಎಲ್ಲ ಹೆಣ್ಣುಮಕ್ಕಳು ಈ ನಿಯಮಗಳನ್ನು ಪಾಲಿಸುತ್ತಿದ್ದಾರೆಯೇ? ಎಂಬುದನ್ನು ಪರಿಶೀಲಿಸಬೇಕಾಗುತ್ತದೆ. ಈ ಅಂಶಗಳನ್ನು ಬೈಗುಳಗಳ ಬಳಕೆಯ ಹಿನ್ನೆಲೆಯಲ್ಲಿ ಪರಿಶೀಲಿಸಲಾಗಿದೆ.

ಬೈಗುಳಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿಕೊಂಡು ಅವುಗಳ ರಚನೆ ಮತ್ತು ಬಳಕೆಯ ಎರಡೂ ನೆಲೆಗಳನ್ನು ಪರಿಶೀಲಿಸಲಾಗಿದೆ. ಅವುಗಳೆಂದರೆ:

೧. ಮಹಿಳೆ ಕೇಂದ್ರವಾಗಿರುವ ಬೈಗುಳಗಳು

೨. ಅನೈತಿಕ ಸಂಬಂಧದ ಹಿನ್ನೆಲೆಯಲ್ಲಿ ಬಳಕೆಯಾಗುವ ಬೈಗುಳಗಳು

೩. ದೈಹಿಕ ದೌರ್ಬಲ್ಯಗಳ ಬೈಗುಳಗಳು

೪. ಅರ್ಥವಿಲ್ಲದ ರೂಢಿಗತ ನೆಲೆಯಲ್ಲಿ ಬೈಗುಳಗಳ ಬಳಕೆ

**೪.೩.೧. ಮಹಿಳೆ ಕೇಂದ್ರವಾಗಿರುವ ಬೈಗುಳಗಳು**

ಇದುವರೆಗಿನ ಬೈಗುಳಗಳ ಅಧ್ಯಯನಗಳಾದ 'ಕನ್ನಡ ಬಯ್ಗುಳಗಳ ಅಧ್ಯಯನ' ಸಿ.ಪಿ.ನಾಗರಾಜ, 'ಬೈಗಳುಗಳಲ್ಲಿ ಮಹಿಳೆ' ಹಂದ್ರಾಳ ಗವಿಸಿದ್ದಪ್ಪನವರ ಅಧ್ಯಯನಗಳ ಫಲಿತಗಳ ಪ್ರಕಾರ ಮಹಿಳೆಯರನ್ನು ಕೇಂದ್ರವಾಗಿಸಿಕೊಂಡು ಹೆಚ್ಚು ಬೈಗುಳಗಳು ಸೃಷ್ಟಿಯಾಗಿವೆ ಎಂಬುದಾಗಿದೆ. ಇದನ್ನು ಕೆಲವು ಉದಾಹರಣೆಗಳ ಮೂಲಕ ಪರಿಶೀಲಿಸುವುದಾದರೆ.

ಉದಾ: ೧. ನಿನ್ ಅಮ್ಮನ್
ನಿನ್ ಅಕ್ಕನ್
ನಿನ್ನಜ್ಜಿ
೨. ಮುಂಡೆಮಗ್ನೆ
ಬಡ್ಡಿಮಗ್ನೆ
ಬೋಸೂಡಿ ಮಗ್ನೆ

ಮೊದಲನೆ ಉದಾಹರಣೆಯ ಬಯ್ಗುಳಗಳನ್ನು ಎರಡು ನೆಲೆಗಳಿಂದ ಪರಿಶೀಲಿಸಬಹುದು.

೧. ಲೈಂಗಿಕ ಆಕ್ರಮಣಕಾರಿ ನಿಲುವು.

೨. ಕ್ರಿಯೆಯ ಹಿನ್ನೆಲೆ.

ಮೊದಲ ಮೂರು ಬೈಗುಳಗಳು ಪರಸ್ಪರ ಪುರುಷರ ನಡುವೆ ಬಳಕೆಯಾಗುತ್ತಿದ್ದರೂ ಅಲ್ಲಿ ಪರೋಕ್ಷವಾಗಿ ಹೆಣ್ಣು ಬಲಿಯಾಗುತ್ತಿದ್ದಾಳೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಒಬ್ಬ ಪುರುಷ ಮತ್ತೊಬ್ಬ ಪುರುಷನನ್ನು ಮಾನಸಿಕವಾಗಿ ಘಾಸಿಗೊಳಿಸಲು ಅಥವಾ ಅವನನ್ನು ಮತ್ತಷ್ಟು ಸಿಟ್ಟಿಗೇಳಿಸಲು ಅವನಿಗೆ ಸಂಬಂಧಪಟ್ಟಂತಹ ಹೆಣ್ಣುಮಕ್ಕಳ ಮೇಲೆ ಲೈಂಗಿಕ ಆಕ್ರಮಣ ನಡೆಸುವುದಾಗಿ ಹೇಳುವುದರ ಮೂಲಕ ಅವನನ್ನು ಮತ್ತಷ್ಟು ಪ್ರಚೋದಿಸುವುದು ಅವನ ಉದ್ದೇಶವಾಗಿರುತ್ತದೆ.

ನಿನ್ನ ಅಮ್ಮನ್ನಾ ಕೆಯ್ಯ, ನಿನ್ನ ಅಕ್ಕನ್ನಾ ಕೆಯ್ಯ ಎಂಬ ಬೈಗುಳಗಳಲ್ಲಿ ಬಳಕೆಯಾಗಿರುವ ಕ್ರಿಯಾಪದವನ್ನು ಪರಿಶೀಲಿಸುವುದಾದರೆ, ಕೆಯ್ಯ=ಲೈಂಗಿಕ ಕ್ರಿಯೆ ಮಾಡುವ ಎಂಬ ಅರ್ಥವನ್ನು ಈ ಕ್ರಿಯಾಪದ ಹೊಂದಿದೆ. ಲೈಂಗಿಕ ಕ್ರಿಯೆಯಲ್ಲಿ ಗಂಡು, ಹೆಣ್ಣು ಇಬ್ಬರೂ ಸಮಭಾಗಿಗಳಾಗಿದ್ದರೂ ಸಮಾಜದಲ್ಲಿ ಆದಿಕಾಲದಿಂದಲೂ ಲೈಂಗಿಕ ಕ್ರಿಯೆ ಅವನು ಮಾಡುವ ಮತ್ತು ಅವಳು ಪಡೆಯುವ ಕ್ರಿಯೆ ಎಂಬ ನಿಲುವು ಇರುವುದರಿಂದ ಹೆಣ್ಣು ಈ ರೀತಿಯ ಪದಗಳನ್ನು ಪುರುಷರಿಗೆ ಬಳಸಲಾರಳು. ಇದಕ್ಕೆ ಎರಡು ಕಾರಣಗಳನ್ನು ಗುರುತಿಸಬಹುದು.

೧. ಲೈಂಗಿಕತೆಗೆ ಸಂಬಂಧಿಸಿದಂತೆ ಸಮಾಜ ಹೆಣ್ಣಿಗೆ ವಿಧಿಸಿರುವ ಮಡಿವಂತಿಕೆ. ಅವಳು ಪುರುಷನಂತೆ ಸ್ವೇಚ್ಛಾಚಾರವಾಗಿ ಪರಪುರುಷರೊಂದಿಗೆ ಲೈಂಗಿಕ ಚಟುವಟಿಕೆಗಳನ್ನು ಮಾಡುವಂತಿಲ್ಲ.

೨. ಲೈಂಗಿಕ ಚಟುವಟಿಕೆಯಲ್ಲಿ ಪಡೆಯುವಿಕೆಗೆ ಮಾತ್ರ ಹೆಣ್ಣಿನ ಭಾಗವಹಿಸುವಿಕೆ ಸೀಮಿತ ಎಂಬ ನಿಲುವು.

ಈ ಕಾರಣಗಳಿಂದ ಪುರುಷನನ್ನು ಕೇಂದ್ರವಾಗಿಸಿಕೊಂಡು ಹೆಣ್ಣು ಲೈಂಗಿಕ ಬೈಗುಳಗಳನ್ನು ಬಳಸುವುದಿಲ್ಲ ಎಂದು ಊಹಿಸಬಹುದು. ಇಲ್ಲಿ ಮತ್ತೊಂದು ಅಂಶವನ್ನು ಪರಿಗಣಿಸಬೇಕಾಗುತ್ತದೆ. ಲೈಂಗಿಕ ಆಕ್ರಮಣಕಾರಿ ಬೈಗುಳಗಳು ಕೆಲವು ಸಂದರ್ಭಗಳಲ್ಲಿ ಮಹಿಳೆಯರನ್ನು ಮಾತ್ರ ಕೇಂದ್ರವಾಗಿರಿಸಿಕೊಂಡು ಬಳಕೆಯಾಗುವುದಿಲ್ಲ.

ಉದಾ: ನಿನ್ ಅಯ್ಯನಾಕೆಯ್ಯ
ನಿನ್ ಜಾತಿನಾಕೆಯ್ಯ

ಮುಂತಾದವುಗಳಲ್ಲಿ 'ಅಯ್ಯ' ಮತ್ತು 'ಜಾತಿ'ಯನ್ನು ಕೇಂದ್ರವಾಗಿರಿಸಿಕೊಂಡು ಬೈಗುಳಗಳನ್ನು ಬಳಸಲಾಗಿದೆ. ಇಲ್ಲಿ ಲೈಂಗಿಕ ಆಕ್ರಮಣಕಾರಿ ನಿಲುವು ಹಾಗೂ ಇಲ್ಲಿ ಬಳಕೆಯಾಗಿರುವ 'ಕೆಯ್ಯ' ಎಂಬ ಕ್ರಿಯಾಪದವು ಕೇವಲ ರೂಢಿಗತ ನೆಲೆಯಲ್ಲಿ ಮಾತ್ರ ಬಳಕೆಯಾಗಿರುವುದನ್ನು ಗಮನಿಸಬಹುದು. ಈ ಹಿನ್ನೆಲೆಯಲ್ಲಿ ಹೆಣ್ಣು ಹೆಣ್ಣಿಗೆ ಬಳಸುವ ಲೈಂಗಿಕ ಬೈಗುಳಗಳನ್ನು ಗಮನಿಸಬಹುದು.

ಉದಾ: ನಿನ್ನ ಹಿಡ್ಕೊಂಡ್ ನನ್ ಗಂಡ್ಕೇಯ
ನಿಮ್ಮಪ್ಪಾನಿನ್ ಕೆಯ್ಯ
ನಿನ್ನ ಹಿಡ್ಕೊಂಡ್ ಹೊಲೆಮಾದ್ಗ ಕೆಯ್ಯ

ಈ ಮಾದರಿಯ ಬೈಗುಳಗಳಲ್ಲಿ ಕೂಡ ಮತ್ತೊಬ್ಬ ಪುರುಷನಿಂದ ನಿನ್ನ ಮೇಲೆ ಲೈಂಗಿಕ ಆಕ್ರಮಣ ನಡೆಯಲಿ ಎಂದು ಒಂದು ಹೆಣ್ಣು ಮತ್ತೊಂದು ಹೆಣ್ಣಿಗೆ ಬೈಗುಳಗಳನ್ನು ಬಳಸುತ್ತಾಳೆ ಹಾಗೂ ಅಸಹಾಯಕತೆಯಿಂದಾಗಿ ಶಾಪರೂಪದ ಬೈಗುಳಗಳನ್ನು ಪರಸ್ಪರ ಹೆಂಗಸರು ಬಳಸಿಕೊಳ್ಳುತ್ತಾರೆ.

ಮಹಿಳೆಯರು ಪುರುಷರಿಗೆ ಬಳಸುವ ಕೆಲವು ಬೈಗುಳಗಳಿಗೆ ಉದಾಹರಣೆಗಳು:

ಉದಾ: ನಿನ್ ಮಕಕ್ಕೆ ನನ್ ಹಾಟುಯ್ಯ
ನಿನ್ ಗಂಟ್ಲಿಗೆ ನನ್ ಮಾಸಾಕಾ
ನಿನ್ ನೆತ್ತಿಗೆ ನನ್ ರಕ್ತಉಯ್ಯ.

ಮಹಿಳೆ ತನ್ನ ಮುಟ್ಟಿನ ಸಂದರ್ಭ, ಹೆರಿಗೆ ಸಂದರ್ಭದಲ್ಲಿನ ಕೆಲವು ವಿಷಯಗಳನ್ನು ಬೈಗುಳಗಳಲ್ಲಿ ಬಳಕೆ ಮಾಡುತ್ತಾಳೆ. ಹಾಗೂ ಪುರುಷನಿಗಿಂತ ದೈಹಿಕವಾಗಿ ದುರ್ಬಲಳಾಗಿರುವುದರಿಂದ ಶಾಪರೂಪದ ಬೈಗುಳಗಳನ್ನು ಹೆಚ್ಚು ಬಳಸುತ್ತಾಳೆ.

ಉದಾಹರಣೆ ಎರಡರ ಬೈಗುಳಗಳನ್ನು ಪರಿಶೀಲಿಸುವುದಾದರೆ, ಹೆಣ್ಣಿನ ಸಾಮಾಜಿಕ ಸ್ಥಿತಿಯನ್ನು ಹೀಯಾಳಿಸುವ ಹಿನ್ನೆಲೆಯಲ್ಲಿ ಈ ಬೈಗುಳಗಳು ಸೃಷ್ಟಿಯಾಗಿವೆ. ಗಂಡ ಇಲ್ಲದ ಹೆಣ್ಣಿನ ವೈಧವ್ಯದ ಸ್ಥಿತಿಯನ್ನು ಮುಂಡೆ, ಬೋಳಿ, ರಂಡೆ ಮುಂತಾದವುಗಳ ಮುಖಾಂತರ ಬೈಗುಳಗಳನ್ನಾಗಿ ಬಳಸಲಾಗುತ್ತಿದೆ. ಮುಂಡೆ ಪದಕ್ಕೆ ಸಂವಾದಿಯಾಗಿ 'ವಿಧವೆ' ಎಂಬ ಪದವಿದೆ. ಇದು ಸಂಸ್ಕೃತ ಪದ, ಒಂದು ವೇಳೆ ಸಂಸ್ಕೃತದಿಂದ ಈ ಪದವನ್ನು ಎರವಲು ಪಡೆಯದಿದ್ದರೆ ಹೆಣ್ಣಿನ ವೈಧವ್ಯ ಸ್ಥಿತಿಗೆ ಕನ್ನಡದಲ್ಲಿ ಮುಂಡೆ ಎಂಬ ಪದವನ್ನೇ ಬಳಸಬೇಕಾಗುತ್ತಿತ್ತು. ಆಗ ಇದು ಈಗಿನ ಬೈಗುಳದ ನೆಲೆಯಲ್ಲಿ ತನ್ನ ಅರ್ಥವನ್ನು ಹೊಂದಿರುತ್ತಿತ್ತೇ? ಎಂಬ ಪ್ರಶ್ನೆ ಎದುರಾಗುತ್ತದೆ. ಅದು ಹೆಣ್ಣಿನ ಗಂಡನಿಲ್ಲದ ಸ್ಥಿತಿಯನ್ನು ಮಾತ್ರ ಹೇಳುತ್ತಿತ್ತು.

ಹೆಣ್ಣಿನ ಜೀವನದ ಒಂದು ಸ್ಥಿತಿಯೂ ಸಮಾಜದಲ್ಲಿ ನಿಂದನಾ ರೂಪವಾಗಿ ಬದಲಾಗಲು ಕಾರಣಗಳೇನು? ಎಂಬುದನ್ನು ಪರಿಶೀಲಿಸಬಹುದು. ಪುರುಷಕೇಂದ್ರಿತ ಸಮಾಜದಲ್ಲಿ ಒಬ್ಬ ಗಂಡಿಗೆ ತನ್ನ ಹೆಂಡತಿಯ ಸಾವಿನ ನಂತರ ಮತ್ತೊಂದು ಮದುವೆಯಾಗಿ ಜೀವನ ನಡೆಸುವ ಅವಕಾಶವಿರುವುದರಿಂದ ವೈಧವ್ಯದ ಪರಿಕಲ್ಪನೆ ಅವನಿಗೆ ಅನ್ವಯವಾಗುವುದಿಲ್ಲ. ಹೆಣ್ಣಿಗೆ ಗಂಡನ ಸಾವಿನ ನಂತರ ಮತ್ತೊಂದು ಮದುವೆಯಾಗುವ ಅವಕಾಶವಿಲ್ಲದ ಕಾರಣ ಅವಳು ವೈಧವ್ಯದ ಜೀವನ ನಡೆಸಬೇಕಾಗುತ್ತದೆ. ಗಂಡ ಇದ್ದರೆ ಮಾತ್ರ ಸಮಾಜದಲ್ಲಿ ಆಕೆಗೆ ಮಾನ್ಯತೆ ಎಂಬ ನಿಲುವು ಸಮಾಜದಲ್ಲಿದ್ದಾಗ ಅವಳ ವೈಧವ್ಯದ ಸ್ಥಿತಿ ಅವಹೇಳನಕ್ಕೆ ಗುರಿಯಾಗುತ್ತದೆ. ಕಾಲಾಂತರದಲ್ಲಿ ಆ ಸ್ಥಿತಿ ಬೈಗುಳವಾಗಿ ರೂಪುಗೊಳ್ಳುತ್ತದೆ.

ಈ ಹಿನ್ನೆಲೆಯಲ್ಲಿ 'ಸವ್ತಿ' ಎಂಬ ಪದವನ್ನು ಪರಿಶೀಲಿಸಬಹುದು. ಒಬ್ಬ ಗಂಡಿಗೆ ಇಬ್ಬರು ಹೆಂಡತಿಯರು ಇರಬಹುದಾದ್ದರಿಂದ ಅವರಿಬ್ಬರ ನಡುವಿನ ಸಂಬಂಧವನ್ನು ಸೂಚಿಸುವ ಸಂಬಂಧವಾಚಕ ಸವತಿ ಎಂಬ ಪದ. ಈ ರೀತಿಯ ಪುರುಷನ ವೈವಾಹಿಕ ಸಂಬಂಧವನ್ನು ಸಮಾಜ ಕೂಡ ಮಾನ್ಯ ಮಾಡಿರುತ್ತದೆ. ಹೆಣ್ಣಿಗೆ ಸಂಬಂಧಪಟ್ಟಂತೆ ಈ ರೀತಿಯ ವೈವಾಹಿಕ ಸಂಬಂಧವನ್ನು ಸಮಾಜ ಮಾನ್ಯಮಾಡದೇ ಇರುವುದರಿಂದ ಅಂತಹ ಸಂಬಂಧಗಳನ್ನು ಸೂಚಿಸುವ ಸಂಬಂಧವಾಚಕ ರಚನೆಯಾಗಿಲ್ಲ.

**೪.೫.೨. ಅನೈತಿಕ ಸಂಬಂಧಗಳ ಹಿನ್ನೆಲೆಯಲ್ಲಿ ಬಳಕೆಯಾಗುವ ಬೈಗುಳಗಳು**

ಗಂಡು ಹೆಣ್ಣಿನ ದೈಹಿಕ ಸಂಪರ್ಕಕ್ಕೆ ಸಂಬಂಧಿಸಿದಂತೆ ಅನೇಕ ಕಟ್ಟುಪಾಡುಗಳು ಸಮಾಜದಲ್ಲಿರುತ್ತವೆ. ಈ ಕಟ್ಟುಪಾಡುಗಳು ಗಂಡು, ಹೆಣ್ಣು ಇಬ್ಬರಿಗೂ ಸಮಾನವಾಗಿ ಅನ್ವಯವಾಗುತ್ತಿರುತ್ತವೆ. ಒಂದು ವೇಳೆ ಈ ನಿಯಮಗಳನ್ನು ಗಂಡು ಮೀರಬಹುದಾದರೂ ಹೆಣ್ಣಿಗೆ ಇದು ಸಂಪೂರ್ಣ ನಿಷಿದ್ಧ. ಆದರೂ ಸಮಾಜದಲ್ಲಿ ಇಂತಹ ಕಟ್ಟುಪಾಡುಗಳ ಮೀರುವಿಕೆ ಸದಾ ಚಾಲ್ತಿಯಲ್ಲಿರುತ್ತದೆ. ಇದನ್ನು ಅನೈತಿಕ ಸಂಬಂಧವಾಗಿ ಪರಿಗಣಿಸಲಾಗುತ್ತದೆ. ಇಂತಹ ಅನೈತಿಕ ಚಟುವಟಿಕೆಗಳಲ್ಲಿ ತೊಡಗಿರುವ ಗಂಡು ಹೆಣ್ಣುಗಳಿಗೆ ಕೆಲವು ಪದಗಳು ರಚನೆಯಾಗಿರುತ್ತವೆ. ಉದಾಹರಣೆ ಹೆಣ್ಣಿಗೆ ಸೂಳೆ, ಹಾದರಗಿತ್ತಿ, ನಾಯಕ್ಸಾನಿ,

ಮಾಯಾಂಗ್ನೆ, ವೇಶ್ಯೆ, ವ್ಯಭಿಚಾರಿಣಿ, ಜಾರೆ ಬೈಗುಳಗಳನ್ನು ಬಳಸಲಾಗುತ್ತದೆ. ಗಂಡಿಗೆ, ಹಾದರಗಾಳ/ ಹಾದರಕೋರ, ಕಚ್ಚರ್ಕ, ವ್ಯಭಿಚಾರಿ, ಜಾರ ಮುಂತಾದವನ್ನು ಬಳಸಲಾಗುತ್ತದೆ.

ಮೇಲಿನ ಎಲ್ಲ ಪದಗಳು ದಿನನಿತ್ಯದ ಜೀವನದಲ್ಲಿ ಬೈಗುಳಗಳಾಗಿ ಬಳಕೆಯಾಗುವುದಿಲ್ಲ. ವ್ಯಭಿಚಾರಿಣಿ, ವೇಶ್ಯೆ, ಜಾರೆ ಪದಗಳು ಅವರು ಮಾಡುವ ಕೆಲಸವನ್ನು ಸೂಚಿಸುತ್ತವೆಯೇ ವಿನಃ ಬೈಗುಳಗಳಾಗಿ ಬಳಕೆಯಾಗುತ್ತಿಲ್ಲ. ಗಣಿಕೆ, ವಾರಾಂಗನೆ ಎಂಬ ಪದಗಳು ರಾಜರ ಆಳ್ವಿಕೆಯ ಕಾಲದಲ್ಲಿ ಬಳಕೆಯಲ್ಲಿದ್ದವು. ರಾಜರ ವಿವಾಹೇತರ ಸಂಬಂಧಗಳುಳ್ಳ ಹೆಣ್ಣುಗಳಿಗೆ ಈ ರೀತಿಯ ಪದಗಳನ್ನು ಬಳಸುತ್ತಿದ್ದರು. ಆ ಕಾಲದಲ್ಲಿ ಈ ವೃತ್ತಿಯೂ ಸಮಾಜದಲ್ಲಿ ಒಪ್ಪಿತ ವೃತ್ತಿಯಾಗಿತ್ತು. ಇವರು ಗೌರವಯುತ ಜೀವನವನ್ನು ನಡೆಸುತ್ತಿದ್ದರು. ಕಾಲಾಂತರದಲ್ಲಿ ಈ ವೃತ್ತಿಯು ಸಮಾಜದಲ್ಲಿ ನಿಕೃಷ್ಟ ವೃತ್ತಿಯಾಯಿತು. ಹಾಗಾಗಿ ಅವರನ್ನು ಗುರುತಿಸುವ ಪದಗಳು ಬೈಗುಳಗಳ ರೂಪತಾಳಿದವು. ಈ ರೀತಿಯ ಕೆಲವು ಪದಗಳ ರಚನೆ ಮತ್ತು ಬಳಕೆಯನ್ನು ಎರಡೂ ನೆಲೆಗಳಲ್ಲಿ ಪರಿಶೀಲಿಸಬೇಕಾಗುತ್ತದೆ.

ಸೂಳೆ: ಸೂಳ್+-ಎ=ಸೂಳೆ

ಸೂಳ್ ಪದದ ಅರ್ಥ:

ಸೂಳ್ – ಹೊತ್ತು, ಸಮಯ

ಆವೃತ್ತಿ, ಬಾರಿ

ರತಿಸುಖದ ಸರದಿ, ವೇಳೆ

ಸೂಳ್ ಎಂದರೆ ಸರದಿ, ಸಮಯ ಎಂಬ ಅರ್ಥವಿದೆ. ಇದಕ್ಕೆ ಪೂರಕವಾಗಿ ಸೂಳ್ನುಡಿ ಎಂಬ ಪದವನ್ನು ಗಮನಿಸಬಹುದು. ಸರದಿಯ ಪ್ರಕಾರ ಆಡುವ ಮಾತು ಎಂಬರ್ಥವಿದೆ. ಸೂಳ್ ಪದಕ್ಕೆ ಸ್ತ್ರೀವಾಚಕ ಪ್ರತ್ಯಯ 'ಎ'ಯನ್ನು ಸೇರಿಸಿ ಸೂಳೆ ಎಂಬ ಪದ ರಚಿತವಾಗಿದೆ ಎಂದು ಊಹಿಸಲು ಸಾಧ್ಯವಿದೆ. ಸರದಿಯ ಪ್ರಕಾರ ರತಿ ಸುಖವನ್ನು ನೀಡುವವಳು ಅಥವಾ ರತಿಸುಖದ ವೇಳೆಯಲ್ಲಿ ಅದನ್ನು ನೀಡುವ ಹೆಣ್ಣು ಎಂಬ ಅರ್ಥದಲ್ಲಿ ಈ ಪದ ರಚಿತವಾಗಿದೆ. ಒಂದು ಕಾಲದಲ್ಲಿ ಇದು ಒಂದು ವೃತ್ತಿಯಾಗಿ ಸಮಾಜದಲ್ಲಿ ಚಾಲ್ತಿಯಲ್ಲಿತ್ತು ಎಂಬುದು ಸೂಳೆಗಾರಿಕೆ, ಸೂಳೆಗೇರಿ ಎಂಬ ಪದಗಳಿಂದ ತಿಳಿಯುತ್ತದೆ. ಅದಕ್ಕೆಂದೇ ಊರುಗಳಲ್ಲಿ ಪ್ರತ್ಯೇಕ ಕೇರಿಗಳು ಇರುತ್ತಿದ್ದವು. ಇವರ ಮೇಲ್ವಿಚಾರಕರಿಗೆ ಸೂಳೆವಳ/ಸೂಳೆವಾಳ ಎಂದು ಕರೆಯಲಾಗುತ್ತಿತ್ತು. 'ಸೂಱಾಯ್ತೆ' ಎಂಬ ಹಳಗನ್ನಡ ರೂಪವು ಸೇವಕಿ, ದಾಸಿ ಎಂಬ ಅರ್ಥವನ್ನು ಹೊಂದಿದೆ. ಸೂಳೆ ಎಂಬ ಪದವು ರತಿಸುಖವನ್ನು ನೀಡುವ ಹೆಣ್ಣು ಎಂಬ ಅರ್ಥದ ನೆಲೆಯಿಂದ ವ್ಯಭಿಚಾರ ಮಾಡುವ ವೇಶ್ಯೆ ಎಂಬ ಅರ್ಥದ ನೆಲೆಗೆ ಯಾವಾಗ ಬಂದು ನಿಲ್ಲುತ್ತದೆ ಎಂದರೆ, ಆ ವೃತ್ತಿ ಸಮಾಜದಲ್ಲಿ ಮಾನ್ಯತೆಯನ್ನು ಕಳೆದುಕೊಂಡ ನಂತರ, ಅದು ಹೀನಾರ್ಥ ಅಥವಾ ಬೈಗುಳದ ನೆಲೆಗೆ ಬಂದು ನಿಲ್ಲುತ್ತದೆ.

'ಸೂಳೆಗ' ಎಂಬ ಪದ ನಿಘಂಟುವಿನಲ್ಲಿದೆ. ಜಾರ, ವ್ಯಭಿಚಾರಿ ಎಂಬ ಅರ್ಥವನ್ನು ನಿಘಂಟುಗಳು ಈ ಪದಕ್ಕೆ ನೀಡಿವೆ. ಸೂಳೆ ಎಂಬ ಪದಕ್ಕೆ ಸಂವಾದಿಯಾಗಿ ಪುರುಷರಿಗೆ ಈ ಪದವನ್ನು ಸಾಧಿಸಲಾಗಿದೆ. ಆದರೆ, ಈ ಪದ ಸಹಜವಾಗಿ ರೂಪುಗೊಂಡಿಲ್ಲ. ಸೂಳೆ ಎಂಬ ಪದಕ್ಕೆ ಪುರುಷವಾಚಕ 'ಗ' ಪ್ರತ್ಯಯವನ್ನು

ಸೇರಿಸಿ ಸಾಧಿಸಲ್ಪಟ್ಟ ರೂಪವಾಗಿದೆ. ಈ ಪದ ಸಾಮಾಜಿಕವಾಗಿ ಬಳಕೆಯಲ್ಲಿಲ್ಲ. ಗಂಡು ಅನೈತಿಕ ಚಟುವಟಿಕೆಗಳಲ್ಲಿ ತೊಡಗಿದರೂ ಅದನ್ನು ಗುರುತಿಸುವ ಪ್ರತ್ಯೇಕ ಪದ ರಚನೆಯಾಗಿಲ್ಲ. ಇದ್ದರೂ ಅವು ಸಾಧಿಸಲ್ಪಟ್ಟ ರೂಪಗಳಾಗಿವೆ. ಇದಕ್ಕೆ ಪೂರಕವಾಗಿ ಹಾದರ ಪದವನ್ನು ವಿಶ್ಲೇಷಿಸಬಹುದು:

ಉದಾ: ಹಾದರ = ಪರಸ್ತ್ರೀಗಮನ, ಸಂಸರ್ಗ
ವ್ಯಭಿಚಾರ, ಜಾರತನ

ಹಾದರ+–ಗಿತ್ತಿ = ಹಾದರಗಿತ್ತಿ

ಹಾದರ+–ಗಾಳ/–ಕೋರ/–ಇಗ=ಹಾದರಗಾಳ/ಹಾದರಕೋರ/ಹಾದರಿಗ

'ಹಾದರ' ಪದಕ್ಕೆ ಪರಸ್ತ್ರೀಗಮನ ಎಂಬ ಅರ್ಥವಿದೆ. ಅದು ಪುರುಷಮೂಲೀಯ ಅರ್ಥವನ್ನು ನೀಡುತ್ತದೆ. ಅಂದರೆ, ಒಬ್ಬ ಪುರುಷ ಪರಸ್ತ್ರೀಯರ ಜೊತೆ ಹೊಂದಿರುವ ಅನೈತಿಕ ಸಂಬಂಧವನ್ನು ಈ ಪದ ಹೇಳುತ್ತಿದೆ. ನಿಘಂಟಿನ ಅರ್ಥದ ಪ್ರಕಾರ ಹಾದರ ಪದಕ್ಕೆ ಪುರುಷವಾಚಕ ಪ್ರತ್ಯಯ, ಸ್ತ್ರೀವಾಚಕ ಪ್ರತ್ಯಯಗಳನ್ನು ಸೇರಿಸದೆ ಇದ್ದರೂ ಆ ಪದ ಪರಸ್ತ್ರೀಯರ ಸಂಸರ್ಗ ಮಾಡುವ ಪುರುಷನನ್ನೇ ಸೂಚಿಸುತ್ತಿದೆ. ಆದರೆ, ಸಾಮಾಜಿಕವಾಗಿ ಈ ಪದ ಬಳಕೆಯಾದಾಗ ಅದರ ಅರ್ಥದ ನೆಲೆ ಮೊದಲು ಅನ್ವಯವಾಗುವುದು ಪರಪುರುಷನ ಸಂಸರ್ಗ ಮಾಡುವ ಮಹಿಳೆಯರಿಗೆ. ಹಾದರಗಿತ್ತಿ ಬೈಗುಳ ಬಳಕೆಯಾಗುವಷ್ಟು ಪ್ರಮಾಣದಲ್ಲಿ ಹಾದರಗಾಳ ಬೈಗುಳ ಬಳಕೆಯಾಗುವುದಿಲ್ಲ.

ಹಾದರ ಪದದ ರಚನೆಯ ದೃಷ್ಟಿಯಿಂದ ನೋಡಿದರೆ ಅದು ಪರಪುರುಷ ಮತ್ತು ಪರಸ್ತ್ರೀಯರೊಡನೆ ದೈಹಿಕ ಸಂಬಂಧ ಹೊಂದಿರುವ ಗಂಡು, ಹೆಣ್ಣು ಇಬ್ಬರಿಗೂ ಅನ್ವಯವಾಗುತ್ತದೆ. ಆದರೆ, ಬಳಕೆಯ ನೆಲೆಗೆ ಬಂದಾಗ ಸಾಮಾಜಿಕವಾಗಿ ಹೆಣ್ಣಿಗೆ ಹೆಚ್ಚು ಬಳಕೆಯಾಗುತ್ತಿದೆ. ಇದಕ್ಕೆ ಮತ್ತೊಂದು ಕಾರಣವನ್ನು ಊಹಿಸಬಹುದು. ಹೆಣ್ಣು ಗಂಡಿನ ಬಳಿ ಹೋಗಿ ಹಣ ಕೊಟ್ಟು ಲೈಂಗಿಕ ಸುಖವನ್ನು ಪಡೆಯುವ ಪರಿಪಾಠವಿಲ್ಲದ ಕಾರಣ ಅವನನ್ನು ಅರ್ಥದ ನೆಲೆಯಲ್ಲಿ ಕೀಳಾಗಿಸುವ ಪದಗಳು ಹೆಚ್ಚು ಸೃಷ್ಟಿಯಾಗಿಲ್ಲ. ಹಣಕ್ಕಾಗಿ ಮೈಮಾರಿಕೊಳ್ಳುವವಳು ಎಂದು ಲಘುವಾಗಿ ಹೆಣ್ಣನ್ನು ಸಮಾಜ ಪರಿಗಣಿಸಿದ್ದರಿಂದ ಅರ್ಥದ ನೆಲೆಯಲ್ಲಿ ಕೀಳಾಗಿ ಕಾಣುವ ಪದಗಳು ಅವಳಿಗೆ ಹೆಚ್ಚು ಅನ್ವಯವಾಗತೊಡಗಿದವು.

ಮಿಂಡ್ರಿ ಎಂಬ ಪದವು ಬಳಕೆಯ ನೆಲೆಯಲ್ಲಿ ಸ್ವಲ್ಪ ಭಿನ್ನವಾಗಿ ನಿಲ್ಲುತ್ತದೆ. ಇದರ ಕೆಲವು ಪ್ರಯೋಗಗಳನ್ನು ಗಮನಿಸಬಹುದು:

೧. ಮಿಂಡ್ರಿ ಮುಂಡೆ – ಮಿಂಡನನ್ನು ಹೊಂದಿರುವ ಹೆಣ್ಣು.

೨. ಮಿಂಡ್ರಿಗೆ ಹುಟ್ಟಿದ ನನ್ ಮಗ್ನೆ – ಅನೈತಿಕ ಸಂಬಂಧದಿಂದ ಜನಿಸಿದ ಮಗು.

೩. ಹೈಮಿಂಡ್ರಿ – ಹೆಚ್ಚು ಅನೈತಿಕ ಚಟುವಟಿಕೆಯಲ್ಲಿ ತೊಡಗಿರುವ ಗಂಡು.

ಮಿಂಡ್ರಿ ಎಂಬ ಬೈಗುಳವು ಮಿಂಡನನ್ನು ಹೊಂದಿರುವ ಹೆಣ್ಣಿಗೆ ಅನ್ವಯವಾಗಿ ಬಳಕೆಯಾಗುತ್ತಿದ್ದರೂ ಅದೇ ಪದ ಅನೈತಿಕ ಚಟುವಟಿಕೆಯಲ್ಲಿ ತೊಡಗಿರುವ ಗಂಡಿಗೂ ಸಮಾನಾಂತರವಾಗಿ

ಬಳಕೆಯಾಗುತ್ತಿರುವುದನ್ನು ಗಮನಿಸಬಹುದು. 'ಮಿಂಡ್ರಿನನ್ ಮಗ' ಎಂಬ ಬೈಗುಳ ರೂಪ ಪುರುಷನಿಗೆ ಬಳಕೆಯಾದಾಗ ಅದು ಅನೈತಿಕ ಚಟುವಟಕೆಯಿಂದ ಹುಟ್ಟಿದ ಮಗು ಎಂಬ ತಾಯಿ ಕೇಂದ್ರಿತವಾದ ಒಂದು ಅರ್ಥವನ್ನು ಸೂಚಿಸಿದರೆ, ಪರಸ್ತ್ರೀಯರೊಂದಿಗೆ ಅನೈತಿಕ ಚಟುವಟಿಕೆ ನಡೆಸುತ್ತಿರುವ ಪುರುಷ ಎಂಬ ಮತ್ತೊಂದು ಅರ್ಥವನ್ನು ಸೂಚಿಸುತ್ತಿದೆ. ಈ ಬೈಗುಳದಲ್ಲಿ ಪುರುಷ ಮೂಲದಿಂದ ಹಾಗೂ ಸ್ತ್ರೀ ಮೂಲದಿಂದ ಎರಡೂ ಕಡೆಯಿಂದಲೂ ಇದರ ಅರ್ಥವನ್ನು ಗ್ರಹಿಸಬಹುದು.

**೪.೫.೩. ದೈಹಿಕ ದೌರ್ಬಲ್ಯಗಳ ಬೈಗುಳಗಳು**

ಮನುಷ್ಯರ ಕೆಲವು ದೈಹಿಕ ದೌರ್ಬಲ್ಯಗಳ ಹಿನ್ನೆಲೆಯಲ್ಲಿ ಕೆಲವು ಬೈಗುಳ ರೂಪಗಳು ಸೃಷ್ಟಿಯಾಗಿವೆ. ಅದರಲ್ಲೂ ಮಾನವ ಸಮುದಾಯದ ಮುಂದುವರಿಕೆಗೆ ಅವಶ್ಯಕವಾಗಿ ಬೇಕಾಗಿರುವುದು ಮುಂದಿನ ತಲೆಮಾರು. ಅಂತಹ ಸಂತಾನಶಕ್ತಿಯ ಕೊರತೆಯಿರುವ ಪುರುಷ ಮತ್ತು ಸ್ತ್ರೀಯರು ಸಮಾಜದ ನಿಂದನಗೆಗಳಿಗೆ ಒಳಗಾಗುತ್ತಾರೆ. ಇಂತಹ ಕೆಲವು ಬೈಗುಳ ರೂಪಗಳನ್ನು ಪರಿಶೀಲಿಸುವುದಾದರೆ, ಪುರುಷನ ನಪುಂಸಕತ್ವವನ್ನು ಕುರಿತ ಬೈಗುಳಗಳು ಈ ಮುಂದಿನಂತಿವೆ.

ಉದಾ: **ಪುರುಷನಿಗೆ**

| | |
|---|---|
| ಕೈಲಾಗದವನೆ | ಶಂಡ |
| ನರಸತ್ತೋನೆ | ಸುಳಿ ಇಲ್ಲದೊನೆ |
| ಹೆಣ್ಗ | ನಾಮರ್ಧ |
| ಸಂಗ | ಕ್ವಾಜ ಮುಂತಾದವುಗಳು. |

ಹೆಣ್ಣಿಗೆ ಮಕ್ಕಳಾಗದ ಸ್ಥಿತಿಯನ್ನು ಕುರಿತಂತೆ ಇರುವ ಬೈಗುಳಗಳು ಈ ಮುಂದಿನಂತಿವೆ.

ಉದಾ: ಬಂಜೆ, ಗೊಡ್ಡಿ, ಸುಳಿ ಬೆಳೆ ಇಲ್ಲದೊಳೆ ಮುಂತಾದವುಗಳು.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಮಕ್ಕಳಾಗದ ಸ್ಥಿತಿಗೆ ಗಂಡು ಹೆಣ್ಣು ಇಬ್ಬರೂ ಸಮಭಾಗಿಗಳಾದರೂ ಹೆಣ್ಣು ಹೆಚ್ಚು ನಿಂದನೆಗೆ ಗುರಿಯಾಗುತ್ತಾಳೆ. ಆದರೆ, ಸಂಖ್ಯೆಯ ದೃಷ್ಟಿಯಿಂದ ನೋಡಿದರೆ ಗಂಡಿನ ನಪುಂಸಕತ್ವವನ್ನು ಹೇಳುವ ಪದಗಳು ಹೆಚ್ಚು ರಚನೆಯಾಗಿರುವುದನ್ನು ಗಮನಿಸಬಹುದು. ಪುರುಷ ಕೇಂದ್ರಿತ ಸಮಾಜದಲ್ಲಿ ಗಂಡಿನಿಂದಲೇ ವಂಶ ಮುಂದುವರೆಯುತ್ತದೆ ಎಂಬ ನಂಬಿಕೆಯಿರುವುದರಿಂದ ಅಂಥ ದೋಷವಿರುವ ಪುರುಷರಿಗೆ ಹೆಚ್ಚು ಬೈಗುಳ ರೂಪಗಳು ಸೃಷ್ಟಿಯಾಗಿರಬಹುದು. ಆದರೆ, ಸಾಮಾಜಿಕವಾಗಿ ಕೆಲವು ಆಚರಣೆಗಳ ಸಂದರ್ಭಗಳಲ್ಲಿ ಮಕ್ಕಳಿಲ್ಲದ ಹೆಣ್ಣು ಹೆಚ್ಚು ಅವಮಾನಕ್ಕೆ ಗುರಿಯಾಗುತ್ತಾಳೆ ವಿನಃ ಪುರುಷ ಗುರಿಯಾಗುವುದಿಲ್ಲ.

ಒಂದು ಬೈಗುಳ ಮೇಲುನೋಟಕ್ಕೆ ಒಂದು ಅರ್ಥವನ್ನು ಹೇಳುತ್ತಿದ್ದರೂ ಅದನ್ನು ಮೀರಿದ ಅರ್ಥಗ್ರಹಿಕೆ ಆ ಬೈಗುಳಕ್ಕೆ ಇರುತ್ತದೆ. ಉದಾಹರಣೆಗೆ ಹೆಣ್ಣಿಗ ಮತ್ತು ಗಂಡುಬೀರಿ ಬೈಗುಳಗಳನ್ನು ಈ ಹಿನ್ನೆಲೆಯಲ್ಲಿ ಪರಿಶೀಲಿಸಬಹುದು.

ಹೆಣ್ಣಿಗ – ಹೆಣ್ಣಿನಂತೆ ವರ್ತಿಸುವವನು.

ಗಂಡುಬೀರಿ – ಗಡಿನಂತೆ ವರ್ತಿಸುವವಳು.

ಸಮಾಜದ ನಿರ್ಬಂಧ, ನಿರೀಕ್ಷೆಗಳನ್ನು ಮೀರಿದ ಗಂಡು, ಹೆಣ್ಣುಗಳಿಗೆ ಈ ರೀತಿಯ ಬೈಗುಳಗಳನ್ನು ಬಳಸಲಾಗುತ್ತದೆ. ಇಲ್ಲಿ ಹೆಣ್ಣಿಗ ಎಂದರೆ ಹೆಣ್ಣಿನಂತೆ ವರ್ತಿಸುವವನು ಎನ್ನುವುದಕ್ಕಿಂತ ಹೆಣ್ಣಿನಂತೆ ವರ್ತಿಸಬೇಡ ಎಂದು ನಿರ್ದೇಶನ ನೀಡುತ್ತಿರುವ ಅರ್ಥದ ನೆಲೆ ಮುಖ್ಯವಾಗುತ್ತದೆ. ಅದೇ ರೀತಿ ಗಂಡುಬೀರಿ ಎಂದರೆ ಗಂಡಿನಂತೆ ವರ್ತಿಸುವವಳು ಎನ್ನುವುದಕ್ಕಿಂತ ಹಾಗೆ ವರ್ತಿಸಬೇಡ ಎಂಬ ನೆಲೆಯಲ್ಲಿ ಈ ಬೈಗುಳ ಬಳಕೆಯಾಗುತ್ತಿರುತ್ತದೆ.

**೪.೫.೪. ಅರ್ಥವಿಲ್ಲದ ರೂಢಿಗತ ನೆಲೆಯಲ್ಲಿ ಬೈಗುಳಗಳ ಬಳಕೆ**

ಬೈಗುಳಗಳ ಬಳಕೆಯ ಹೆಚ್ಚಿನ ಸಂದರ್ಭಗಳಲ್ಲಿ ಅವುಗಳ ರಚನೆಯಾದ ಅರ್ಥದ ಹಿನ್ನೆಲೆಯಲ್ಲಿ ಬಳಕೆಯಾಗುವುದಿಲ್ಲ. ತಮ್ಮ ಸಿಟ್ಟನ್ನು ಹೊರಹಾಕುವಾಗ ಸಮಾಜದಲ್ಲಿ ರೂಢಿಯಲ್ಲಿರುವ ಎಲ್ಲ ಬಗೆಯ ಬೈಗುಳಗಳನ್ನು ಎಲ್ಲರೂ ಬಳಕೆಮಾಡುತ್ತಾರೆ. ಅವುಗಳನ್ನು ಕೆಲವು ಪ್ರಯೋಗಗಳ ಮುಖಾಂತರ ಪರಿಶೀಲಿಸಬಹುದು:

ತಂದೆ ಮಗನಿಗೆ – ಏಯ್ ಸೂಳೆಮಗನೆ ಹುಟ್ಬಿಲ್ಲ ಅನಿಸ್ತೀನಿ.

ತಾಯಿ ಮಗಳಿಗೆ – ಲೇ ಹಾದರಗಿತ್ತಿ ಮುಂಡೆ ಕೆಲ್ಸ ಬಿಟ್ಟು ಮಾತಾಡ್ತಾ ನಿಂತಿದ್ದೀಯಾ ನಿನ್ನ್ ಮಿಂಡ ಬಂದು ಮಾಡ್ತಾನಾ?

ತಾಯಿ ಮಗನಿಗೆ – ಮಿಂಡ್ರಿಗುಟ್ಟಿದೋನೆ ಯಾಕೋ ನನ್ನ ಹೊಟ್ಟೆ ಉರಿಸ್ತೀಯಾ?

ಪ್ರಶಂಸಾ ನುಡಿಗಳು – ಸೂಳೆಮಗ ಏನ್ ಚೆನ್ನಾಗಿ ಹಾಡ್ತಾನೆ.

ಮೇಲಿನ ಉದಾಹರಣೆಗಳಲ್ಲಿರುವ ಯಾವುದೇ ಬೈಗುಳವೂ ಅದರ ನಿಜವಾದ ಅರ್ಥದ ನೆಲೆಯಲ್ಲಿ ಬಳಕೆಯಾಗಿಲ್ಲ. ತಂದೆ ಮಗನಿಗೆ ಸೂಳೆಮಗನೆ ಎಂದು ಬಳಸಿದರೆ ತನ್ನ ಹೆಂಡತಿ ಸೂಳೆ ಎಂಬ ಅರ್ಥ ಬರುವುದಿಲ್ಲ. ತಾಯಿ ಮಗಳಿಗೆ ಹಾದರಗಿತ್ತಿ, ಮುಂಡೆ ಎಂಬ ಬೈಗುಳಗಳನ್ನು ಬಳಸಿದರೆ ತನ್ನ ಮಗಳು ಹಾದರ ಮಾಡುವವಳು, ಗಂಡ ಇಲ್ಲದ ವಿಧವೆ ಎಂಬ ಅರ್ಥಗಳು ಬರುವುದಿಲ್ಲ.

ಉತ್ತರ ಕರ್ನಾಟಕದ ಭಾಗಗಳಲ್ಲಿ ಪ್ರಶಂಸಾ ನುಡಿಗಳಲ್ಲಿ ಬೈಗುಳಗಳನ್ನು ಬಳಸುವ ಪರಿಪಾಠವಿದೆ. ಸೂಳೆಮಗ ಏನ್ ಚೆನ್ನಾಗಿ ಹಾಡ್ತಾನೆ ಎಂದರೆ ಅವನನ್ನು ಕೀಳಾಗಿಸುವ ಯಾವುದೇ ಅರ್ಥ ಅಲ್ಲಿಲ್ಲ. ಕೆಲವು ಸಮುದಾಯಗಳಲ್ಲಿ ಚಿಕ್ಕ ಮಕ್ಕಳಿಗೆ ಸಿಟ್ಟಿನಿಂದ ಹಾಗೂ ಪ್ರೀತಿಯಿಂದ 'ಮುಂಡೇದೆ' ಎಂದು ಬಳಸುತ್ತಾರೆ. ಇದು ವಿಧವೆ ಎಂಬ ಅರ್ಥದ ನೆಲೆಗೆ ಬರುವುದಿಲ್ಲ. ತಂದೆ ಮಗನಿಗೆ ಬೈಯುವ ನೆಲೆಯಲ್ಲಿ ಮಗಳಿಗೆ ಬೈಯುವುದು ಬಹಳ ಕಡಿಮೆ. ಲೈಂಗಿಕತೆಯ ಹಿನ್ನೆಲೆಯಲ್ಲಿ ರಚನೆಯಾಗಿರುವ ಬೈಗುಳಗಳನ್ನು ಬಳಸುವುದು ಬಹಳ ಕಡಿಮೆ.

ಒಟ್ಟಾರೆ ಬೈಗುಳಗಳ ರಚನೆ ಮತ್ತು ಬಳಕೆ ಎರಡೂ ನೆಲೆಗಳನ್ನು ಗಮನಿಸುವುದಾದರೆ, ಸಮಾಜ ಮನುಷ್ಯರಿಗೆ ಸಂಬಂಧಿಸಿದಂತೆ ರೂಪಿಸಿರುವ ಕಟ್ಟುಪಾಡುಗಳನ್ನು ಪುರುಷ ಅಥವಾ ಮಹಿಳೆ ಯಾರೇ ಮೀರಿದರೂ ಅವರು ನಿಂದನೆಗೆ ಗುರಿಯಾಗುವುದು ಸಹಜ. ಇಂತಹ ನಿಂದನೆಗಳು ರಚನೆಯಾದಾಗಿನ ನೆಲೆಯಲ್ಲಿಯೇ ಎಲ್ಲ ಸಂದರ್ಭಗಳಲ್ಲೂ ಬಳಕೆಯಾಗುವುದಿಲ್ಲ. ಸಮಾಜದ ಎಲ್ಲ ರೀತಿಯ ನಿಂದನೆಗಳಿಗೆ ಮೊದಲು ಸ್ತ್ರೀ ಒಳಗಾದರೂ ಪುರುಷನಿಗೂ ಎಲ್ಲ ಕಟ್ಟುಪಾಡುಗಳು ಅನ್ವಯವಾಗುತ್ತವೆ. ಅದನ್ನು ಮೀರಿದಾಗ ಅವನಿಗೂ ನಿಂದನೆಗಳುಂಟು. ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿಗಿಂತ ಗಂಡಿಗೆ ಸ್ವಾತಂತ್ರ್ಯ ಅಧಿಕವಾಗಿರುವುದರಿಂದ ಅವಳು ನಿಂದನೆಗಳಿಗೆ ಬೇಗ ಗುರಿಯಾಗುತ್ತಾಳೆ. ಹಾಗಾಗಿ ಮಹಿಳಾ ಕೇಂದ್ರಿತ ಬೈಗುಳಗಳ ಸಂಖ್ಯೆ ಹೆಚ್ಚಾಗಿವೆ.

**೪.೬. ಒಡಪುಗಳು: ಲಿಂಗ ಸಂಬಂಧಿ ಗ್ರಹಿಕೆಗಳು**

ಕೆಲವು ಮಂಗಳಕರ ಸಂದರ್ಭಗಳಲ್ಲಿ ಒಡಪುಗಳ ಪ್ರಯೋಗ ಬಳಕೆಯಲ್ಲಿದೆ ಅದರಲ್ಲೂ ಹೆಚ್ಚು ಬಳಕೆಯಲ್ಲಿರುವುದು ಮದುವೆಯ ವಿವಿಧ ಆಚರಣೆಗಳ ಸಂದರ್ಭಗಳಲ್ಲಿ. ಉದಾ: ಆರತಿ, ಹೊಸ್ತಿಲು ದಾಟುವ ಶಾಸ್ತ್ರ ಮುಂತಾದವುಗಳು. ಈಗಲೂ ಹಳ್ಳಿಗಳಲ್ಲಿ ಗಂಡನ ಹೆಸರಿಡಿದು ಕರೆಯುವಿಕೆಗೆ ನಿಷೇಧವಿರುವುದನ್ನು ಕಾಣಬಹುದು. ಹೆಸರಿಡಿದು ಕರೆದರೆ ಅಪಚಾರವಾಗುತ್ತದೆ, ಆಯಸ್ಸು ಕಡಿಮೆಯಾಗುತ್ತದೆ ಎಂಬ ನಂಬಿಕೆಗಳು ಇಲ್ಲಿ ಕಾರ್ಯನಿರ್ವಹಿಸುತ್ತಿರುತ್ತವೆ. ಇಂತಹ ಸಂದರ್ಭಗಳಲ್ಲಿ ಹೆಸರನ್ನು ಹೇಳುವಾಗ ಅವರ ಗುಣವಿಶೇಷಣಗಳ ಮೂಲಕ ಒಡಪು ಕಟ್ಟಿ ಹೇಳುವ ಸಂಪ್ರದಾಯವಿದೆ. ಒಂದು ಸಮುದಾಯದಲ್ಲಿ ಗಂಡು ಮತ್ತು ಹೆಣ್ಣುಗಳಿಗೆ ಸಂಬಂಧಿಸಿದಂತೆ ಅವರವರ ಗುಣವಿಶೇಷಣಗಳನ್ನು ಹೇಳುವ ಸಂದರ್ಭಗಳಲ್ಲಿ ಲಿಂಗ ಸಂಬಂಧಿ ಗ್ರಹಿಕೆಗಳನ್ನು ಪರಿಶೀಲಿಸಬಹುದು.

ಒಡಪುಗಳಲ್ಲಿ ಸಮಾಜದಲ್ಲಿನ ಸ್ತ್ರೀಯರ ಬಗೆಗಿನ ಪುರುಷರ ದೃಷ್ಟಿಕೋನ, ಪುರುಷರ ಬಗೆಗಿನ ಸ್ತ್ರೀಯರ ದೃಷ್ಟಿಕೋನ ವ್ಯಕ್ತವಾಗುತ್ತಿರುತ್ತವೆ. ಈ ಹಿನ್ನೆಲೆಯಲ್ಲಿ ಒಡಪುಗಳನ್ನು ಕಟ್ಟುವಿಕೆಯಲ್ಲಿರುವ ಲಿಂಗ ಸಂಬಂಧಿ ಧೋರಣೆಗಳನ್ನು ಎರಡು ನೆಲೆಗಳಲ್ಲಿ ಪರಿಶೀಲಿಸಬಹುದು.

೧. ಸ್ತ್ರೀಯರು ಕಟ್ಟುವ ಒಡಪುಗಳು

೨. ಪುರುಷರು ಕಟ್ಟುವ ಒಡಪುಗಳು

ಭಾಷೆಯಲ್ಲಿ ಹೆಣ್ಣುಮಕ್ಕಳಿಗೆ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಅನೇಕ ನಿಷೇಧಗಳಿವೆ ಎಂಬ ವಿಚಾರದ ಹಿನ್ನೆಲೆಯಲ್ಲಿ ಒಡಪುಗಳು ಭಿನ್ನವಾಗಿ ನಿಲ್ಲುತ್ತವೆ. ಅದರಲ್ಲೂ ಮೇಲ್ವರ್ಗ ಮತ್ತು ಕೆಳವರ್ಗದ ಮಹಿಳೆಯರು ಕಟ್ಟುವ ಒಡಪುಗಳಲ್ಲೂ ಭಿನ್ನತೆಯನ್ನು ಗುರುತಿಸಬಹುದು. ಮೇಲ್ವರ್ಗದ ಮಹಿಳೆಯರು ಗಂಡನ ಆದರ್ಶ ಗುಣ, ಒಳ್ಳೆಯತನಗಳನ್ನು ಹೊಗಳಿ ಒಡಪುಗಳನ್ನು ಕಟ್ಟುತ್ತಾರೆ. ಅವರನ್ನು ದೇವರಿಗೆ ಹೋಲಿಸುತ್ತಾರೆ. ಅವನನ್ನು ಪಡೆದದ್ದು ನನ್ನ ಭಾಗ್ಯ, ಪುಣ್ಯ ಎಂಬಂಥ ನೆಲೆಯಲ್ಲಿ ಒಡಪುಗಳನ್ನು ಕಟ್ಟುತ್ತಾರೆ. ಎಲ್ಲಿಯೂ ಅವನ ಅವಗುಣಗಳನ್ನು ಹೇಳುವುದಿಲ್ಲ.

ಉದಾ: ೧. ಹತ್ತು ಬೆರಳಿಗೆ ಹತ್ತುಂಗರ ಇಟ್ಟು
ನಡುವಿನ ಬೆರಳಿಗೆ ಮುತ್ತಿನುಂಗುರ ಇಟ್ಟು
ಹತ್ತು ಜನದೊಳಗೆ ಉತ್ತಮವಾಗಿ ಬರ್ತಾರೆ ನಮ್ಮೆಜಮಾನ್ರು

೨. ನೋಡಲ್ಲಿ ತೂಗುತಿದೆ ಜೀವನದ ಜೋಕಾಲಿ
ಅದರಲ್ಲಿ ನಡೆಯುತಿದೆ ಮಾನವನ ಉಯ್ಯಾಲೆ
ನಮ್ಮ ರಾಯರ ಕೃಪಾ ಛತ್ರದಲ್ಲಿ ಪಾಲಿತಳಾದ ನಾನೆ ಭಾಗ್ಯಶಾಲಿ.

ಬ್ರಾಹ್ಮಣ ಸಮುದಾಯದ ಕೆಲ ಮಹಿಳೆಯರು ಒಡಪುಗಳ ಕೊನೆಯಲ್ಲಿಯೂ ತಮ್ಮ ಗಂಡನ ಹೆಸರನ್ನು ಹೇಳುವುದಿಲ್ಲ. ಬದಲಿಗೆ 'ರಾಯರು' ಎಂದಷ್ಟೇ ಹೇಳಿ ಸುಮ್ಮನಾಗುತ್ತಾರೆ.

ಉದಾ: ವಿಘ್ನೇಶ್ವರನಲ್ಲಿ ಬೇಡುವೆನು ಕೊಡು ಎಂದು ಮತಿ
ಮದುವೆಯಾಗಿ ನಾನಾದೆ ನಮ್ಮ ರಾಯರ ಸತಿ

ಒಟ್ಟಾರೆ ಮೇಲ್ವರ್ಗದ ಮಹಿಳೆಯರು ಸಮಾಜ ರೂಪಿಸಿರುವ ಆದರ್ಶ ಪತಿ–ಪತ್ನಿಯರ ಕಲ್ಪನೆಯ ಹಿನ್ನೆಲೆಯಲ್ಲಿಯೇ ಒಡಪುಗಳನ್ನು ಕಟ್ಟುತ್ತಾರೆ. ಆದರೆ, ಕೆಳವರ್ಗದ ಮಹಿಳೆಯರು ಆದರ್ಶ ಸತಿಪತಿಯರ ಕಲ್ಪನೆಯ ಜೊತೆಗೆ ಗಂಡನ ಸೋಮಾರಿತನ, ಶೋಕಿ, ಒರಟುತನ, ನಪುಂಸಕತ್ವ, ಪರಸ್ತ್ರೀಯರ ಸಹವಾಸವನ್ನು ಕುರಿತು ನೇರವಾಗಿ ಹೇಳುವುದರ ಮೂಲಕ ಒಡಪುಗಳನ್ನು ಕಟ್ಟುತ್ತಾರೆ.\

ಉದಾ: ೧. ತೆಳ್ಳಾನ ರೊಟ್ಟಿ
ಬೆಳ್ಳಾನ ಮೊಸರು
ನೆಳ್ಳಾಗೆ ಕೂತ್ಕೊಂಡು
ನ್ಯಾಯ ತೆಗಿತಾನ.

೨. ಅಡಿಕೆ ಹಾಕ್ಕಂಡು ಕಿಟಕಿನ್ಯಾಗೆ ನೋಡ್ತಾರೆ
ಲವಂಗ ಹಾಕ್ಕಂಡು ಲೋಲ್ ಮಾಡ್ತಾರೆ
ಹೂವಿನಂಥ ಹುಡ್ಗಿ ಕಂಡರೆ
ಹುಬ್ಬು ಹಾರುಸ್ತಾರೆ.

೩. ಸಣ್ಣಕ್ಕಿ ತರೋರಿಲ್ಲ
ದೊಡ್ಡಕ್ಕಿ ಉಣ್ಣೋರಿಲ್ಲ
ಹರಗಕ್ಕೆ ಹೋಗಂದ್ರೆ
ತಿರುಗಕ್ಕೆ ಹೋಗ್ಯಾರೆ.

೪. ಅಕ್ಕಿನುಚ್ಚು ಮಲ್ಲಿಗೆ ಕುಚ್ಚು
ನನ್ಗಂಡಗೆ ಹಿಡಿದೈತೆ
ಸೂಳೇರ ಹುಚ್ಚು.

೫. ಆರು ಸೇರು ಎಳ್ಳು
ಮೂರು ಸೇರು ಜೊಳ್ಳು
ನನ್ಗಂಡ ಹೇಳೋದೆಲ್ಲ ಬರಿಸುಳ್ಳು.

೬. ಗೊಂದ್ಲೀಗಿ ಮನಕ್ಕಂಡು
ಮಾಲದಿ ಮೇಯುತ್ತಾರೆ ರಾಯರು.

ಈ ಮೇಲಿನ ಒಡಪುಗಳಲ್ಲಿ ಹೆಣ್ಣು ತನ್ನ ಗಂಡನ ಸ್ವಭಾವಗಳನ್ನು ಮುಕ್ತವಾಗಿ ಅಭಿವ್ಯಕ್ತಿಸಿದ್ದಾಳೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಮೇಲ್ವರ್ಗದ ಹೆಣ್ಣುಮಕ್ಕಳು ತಮ್ಮ ಗಂಡಂದಿರನ್ನು ಏಕವಚನದಲ್ಲಿ ಸಂಬೋಧಿಸುವುದಿಲ್ಲ. ಕೆಳವರ್ಗದ ಹೆಣ್ಣುಮಕ್ಕಳಲ್ಲಿ ಏಕವಚನ, ಬಹುವಚನ ಎರಡೂ ಬಳಕೆಯಲ್ಲಿರುವುದನ್ನು ಗಮನಿಸಬಹುದು.

ಪುರುಷರು ಕಟ್ಟುವ ಒಡಪುಗಳಲ್ಲಿ ಸ್ತ್ರೀಯರ ಬಗೆಗಿನ ಪಾರಂಪರಿಕ ಮೌಲ್ಯಗಳನ್ನೇ ಕಾಣಬಹುದು. ಆದರ್ಶ ಸ್ತ್ರೀತ್ವ, ತ್ಯಾಗಮಯತೆ, ಸರಳತೆ ಮುಂತಾದ ಗುಣಗಳ ಅಪೇಕ್ಷೆ ಅವರ ಒಡಪುಗಳಲ್ಲಿ ಕಾಣುತ್ತೇವೆ.

ಉದಾ: ೧. ಕಾಡೋಳಲ್ಲ ಬೇಡೋಳಲ್ಲ
ಚಾಡಿಮಾತು ಕೇಳೋಳಲ್ಲ
ಇದ್ದದ್ರಲ್ಲಿ ಸಂತೋಷ ಪಡ್ತಾಳೆ.

೨. ಗುಂಗುರು ಕೂದಲೋಳೆ
ಮಂಗನ ಭುಜದೋಳೆ
ಅಂಗಳಾದಾಗೆ ಕೂತ್ಕೊಂಡು
ರಂಗೋಲಿ ಹಾಕ್ತಾಳೆ.

ಸಮುದಾಯ ಮಾನ್ಯ ಮಾಡಿರುವ ಸ್ತ್ರೀಯರ ಪಾರಂಪರಿಕ ನಡವಳಿಕೆಗಳಿಗೆ ವಿರುದ್ಧವಾದ ನಡವಳಿಕೆಗಳನ್ನು ತಿರಸ್ಕಾರದ ಮುಖಾಂತರ ಹೊರಹಾಕುವಿಕೆಯನ್ನು ಕೆಲವು ಒಡಪುಗಳಲ್ಲಿ ಕಾಣುಬಹುದು.

ಉದಾ: ೧. ಹಕ್ಕೇಗಳ ಸಗಣೆ
ಗೋಡೆ ಮ್ಯಾಗ್ಳ ತಿಗಣೆ
ತಿಕ್ಕಿ ನೋಡಂದ್ರೆ
ನೆಕ್ಕಿ ನೋಡ್ತಾಳೆ

೨. ತರಕು ತಲೆ ಬಿಟ್ಕಂಡು
ಹರಕು ಸ್ಯಾಲೆ ಉಟ್ಕಂಡು
ಇಣ್ಕಿನೋಡ್ತಾಳೆ

೩. ಕರಿ ಹೊಲ್ದಾಗೆ ಕರಕಿ
ನನ್ಹೆಣ್ತಿ ಬಲು ಬೆರಕಿ
ಕಾರೆ ಗಿಡ್ದಾಗೆ ಕೂರೆ ಕುಕ್ತಾಳೆ

೪. ತೂತು ಗಡಿಗೇಲಿ
ತೂಗುಡಿಸ್ಗಂಡು ನೀರು ತರ್ತಳೆ.

ಮೇಲಿನ ಒಡಪುಗಳಲ್ಲಿ ಹೆಣ್ಣಿನ ದಡ್ಡತನ, ಸೋಮಾರಿತನ, ಚಂಚಲತೆ ಮುಂತಾದ ಗುಣಗಳನ್ನು ಕಾಣಬಹುದು. ಸೌಮ್ಯತೆ, ಮೌನ, ತ್ಯಾಗಮಯತೆಯನ್ನೇ ಸಮಾಜ ಹೆಣ್ಣಿನಿಂದ ಸದಾ ಬಯಸುತ್ತಿರುತ್ತದೆ.

ಅದಕ್ಕೆ ವಿರುದ್ಧವಾದ ಗುಣಗಳನ್ನು ತಿರಸ್ಕಾರದಿಂದ ಪರಿಗಣಿಸುತ್ತದೆ ಎಂಬುದಕ್ಕೆ ಈ ಮೇಲಿನ ಒಡಪುಗಳು ಉದಾಹರಣೆಗಳಾಗಿ ನಿಲ್ಲುತ್ತವೆ.

ಒಟ್ಟಾರೆ ಒಡಪುಗಳು ಮತ್ತು ಲಿಂಗ ಸಂಬಂಧಿ ಗ್ರಹಿಕೆಗಳನ್ನು ಪರಿಶೀಲಿಸುವುದಾದರೆ, ಸಮಾಜದಲ್ಲಿ ಗಂಡಿನ ಬಗೆಗಿನ ಮುಕ್ತ ಅಭಿವ್ಯಕ್ತಿ ಹೆಣ್ಣಿಗೆ ಸಾಧ್ಯವಾಗಿಲ್ಲ ಎಂಬ ನಿಲುವು ಇಲ್ಲಿ ಭಿನ್ನವಾಗುತ್ತದೆ. ಎಲ್ಲ ವರ್ಗದ ಹೆಣ್ಣುಮಕ್ಕಳ ಅಭಿವ್ಯಕ್ತಿ ಕ್ರಮ ಒಂದೇ ರೀತಿಯಾಗಿರುವುದಿಲ್ಲ. ಕೆಳವರ್ಗದ ಹೆಣ್ಣುಮಕ್ಕಳು ತಮ್ಮ ಗಂಡಂದಿರ ಬಗೆಗಿನ ಅಸಮಾಧಾನವನ್ನು ಮುಕ್ತವಾಗಿ ಒಡಪುಗಳ ಮುಖಾಂತರ ಅಭಿವ್ಯಕ್ತಿಸಿದ್ದಾರೆ.

ಒಟ್ಟಾರೆ ಈ ಅಧ್ಯಾಯದಲ್ಲಿ ಭಾಷಾ ಬಳಕೆಯ ಸ್ತರಗಳಲ್ಲಿ ವ್ಯಕ್ತಿನಾಮಗಳು, ಸಂಬೋಧನಾ ರೂಪಗಳು, ಗಾದೆಗಳು, ಒಡಪುಗಳು, ಬೈಯ್ಗುಳಗಳಲ್ಲಿರುವ ಲಿಂಗಸಂಬಂಧಿ ಗ್ರಹಿಕೆಗಳನ್ನು ಪರಿಶೀಲಿಸಲಾಗಿದೆ. ಒಂದು ಸಮುದಾಯ ಪುರುಷ ಮತ್ತು ಸ್ತ್ರೀಯರ ಬಗೆಗೆ ಹೊಂದಿರುವ ನಿಲುವುಗಳು ಆ ಭಾಷೆಯ ಬಳಕೆಯ ವಿವಿಧ ಸ್ತರಗಳಲ್ಲಿ ಹೇಗೆ ಅಭಿವ್ಯಕ್ತಗೊಂಡಿದೆ ಎಂಬುದನ್ನು ಪರಿಶೀಲಿಸಲಾಗಿದೆ. ಆಧುನಿಕ ಸಂದರ್ಭದಲ್ಲಿ ವ್ಯಕ್ತಿನಾಮಗಳಲ್ಲಿ ಸ್ತ್ರೀ, ಪುರುಷರಲ್ಲಿ ಯಾವುದೇ ಭೇದವನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಸಂಬೋಧನಾ ರೂಪಗಳಲ್ಲಿ ಪುರುಷರು ಮಾತ್ರವಲ್ಲದೆ ಸ್ತ್ರೀಯರು ಏಕವಚನವನ್ನು ಬಳಸುತ್ತಾರೆ. ಒಡಪುಗಳಲ್ಲಿ ಗಂಡಿನ ಬಗೆಗೆ ಹೆಣ್ಣಿನ ಮುಕ್ತ ಅಭಿವ್ಯಕ್ತಿಗಳನ್ನು ಗುರುತಿಸಿಕೊಳ್ಳಲಾಗಿದೆ.

ಅಧ್ಯಾಯ–ಐದು

# ಪ್ರಾಯೋಗಿಕ ಅಧ್ಯಯನಗಳು

೫.೧. ಪದಗಳ ಅರ್ಥಗಳನ್ನು ಬರೆಸುವುದು
೫.೨. ಪದಗಳ ವಾಕ್ಯ ರಚಿಸಲು ಹೇಳಿರುವುದು
೫.೩. ಬರಹಗಳಲ್ಲಿನ ಲಿಂಗಭಿನ್ನತೆ ಗುರುತಿಸಲು ಹೇಳಿರುವುದು

## ಅಧ್ಯಾಯ–ಐದು

# ಪ್ರಾಯೋಗಿಕ ಅಧ್ಯಯನಗಳು

ಭಾಷೆಯ ರಚನೆ, ಬಳಕೆ ಮತ್ತು ಆಶಯ ಮೂರು ಸ್ತರಗಳಲ್ಲಿ ಪುರುಷನ ಹಿತಾಸಕ್ತಿಯನ್ನು ಬಿಂಬಿಸುತ್ತದೆ ಎಂಬುದು ಸ್ತ್ರೀವಾದಿಗಳ ನಿಲುವು. ಕೆಲವು ಉದಾಹರಣೆಗಳ ಮುಖಾಂತರ ಅದನ್ನು ಸಾಬೀತುಪಡಿಸಲು ಪ್ರಯತ್ನಿಸಿದ್ದಾರೆ. 'ಕನ್ನಡ ಭಾಷೆ: ಲಿಂಗಸಂಬಂಧಿ ಆಯಾಮಗಳು' ಎಂಬ ಈ ಅಧ್ಯಯನದ ಹಿಂದಿನ ಮೂರು ಅಧ್ಯಾಯಗಳಲ್ಲಿ ಭಾಷೆ ಮೂಲತಃ ಲಿಂಗ ತಾರತಮ್ಯದ ನೆಲೆಯಿಂದ ರಚಿತವಾಗಿಲ್ಲ ಎಂಬ ಅಂಶವನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ. ಹಾಗೂ ಭಾಷೆಯ ಬಳಕೆಯ ಕೆಲವು ನೆಲೆಗಳಲ್ಲಿ ಮತ್ತು ಭಾಷೆಯ ಮುಖಾಂತರ ಸಮುದಾಯ ವ್ಯಕ್ತಪಡಿಸುವ ಆಶಯದ ಸ್ತರಗಳಲ್ಲಿ ನಿರ್ಬಂಧಗಳು, ನಿಯಮಗಳು ಹೇಗೆ ಭಾಷಾ ಬಳಕೆಯನ್ನು ನಿಯಂತ್ರಿಸುತ್ತಿರುತ್ತವೆ ಎಂಬುದನ್ನು ಪರಿಶೀಲಿಸಲಾಗಿದೆ. ಈ ಹಿನ್ನೆಲೆಯಲ್ಲಿ ಸ್ತ್ರೀವಾದಿಗಳ ಕೆಲವು ನಿಲುವುಗಳು ಹಾಗೂ ಈ ಅಧ್ಯಯನದ ಮುಖಾಂತರ ಕಂಡುಕೊಂಡ ಕೆಲವು ವಿಚಾರಗಳನ್ನು ಈ ಅಧ್ಯಾಯದಲ್ಲಿ ಪ್ರಾಯೋಗಿಕ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಭಾಷೆಯಲ್ಲಿನ ಲಿಂಗತಾರತಮ್ಯವನ್ನು ಪರಿಶೀಲಿಸುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಎರಡು ನೆಲೆಗಳಲ್ಲಿ ಭಾಷೆ ಬಳಕೆಯನ್ನು ಗುರುತಿಸಬಹುದು.

೧. ಸಹಜ ಅಭಿವ್ಯಕ್ತಿ ಕ್ರಮ: ಯಾವುದೇ ನಿಲುವು, ಧೋರಣೆಗಳನ್ನು ಒಳಗೊಳ್ಳದೆ ಅಪ್ರಜ್ಞಾಪೂರ್ವಕವಾಗಿ ಸಹಜವಾಗಿ ಅಭಿವ್ಯಕ್ತವಾಗುವ ಕ್ರಮ.

೨. ಧೋರಣೆ: ಲಿಂಗ ಸಂಬಂಧಿಯಾದ ಕೆಲವು ಧೋರಣೆ, ನಿಲುವುಗಳಿಗೆ ಒಳಪಟ್ಟು ಬಹಳ ಪ್ರಜ್ಞಾಪೂರ್ವಕವಾಗಿ ಭಾಷೆಯನ್ನು ಬಳಕೆ ಮಾಡುವ ಕ್ರಮ.

ಉದಾ: ೧. ಶಿಕ್ಷಕ/ಕಿ
ಅರ್ಜಿದಾರ/ದಾರೆ
೨. ಕಂಡೆಕ್ಟರಿಣಿ

ಸ್ವಾಮಿಣಿ

ವೈದ್ಯೆ

ಅಧಿಕಾರಿಣಿ ಮುಂತಾದವುಗಳು.

ಈ ಎರಡು ರೀತಿಯ ಅಭಿವ್ಯಕ್ತಿ ಕ್ರಮಗಳು ಒಂದು ವಿದ್ಯಾವಂತ ಗುಂಪಿನಲ್ಲಿ ಹೇಗೆ ಬಳಕೆಯಾಗುತ್ತಿವೆ ಎಂಬುದನ್ನು ಪರಿಶೀಲಿಸುವ ಉದ್ದೇಶದಿಂದ ಸಂಶೋಧನಾ ವಿದ್ಯಾರ್ಥಿಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಯಿತು. ಈ ಪ್ರಾಯೋಗಿಕ ಅಧ್ಯಯನಕ್ಕೆ ಕನ್ನಡ ವಿಶ್ವವಿದ್ಯಾಲಯದ ಸಂಶೋಧನಾ ವಿದ್ಯಾರ್ಥಿಗಳನ್ನು ಬಳಸಿಕೊಳ್ಳಲಾಗಿದೆ. ಸಂಶೋಧನಾ ವಿದ್ಯಾರ್ಥಿಗಳನ್ನು ಮಾತ್ರ ಆಯ್ಕೆ ಮಾಡಿಕೊಳ್ಳಲು ಕಾರಣವೆಂದರೆ, ಪುರುಷ ಮತ್ತು ಮಹಿಳೆಯರ ಸಮಾನ ವಿದ್ಯಾಭ್ಯಾಸದ ಮಟ್ಟ. ಮೂರು ವಿಧಾನಗಳ ಮುಖಾಂತರ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಅವುಗಳೆಂದರೆ:

೧. ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಸಮಾನವಾಗಿ ಅನ್ವಯವಾಗುವ ಪದಗಳನ್ನು ನೀಡಿ ಅವುಗಳಿಗೆ ಅರ್ಥ ಬರೆಸುವುದು. ಇಲ್ಲಿ ೨೦ ಪುರುಷರು ಮತ್ತು ೨೦ ಮಹಿಳೆಯರನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

೨. ತಟಸ್ಥ ಅರ್ಥಗಳನ್ನು ನೀಡುವ ಕೆಲವು ಪದಗಳನ್ನು ನೀಡಿ ಎರಡು ಮೂರು ವಾಕ್ಯಗಳನ್ನು ರಚಿಸಲು ಹೇಳುವುದು. ಇಲ್ಲಿ ೧೦ ಪುರುಷರು ಮತ್ತು ೧೦ ಮಹಿಳೆಯರನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

೩. ಪುರುಷರ ಕೆಲವು ಬರಹಗಳು, ಸ್ತ್ರೀಯರ ಕೆಲವು ಬರಹಗಳನ್ನು ನೀಡಿ ಅದರಲ್ಲಿ ಯಾವುದು ಪುರುಷರ ಬರಹ, ಯಾವುದು ಸ್ತ್ರೀಯರ ಬರಹ ಎಂದು ಗುರುತಿಸಲು ಹೇಳುವುದು. ಹಾಗೇ ಗುರುತಿಸಲು ಕಾರಣಗಳೇನು ಎಂಬುದನ್ನು ಸಂಗ್ರಹಿಸುವುದು. ಪುರುಷ ಮತ್ತು ಸ್ತ್ರೀ ಬರಹವೆಂದು ಗುರುತಿಸಲು ಸಾಧ್ಯವಾಗದಾಗ ಅದಕ್ಕೆ ಕಾರಣವೇನೆಂಬುದನ್ನು ಪರಿಶೀಲಿಸುವುದು. ಇಲ್ಲಿ ೧೦ ಪುರುಷರು ೧೦ ಮಹಿಳೆಯರನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**೫.೧. ಪದಗಳ ಅರ್ಥಗಳನ್ನು ಬರೆಸುವುದು**

ಸ್ತ್ರೀವಾದಿಗಳು ಪದಗಳ ರಚನೆ ಮತ್ತು ಬಳಕೆ ಎರಡೂ ನೆಲೆಗಳಲ್ಲಿ ಪುರುಷಮೂಲೀಯ ದೃಷ್ಟಿಕೋನವಿದೆ ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ. ಹಾಗೂ ಇಂದಿನ ಪತ್ರಿಕೆಗಳು ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಅನ್ವಯವಾಗುವ ಪದಗಳನ್ನು ಪುರುಷವಾಚಕಗಳೆಂದು ತಿಳಿದು ಅವುಗಳಿಗೆ ಸ್ತ್ರೀವಾಚಕ ಪ್ರತ್ಯಯಗಳನ್ನು ಸೇರಿಸಿ, ಪದಗಳನ್ನು ಸೃಷ್ಟಿಮಾಡುತ್ತಿವೆ.

ಉದಾ: ಸಹಭಾಗಿ – ಸಹಭಾಗಿಣಿ

ತ್ಯಾಗಿ – ತ್ಯಾಗಿಣಿ, ಮುಂತಾದವುಗಳು.

ಈ ರೀತಿಯ ಪ್ರಕ್ರಿಯೆಗಳ ಹಿನ್ನೆಲೆಯಲ್ಲಿ ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಅನ್ವಯವಾಗುವ ಪದಗಳನ್ನು ಒಂದು ವಿದ್ಯಾವಂತ ಗುಂಪಿಗೆ ನೀಡಿ ಅವುಗಳಿಗೆ ಅರ್ಥಗಳನ್ನು ಬರೆಸುವಿಕೆಯ ಮುಖಾಂತರ ಪರೀಕ್ಷಿಸುವುದಾಗಿದೆ. ಅಂದರೆ ಇಲ್ಲಿ ಒಂದು ತಟಸ್ಥ ಅರ್ಥವನ್ನು ನೀಡುವ ಪದವನ್ನು ಆ ಸಮುದಾಯದ

ವಿದ್ಯಾವಂತ ವರ್ಗ ಹೇಗೆ ಪರಿಗ್ರಹಿಸಿ ಬಳಕೆಮಾಡುತ್ತಿದೆ ಎಂಬುದನ್ನು ತಿಳಿದುಕೊಳ್ಳುವುದಾಗಿದೆ. ಸಾಮಾನ್ಯ ಜನತೆಗೆ ಸ್ತ್ರೀವಾದದ ಪರಿಚಯವಾಗಲಿ, ಭಾಷಾ ಬಳಕೆಯಲ್ಲಿರುವ ಭಿನ್ನತೆ, ತಾರತಮ್ಯದ ನೆಲೆಗಳ ತಿಳಿವಳಿಕೆ ಇರುವುದಿಲ್ಲ. ಈ ಅಂಶಗಳನ್ನು ತಿಳಿದಿರುವ ಸಂಶೋಧನಾ ವಿದ್ಯಾರ್ಥಿಗಳು ತಟಸ್ಥ ಅರ್ಥವಿರುವ ಪದಗಳನ್ನು ಹೇಗೆ ಗ್ರಹಿಸುತ್ತಾರೆ ಹಾಗೂ ಹೇಗೆ ಬಳಕೆ ಮಾಡುತ್ತಾರೆ ಎಂಬುದನ್ನು ಪರಿಶೀಲಿಸುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ. ಇದರ ಜೊತೆಗೆ ಸಮುದಾಯದಲ್ಲಿನ ಲಿಂಗ ತಾರತಮ್ಯದ ಆಶಯಗಳು ಈ ವಿದ್ಯಾವಂತ ವರ್ಗವನ್ನು ಕೂಡ ಅಪ್ರಜ್ಞಾಪೂರ್ವಕ ನೆಲೆಯಲ್ಲಿ ನಿಯಂತ್ರಿಸುತ್ತಿವೆಯೇ ಎಂಬುದನ್ನು ಪರಿಶೀಲಿಸುವ ಉದ್ದೇಶವನ್ನು ಈ ಅಧ್ಯಯನ ಒಳಗೊಂಡಿದೆ.

ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಅನ್ವಯವಾಗುವ ೨೦ ಪದಗಳನ್ನು ಅವುಗಳ ಅರ್ಥ ಬರೆಯಲು ನೀಡಲಾಗಿತ್ತು. ಅವುಗಳಿಗೆ ಪುರುಷರು ನೀಡಿರುವ ಪುರುಷಮೂಲೀಯ ಅರ್ಥಗಳು ಮತ್ತು ತಟಸ್ಥ ಅರ್ಥಗಳ ಸಂಖ್ಯೆ ಹಾಗೂ ಮಹಿಳೆಯರು ನೀಡಿರುವ ಪುರುಷಮೂಲೀಯ ಅರ್ಥಗಳು, ಮಹಿಳಾಪರ ಅರ್ಥಗಳು ಮತ್ತು ತಟಸ್ಥ ಅರ್ಥಗಳ ಸಂಖ್ಯೆಗಳನ್ನು ಈ ಮುಂದಿನ ಪಟ್ಟಿಗಳಲ್ಲಿ ನೀಡಲಾಗಿದೆ. ಪಟ್ಟಿ ೧ರಲ್ಲಿ ಸಂಖ್ಯೆಗಳಲ್ಲಿ ಪುರುಷರು ಮತ್ತು ಮಹಿಳೆಯರು ನೀಡಿರುವ ಅರ್ಥಗಳನ್ನು ತಿಳಿಸಲಾಗಿದೆ. ಪಟ್ಟಿ ೨ರಲ್ಲಿ ಅದರ ಒಟ್ಟಾರೆ ಶೇಕಡಾವಾರು  ಪ್ರಮಾಣವನ್ನು ತಿಳಿಸಲಾಗಿದೆ.

ಪಟ್ಟಿ ೧

| ಕ್ರ ಸಂ | ಪದ | ಪುರುಷವಾಚಕವಾಗಿ ಬಳಕೆ ಮಾಡಿದವರು | | ಸ್ತ್ರೀವಾಚಕವಾಗಿ ಬಳಕೆ ಮಾಡಿದವರು | | ತಟಸ್ಥ ಅರ್ಥದಲ್ಲಿ ಬಳಕೆಮಾಡಿದವರು | | ಏನನ್ನೂ ಗುರುತಿಸದವರ ಸಂಖ್ಯೆ |
|---|---|---|---|---|---|---|---|---|
| | | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | |
| ೦೧ | ಅನುಭವಿ | ೧೦ | ೭ | ೦ | ೦ | ೬ | ೯ | ೮ |
| ೦೨ | ಸಹಭಾಗಿ | ೮ | ೫ | ೦ | ೦ | ೧೩ | ೧೧ | ೩ |
| ೦೩ | ಅನನ್ಯ | ೧ | ೦ | ೦ | ೦ | ೧೯ | ೧೬ | ೪ |
| ೦೪ | ಅನಾಮಧೇಯ | ೬ | ೮ | ೦ | ೦ | ೧೫ | ೮ | ೩ |
| ೦೫ | ಮೌನಿ | ೧೦ | ೬ | ೦ | ೦ | ೧೧ | ೧೦ | ೩ |
| ೦೬ | ಅನಿಕೇತನ | ೦ | ೫ | ೦ | ೦ | ೧೮ | ೧೧ | ೬ |
| ೦೭ | ಗಿರಾಕಿ | ೧೭ | ೧೧ | ೦ | ೦ | ೨ | ೫ | ೫ |
| ೦೮ | ಅಭಿಮಾನಿ | ೯ | ೫ | ೦ | ೧ | ೧೧ | ೧೦ | ೪ |
| ೦೯ | ವ್ಯಭಿಚಾರಿ | ೧೨ | ೫ | ೩ | ೬ | ೫ | ೫ | ೪ |
| ೧೦ | ಗಯ್ಯಾಳಿ | ೧೪ | ೫ | ೦ | ೦ | ೬ | ೧೧ | ೪ |
| ೧೧ | ಆರೋಪಿ | ೧೩ | ೭ | ೦ | ೦ | ೮ | ೯ | ೩ |
| ೧೨ | ವಿಜ್ಞಾನಿ | ೧೭ | ೧೧ | ೦ | ೦ | ೩ | ೫ | ೪ |
| ೧೩ | ಉಗ್ರಗಾಮಿ | ೧೫ | ೬ | ೦ | ೦ | ೪ | ೧೦ | ೫ |
| ೧೪ | ತ್ಯಾಗಿ | ೧೬ | ೯ | ೦ | ೦ | ೫. | ೭ | ೩ |
| ೧೫ | ಕುರೂಪಿ | ೧೦ | ೪ | ೦ | ೦ | ೧೧ | ೧೨ | ೩ |
| ೧೬ | ಪ್ರತಿಗಾಮಿ | ೫ | ೭ | ೦ | ೦ | ೧೪ | ೯ | ೫ |
| ೧೭ | ಬುದ್ಧಿಗೇಡಿ | ೧೨ | ೯ | ೦ | ೦ | ೮ | ೭ | ೪ |
| ೧೮ | ವ್ಯಾಪಾರಿ | ೧೪ | ೧೦ | ೦ | ೦ | ೪ | ೬ | ೬ |
| ೧೯ | ದಾನಿ | ೧೫ | ೧೦ | ೦ | ೦ | ೫ | ೬ | ೪ |
| ೨೦ | ವಿರಕ್ತ | ೧೬ | ೬ | ೦ | ೦ | ೪ | ೮ | ೬ |

ಪಟ್ಟಿ ೨

| ಕ್ರ ಸಂ | ಪದ | ಪುರುಷವಾಚಕವಾಗಿ ಬಳಕೆ ಮಾಡಿದವರು | ಸ್ತ್ರೀವಾಚಕವಾಗಿ ಬಳಕೆಮಾಡಿದವರು | ತಟಸ್ಥ ಅರ್ಥದಲ್ಲಿ ಬಳಕೆ ಮಾಡಿದವರು |
|---|---|---|---|---|
| ೦೧ | ಅನುಭವಿ | ೫೩% | ೦% | ೪೬% |
| ೦೨ | ಸಹಭಾಗಿ | ೩೫% | ೦% | ೬೪% |
| ೦೩ | ಅನನ್ಯ | ೨% | ೦% | ೯೭% |
| ೦೪ | ಅನಾಮಧೇಯ | ೩೭% | ೦% | ೬೨% |
| ೦೫ | ಮೌನಿ | ೪೩% | ೦% | ೫೬% |
| ೦೬ | ಅನಿಕೇತನ | ೧೪% | ೦% | ೮೫% |
| ೦೭ | ಗಿರಾಕಿ | ೮೦% | ೦% | ೨೦% |
| ೦೮ | ಅಭಿಮಾನಿ | ೩೮% | ೨% | ೫೮% |
| ೦೯ | ವ್ಯಭಿಚಾರಿ | ೪೭% | ೨೫% | ೨೭% |
| ೧೦ | ಗಾಯಾಳು | ೫೨% | ೦% | ೪೭% |
| ೧೧ | ಆರೋಪಿ | ೫೪% | ೦% | ೪೫% |
| ೧೨ | ವಿಜ್ಞಾನಿ | ೭೭% | ೦% | ೨೨% |
| ೧೩ | ಉಗ್ರಗಾಮಿ | ೬೦% | ೦% | ೪೦% |
| ೧೪ | ತ್ಯಾಗಿ | ೬೭% | ೦% | ೩೨% |
| ೧೫ | ಕುರೂಪಿ | ೩೭% | ೦% | ೬೨% |
| ೧೬ | ಪ್ರತಿಗಾಮಿ | ೩೪% | ೦% | ೬೫% |
| ೧೭ | ಬುದ್ಧಿಗೇಡಿ | ೫೮% | ೦% | ೪೧% |
| ೧೮ | ವ್ಯಾಪಾರಿ | ೭೦% | ೦% | ೨೯% |
| ೧೯ | ದಾನಿ | ೬೯% | ೦% | ೩೦% |
| ೨೦ | ವಿಶ್ವಾಸಿ | ೬೪% | ೦% | ೩೫% |

೧. **ಅನುಭವಿ:** ಈ ಪದವು ಅನುಭವವುಳ್ಳವರು, ಜ್ಞಾನಿ, ತಿಳಿವಳಿಕೆಯುಳ್ಳ ಎಂಬ ಅರ್ಥಗಳನ್ನು ಒಳಗೊಂಡಿದೆ. ಅನುಭವವುಳ್ಳ, ಜ್ಞಾನವುಳ್ಳ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದವು ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೧೭ ಜನ ಇದನ್ನು ಪುರುಷವಾಚಕವಾಗಿ, ೧೫ ಜನ ಇದನ್ನು ತಟಸ್ಥ ಅರ್ಥದಲ್ಲಿ ಬಳಕೆಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೫೩%ರಷ್ಟು ಪುರುಷವಾಚಕವಾಗಿ ೪೬% ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡು ಬಂದಿದೆ. ಇಲ್ಲಿ ಪುರುಷವಾಚಕವಾಗಿ ಬಳಕೆ ಮಾಡಿರುವ ಪ್ರಮಾಣವು ಹೆಚ್ಚಾಗಿದೆ. ಅಧ್ಯಯನದಲ್ಲಿ ಈ ಪದಕ್ಕೆ ನೀಡಿರುವ ಅರ್ಥದ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಅನುಭವವುಳ್ಳವರು

೨. ಎಲ್ಲ ಬಲ್ಲವರು

೩. ತಿಳಿದವ

೪. ನುರಿತವ

೫. ಜ್ಞಾನಿ

೬. ನಿಪುಣ

೭. ದಾರ್ಶನಿಕ

**೨. ಸಹಭಾಗಿ:** ಈ ಪದ ಜೊತೆಗಿರುವ, ಒಡನಾಡಿ, ಸಮಾನವಾಗಿ ಜವಾಬ್ದಾರಿಯನ್ನು ಹೊಂದಿರುವವರು, ಸಮಾನ ಪಾಲುದಾರರು ಎಂಬ ಅರ್ಥಗಳನ್ನೇ ಹೊಂದಿದೆ. ಸಮಾನ ಜವಾಬ್ದಾರಿ ಹೊಂದಿರುವ, ಸಮಾನವಾಗಿ ಪಾಲ್ಗೊಳ್ಳುವಿಕೆಯ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೧೩ ಜನ ಪುರುಷವಾಚಕವಾಗಿ, ೨೪ ಜನ ತಟಸ್ಥ ಅರ್ಥದಲ್ಲಿ ಬಳಕೆ ಮಾಡಿದ್ದಾರೆ. ಇದರ ಒಟ್ಟಾರೆ ಶೇಕಡಾವಾರು ಪ್ರಮಾಣ ೩೫%ರಷ್ಟು ಪುರುಷವಾಚಕವಾಗಿ, ೬೪%ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡುಬಂದಿದೆ. ಈ ಪದ ತಟಸ್ಥ ಅರ್ಥದಲ್ಲಿ ಬಳಕೆಯಾಗಿರುವ ಪ್ರಮಾಣ ಹೆಚ್ಚಾಗಿದೆ. ಅಧ್ಯಯನದಲ್ಲಿ ಈ ಪದಕ್ಕೆ ನೀಡಿರುವ ಅರ್ಥದ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಪಾಲುದಾರ

೨. ಜೊತೆಗಾರ

೩. ಹೊಂದಾಣಿಕೆ

೪. ಜೊತೆಯಾಗು

೫. ಸಹಕರಿಸು

೬. ಭಾಗಿಯಾಗುವುದು

**೩. ಅನನ್ಯ:** ಈ ಪದವು ಬೇರೆಯಲ್ಲದ, ಅದ್ವಿತೀಯ ಎಂಬ ಅರ್ಥಗಳನ್ನು ಒಳಗೊಂಡಿದೆ. ಇದು ವಿಷಯವಾಚಕ ಪದ. ಇದನ್ನು ಯಾವ ವ್ಯಕ್ತಿಗೆ ಬೇಕಾದರೂ ಅನ್ವಯಿಸಬಹುದು. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಬ್ಬರು ಮಾತ್ರ ಪುರುಷವಾಚಕವಾಗಿ ಬಳಕೆಮಾಡಿದ್ದಾರೆ. ೩೫ ಜನ ತಟಸ್ಥ ಅರ್ಥದಲ್ಲಿ ಬಳಕೆಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೨%ರಷ್ಟು ಪುರುಷವಾಚಕವಾಗಿ, ೯೭%ರಷ್ಟು ಜನ ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡು ಬಂದಿದೆ. ಇಲ್ಲಿ ತಟಸ್ಥ ಅರ್ಥದಲ್ಲಿ ಬಳಕೆಯಾಗಿರುವ ಪ್ರಮಾಣವು ಹೆಚ್ಚಾಗಿದೆ. ಅಧ್ಯಯನದ ಸಂದರ್ಭದಲ್ಲಿ ಈ ಪದಕ್ಕೆ ನೀಡಿರುವ ಅರ್ಥದ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಬೇರೆಯಾಗದವ

೨. ಬಹಳ

೩. ಶ್ರೇಷ್ಠವಾದುದು

೪. ಒಂದಾಗಿ ಬಾಳುವ

೫. ಎಣೆಯಿಲ್ಲದ

೬. ವಿಶೇಷತೆ

೭. ಅನುರೂಪ

**೪. ಅನಾಮಧೇಯ:** ಈ ಪದ ಹೆಸರಿಲ್ಲದ, ಅಪ್ರಸಿದ್ಧವಾದ ಎಂಬ ಅರ್ಥಗಳನ್ನು ಒಳಗೊಂಡಿದೆ. ಹೆಸರಿಲ್ಲದ ಪುರುಷ, ಸ್ತ್ರೀ, ವಸ್ತು, ಪ್ರಾಣಿ ಯಾವುದಕ್ಕಾದರೂ ಈ ಪದವನ್ನು ಬಳಸಬಹುದು. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೧೪ ಜನ ಪುರುಷವಾಚಕವಾಗಿ, ೨೩ ಜನ ತಟಸ್ಥ ಅರ್ಥದಲ್ಲಿ ಈ

ಪದವನ್ನು ಗ್ರಹಿಸಿಕೊಂಡಿದ್ದಾರೆ. ಇದರ ಒಟ್ಟಾರೆ ಶೇಕಡಾವಾರು ಪ್ರಮಾಣ ೩೭%ರಷ್ಟು ಪುರುಷವಾಚಕವಾಗಿ, ೬೨%ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡು ಬಂದಿದೆ. ಈ ಪದವು ತಟಸ್ಥ ಅರ್ಥದಲ್ಲಿ ಬಳಕೆಯಾಗಿರುವ ಪ್ರಮಾಣವು ಹೆಚ್ಚಾಗಿದೆ. ಪ್ರಾಯೋಗಿಕ ಅಧ್ಯಯನದಲ್ಲಿ ಈ ಪದಕ್ಕೆ ನೀಡಿರುವ ಅರ್ಥದ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಗುರುತಿಲ್ಲದ ವ್ಯಕ್ತಿ

೨. ಹೆಸರಿಲ್ಲದವ

೩. ದಿಕ್ಕು ದೆಸೆಯಿಲ್ಲದ

೪. ಅಪರಿಚಿತ

೫. ಅನಾಮಿಕ

೬. ಅಪ್ರಸಿದ್ಧ

೭. ಪರಿಚಯವಿಲ್ಲದವನು.

**೫. ಮೌನಿ:** ಈ ಪದ ಮಾತನಾಡದೆ ಇರುವ, ಸದ್ದು ಮಾಡದೆ ಇರುವುದು, ಸುಮ್ಮನಿರುವುದು ಎಂಬ ಅರ್ಥಗಳನ್ನು ಒಳಗೊಂಡಿದೆ. ಮಾತನಾಡದೆ ಇರುವ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೧೬ ಜನ ಇದನ್ನು ಪುರುಷವಾಚಕವಾಗಿ ಗುರುತಿಸಿದ್ದಾರೆ ಹಾಗೂ ೨೧ ಜನ ಇದನ್ನು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೪೩%ರಷ್ಟು ಪುರುಷವಾಚಕವಾಗಿ, ೫೬%ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡಿಬಂದಿದೆ. ಈ ಪದಕ್ಕೆ ನೀಡಿರುವ ಅರ್ಥದ ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಮಾತನಾಡದಿರುವವನು

೨. ನಿಶ್ಶಬ್ದತೆಯ ವ್ಯಕ್ತಿ

೩. ತಟಸ್ಥನಾಗಿರು

೪. ಸುಮ್ಮನಿರುವುದು

೫. ಸಮಾಧಾನಿ

೬. ಶಾಂತ ಸ್ವಭಾವದವರು

೭. ತಾಳ್ಮೆಯಿಂದ ಇರುವಂತದ್ದು

**೬. ಅನಿಕೇತನ:** ಈ ಪದ ಮನೆಯಿಲ್ಲದ, ನೆಲೆಯಿಲ್ಲದ, ನಿಯತವಾಗಿ ಒಂದು ನೆಲೆಯಲ್ಲಿ ನಿಲ್ಲದ, ಮನೆ ಮಠಗಳ ಮೋಹವಿಲ್ಲದ ಎಂಬ ಅರ್ಥಗಳನ್ನು ಒಳಗೊಂಡಿದೆ. ಮನೆಯಿಲ್ಲದ, ಮನೆಮಠಗಳ ಮೋಹವಿಲ್ಲದ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೫ ಜನ ಇದನ್ನು ಪುರುಷವಾಚಕವಾಗಿ ಗುರುತಿಸಿದ್ದಾರೆ. ೨೯ ಜನ ಇದನ್ನು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿದ್ದಾರೆ. ಇದರ ಒಟ್ಟಾರೆ ಶೇಕಡಾವಾರು ಪ್ರಮಾಣ ೩೭%ರಷ್ಟು

ಪುರುಷವಾಚಕವಾಗಿ, ೬೨%ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡುಬಂದಿದೆ. ಈ ಪದಕ್ಕೆ ನೀಡಿರುವ ಅರ್ಥದ ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಮನೆಯಿಲ್ಲದ

೨. ಸ್ಥಿರವಲ್ಲದ್ದು

೩. ಬಯಲು

೪. ಮೋಹವಿಲ್ಲದವ

೫. ಏನೂ ಇಲ್ಲದ್ದು

೬. ಮನೆಯಿಲ್ಲದವನು

**೭. ಗಿರಾಕಿ:** ಈ ಪದ ಕೊಂಡುಕೊಳ್ಳುವವರು, ಬೇಡಿಕೆ ಇಡುವವರು, ವ್ಯಾಪಾರದಲ್ಲಿ ಭಾಗಿಯಾಗುವ ಎಂಬ ಅರ್ಥಗಳನ್ನು ಒಳಗೊಂಡಿದೆ. ವ್ಯಾಪಾರ ಚಟುವಟಿಕೆಗಳಲ್ಲಿ ಭಾಗಿಯಾಗುವ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೨೮ ಜನ ಇದನ್ನು ಪುರುಷವಾಚಕವಾಗಿ ಗುರುತಿಸಿದ್ದಾರೆ. ೭ ಜನ ಈ ಪದವನ್ನು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿದ್ದಾರೆ. ಒಟ್ಟಾರೆ, ಇದರ ಶೇಕಡಾವಾರು ಪ್ರಮಾಣ ೮೦% ಪುರುಷವಾಚಕವಾಗಿ, ೨೦% ತಟಸ್ಥ ಅರ್ಥದಲ್ಲಿ ಬಳಕೆಮಾಡಿರುವುದು ಕಂಡುಬಂದಿದೆ. ಈ ಪದಕ್ಕೆ ನೀಡಿರುವ ಅರ್ಥದ ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಕೊಂಡುಕೊಳ್ಳುವವನು

೨. ಗ್ರಾಹಕ

೩. ವಸ್ತುಗಳನ್ನು ಕೊಳ್ಳುವವ

೪. ವರ್ತಕ

೫. ಅಂಗಡಿಗೆ ವಸ್ತುಕೊಳ್ಳಲು ಬಂದವನು

೬. ಬಯಸಿ ಬಂದವ

**೮. ಅಭಿಮಾನಿ:** ಈ ಪದ ಆತ್ಮಗೌರವವುಳ್ಳ, ಪ್ರೀತಿಯುಳ್ಳ ಎಂಬ ಅರ್ಥಗಳನ್ನು ಒಳಗೊಂಡಿದೆ. ಆತ್ಮಗೌರವವುಳ್ಳ, ಮತ್ತೊಬ್ಬರ ಬಗೆಗೆ ಪ್ರೀತಿ, ಆರಾಧನೆಯ ಭಾವನೆಯುಳ್ಳ ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಈ ಪದ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೧೪ ಜನ ಪುರುಷವಾಚಕವಾಗಿ ಗುರುತಿಸಿದ್ದಾರೆ. ೨೧ ಜನ ಇದನ್ನು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿದ್ದಾರೆ. ಒಟ್ಟಾರೆ ಇದರ ಶೇಕಡಾವಾರು ಪ್ರಮಾಣ ೩೮%ರಷ್ಟು ಪುರುಷವಾಚಕವಾಗಿ, ೨%ರಷ್ಟು ಸ್ತ್ರೀವಾಚಕವಾಗಿ, ೫೮%ರಷ್ಟು ತಟಸ್ಥ ಅರ್ಥದಲ್ಲಿ ಬಳಕೆ ಮಾಡಿರುವುದು ಕಂಡು ಬಂದಿದೆ. ಒಬ್ಬ ಮಹಿಳೆ ಮಾತ್ರ ಈ ಪದಕ್ಕೆ ಪ್ರೇಕ್ಷಕ/ಪ್ರೇಕ್ಷಕಿ ಎಂದು ಅರ್ಥವನ್ನು ಬರೆದಿದ್ದಾರೆ. ಈ ಪದಕ್ಕೆ ನೀಡಿರುವ ಅರ್ಥಗಳ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಅಭಿಮಾನ ಹೊಂದಿರುವವ

೨. ಕಲೆಯನ್ನು ಪ್ರೀತಿಸುವವರು

೩. ಪ್ರೋತ್ಸಾಹಿ

೪. ಪ್ರೇಕ್ಷಕ/ಪ್ರೇಕ್ಷಕಿ

೫. ಹಿಂಬಾಲಕ

೬. ಅನುಯಾಯಿ

೭. ನೆಚ್ಚಿನ ಪರಿ

೮. ಮೆಚ್ಚುವ

೯. **ವ್ಯಭಿಚಾರಿ:** ಈ ಪದವು ಹಾದರ ಮಾಡುವ, ದಾರಿಬಿಟ್ಟು ಸಾಗುವ, ನೀತಿಗೆಟ್ಟ, ನಿಯಮ ಬಾಹಿರವಾದ ಎಂಬ ಅರ್ಥಗಳನ್ನು ಒಳಗೊಂಡಿದೆ. ಈ ರೀತಿಯ ಕಾರ್ಯಚಟುವಟಿಕೆಗಳಲ್ಲಿ ತೊಡಗುವ ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಈ ಪದ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೧೭ ಜನ ಇದನ್ನು ಪುರುಷವಾಚಕವಾಗಿ ಬಳಸಿದ್ದಾರೆ. ೯ ಜನ ಸ್ತ್ರೀವಾಚಕವಾಗಿ ಬಳಕೆಮಾಡಿದ್ದಾರೆ. ೧೦ ಜನರು ತಟಸ್ಥ ಅರ್ಥದಲ್ಲಿ ಬಳಕೆಮಾಡಿದ್ದಾರೆ. ಇದರ ಒಟ್ಟಾರೆ ಶೇಕಡಾವಾರು ಪ್ರಮಾಣ ೪೭%ರಷ್ಟು ಪುರುಷವಾಚಕವಾಗಿ, ೨೫%ರಷ್ಟು ಸ್ತ್ರೀವಾಚಕವಾಗಿ, ೨೭%ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡು ಬಂದಿದೆ. ಇಲ್ಲಿ ವ್ಯಭಿಚಾರಿ ಪದವನ್ನು ಪುರುಷವಾಚಕವಾಗಿ ಗ್ರಹಿಸಿಕೊಂಡಿರುವ ಪ್ರಮಾಣ ಹೆಚ್ಚಾಗಿದೆ. ಈ ಪದಕ್ಕೆ ನೀಡಿರುವ ಅರ್ಥದ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಸೂಳೆಗಾರಿಕೆ ಮಾಡುವವನು

೨. ಕೆಟ್ಟವಳು

೩. ಹೀನ ಕೃತ್ಯ

೪. ಬದ್ಧತೆ ಇಲ್ಲದಿರುವುದು

೫. ದೇವದಾಸಿ/ಸೂಳೆ

೬. ವೇಶ್ಯವಾಟಿಕೆ/ವೇಶ್ಯೆ

೭. ಸಾಮಾಜಿಕ ಕಟ್ಟುಪಾಡು ಮೀರಿರುವವರು

೮. ಜಾರ, ಹಾದರಿಗ

೧೦. **ಗಾಯಾಳು:** ಈ ಪದವು ಗಾಯಗೊಂಡವರು, ಪೆಟ್ಟಾದವರು ಎಂಬ ಅರ್ಥಗಳನ್ನು ಒಳಗೊಂಡಿದೆ. ಗಾಯಗೊಂಡ ಸ್ತ್ರೀ ಮತ್ತು ಪುರುಷರಿಬ್ಬರಿಗೂ ಈ ಪದ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೧೯ ಜನ ಇದನ್ನು ಪುರುಷವಾಚಕವಾಗಿ, ೧೭ ಜನ ಇದನ್ನು ತಟಸ್ಥ ಅರ್ಥದಲ್ಲಿ ಬಳಸಿದ್ದಾರೆ. ಇದರ ಒಟ್ಟಾರೆ ಶೇಕಡಾವಾರು ಪ್ರಮಾಣ ೫೨%ರಷ್ಟು ಪುರುಷವಾಚಕವಾಗಿ, ೪೭%ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡುಬಂದಿದೆ. ಪುರುಷವಾಚಕವಾಗಿ ಬಳಕೆ ಮಾಡಿರುವ ಪ್ರಮಾಣ ಹೆಚ್ಚಾಗಿದೆ. ಅಧ್ಯಯನದಲ್ಲಿ ಈ ಪದಕ್ಕೆ ನೀಡಿರುವ ಅರ್ಥದ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಗಾಯಗೊಂಡವ

೨. ಅಪಘಾತಕ್ಕೆ ಒಳಗಾದವರು

೩. ನೋವು ಇರುವವ

೪. ಪೆಟ್ಟುತಿಂದ ವ್ಯಕ್ತಿ

೫. ದೈಹಿಕ ಅಸ್ವಸ್ಥ

೬. ಘಾಸಿಗೊಂಡವನು

೭. ನೋವಿನಿಂದ ಕೂಡಿರುವುದು

೧೧. **ಆರೋಪಿ:** ಈ ಪದವು ಅಪವಾದಕ್ಕೆ ಗುರಿಯಾದವರು ಎಂಬ ಅರ್ಥವನ್ನು ಹೊಂದಿದೆ. ಅಪರಾಧ ಮಾಡಿದ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದವು ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೨೦ ಜನ ಇದನ್ನು ಪುರುಷವಾಚಕವಾಗಿ, ೧೭ ಜನ ಇದನ್ನು ತಟಸ್ಥ ಅರ್ಥದಲ್ಲಿ ಬಳಸಿದ್ದಾರೆ. ಇದರ ಒಟ್ಟಾರೆ, ಶೇಕಡಾವಾರು ಪ್ರಮಾಣ ೫೪%ರಷ್ಟು ಪುರುಷವಾಚಕವಾಗಿ, ೪೫%ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡುಬಂದಿದೆ. ಪುರುಷವಾಚಕವಾಗಿ ಬಳಕೆ ಮಾಡಿರುವ ಪ್ರಮಾಣ ಹೆಚ್ಚಾಗಿದೆ. ಪ್ರಾಯೋಗಿಕ ಅಧ್ಯಯನದಲ್ಲಿ ಈ ಪದಕ್ಕೆ ನೀಡಿರುವ ಅರ್ಥದ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಆರೋಪ ಹೊರಿಸಲ್ಪಟ್ಟ ವ್ಯಕ್ತಿ

೨. ತಪ್ಪು ಮಾಡಿದವರು

೩. ಅಪರಾಧ ಹೊತ್ತವ

೪. ತಪ್ಪು ಮಾಡಿರುವನೆಂದು ಸಂದೇಹಕ್ಕೆ ಗುರಿಯಾದವನು

೫. ನಿಂದನೆಗೆ ಗುರಿಯಾದವನು

೬. ತಪ್ಪಿತಸ್ಥ

೭. ಶಿಕ್ಷೆಗೆ ಒಳಗಾದವ

೧೨. **ವಿಜ್ಞಾನಿ:** ಈ ಪದ ವಿಶೇಷವಾದ ಜ್ಞಾನವುಳ್ಳ, ಅನ್ವೇಷಣಾ ಮನೋಭಾವುಳ್ಳ, ವಿವಿಧ ಶಾಸ್ತ್ರಗಳನ್ನು ವಿಶೇಷವಾಗಿ ಅಭ್ಯಾಸ ಮಾಡಿದವರು ಎಂಬ ಅರ್ಥಗಳನ್ನು ಹೊಂದಿದೆ. ಅನ್ವೇಷಣಾ ಮನೋಭಾವವುಳ್ಳ, ವಿಶೇಷ ಜ್ಞಾನವುಳ್ಳ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೨೮ ಜನ ಪುರುಷವಾಚಕವಾಗಿ, ೮ ಜನ ತಟಸ್ಥ ಅರ್ಥದಲ್ಲಿ ಬಳಕೆ ಮಾಡಿದ್ದಾರೆ. ಇದರ ಒಟ್ಟಾರೆ ಶೇಕಡಾವಾರು ಪ್ರಮಾಣ ೭೭%ರಷ್ಟು ಪುರುಷವಾಚಕವಾಗಿ, ೨೨%ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡುಬಂದಿದೆ. ಪುರುಷವಾಚಕವಾಗಿ ಬಳಸಿರುವ ಪ್ರಮಾಣ ಹೆಚ್ಚಾಗಿದೆ. ಪ್ರಾಯೋಗಿಕ ಅಧ್ಯಯನದಲ್ಲಿ ಈ ಪದಕ್ಕೆ ನೀಡಿರುವ ಅರ್ಥದ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ವಿಜ್ಞಾನದ ಬಗೆಗೆ ಜ್ಞಾನವುಳ್ಳವ

೨. ಅನ್ವೇಷಣೆ ಮಾಡುವವ

೩. ಆವಿಷ್ಕಾರಕ

೪. ಶಾಸ್ತ್ರಬದ್ಧವಾದ ಜ್ಞಾನಿ

೫. ಬುದ್ಧಿಜೀವಿ

೬. ಸಂಶೋಧನಾಕಾರ

೭. ಅಧ್ಯಯನ ಮಾಡಿರುವವರು

೮. ಪ್ರಯೋಗಕ್ಕೊಳಪಡಿಸುವವ

**೧೩. ಉಗ್ರಗಾಮಿ:** ಈ ಪದ ರಭಸದಿಂದ ಮುಂದೆ ನುಗ್ಗುವ, ತೀಕ್ಷ್ಣವಾಗಿ ಮುಂದುವರಿಯುವ, ಭಯೋತ್ಪಾದನೆ ಮಾಡುವ ಎಂಬ ಅರ್ಥಗಳನ್ನು ಒಳಗೊಂಡಿದೆ. ಭಯೋತ್ಪಾದನಾ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಸಮಾನವಾಗಿ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೨೧ ಜನ ಇದನ್ನು ಪುರುಷವಾಚಕವಾಗಿ, ೧೪ ಜನ ತಟಸ್ಥ ಅರ್ಥದಲ್ಲಿ ಬಳಸಿದ್ದಾರೆ. ಇದರ ಒಟ್ಟಾರೆ ಶೇಕಡಾವಾರು ಪ್ರಮಾಣ ೬೦%ರಷ್ಟು ಪುರುಷವಾಚಕವಾಗಿ, ೪೦%ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡುಬಂದಿದೆ. ಪುರುಷರು ಹೆಚ್ಚು ಸಂಖ್ಯೆಯಲ್ಲಿ ಉಗ್ರಗಾಮಿ ಚಟುವಟಿಕೆಗಳಲ್ಲಿ ತೊಡಗುವುದರಿಂದ ಪುರುಷವಾಚಕವಾಗಿ ಹೆಚ್ಚು ಜನ ಗುರುತಿಸಿರುವುದು ಕಂಡುಬಂದಿದೆ. ಪ್ರಾಯೋಗಿಕ ಅಧ್ಯಯನದಲ್ಲಿ ಈ ಪದಕ್ಕೆ ನೀಡಿರುವ ಅರ್ಥದ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ದೇಶದ್ರೋಹಿಗಳು

೨. ಹಿಂಸೆಯನ್ನು ಮಾಡುವವ

೩. ವಿಧ್ವಂಸಕಾರಿ ಕೃತ್ಯಗಳಲ್ಲಿ ತೊಡಗಿರುವವ

೪. ಕಾನೂನು ಚೌಕಟ್ಟು ಮೀರಿದವನು

೫. ದೇಶದ್ರೋಹ

೬. ಭಯಾನಕ

೭. ಭಯೋತ್ಪಾದಕರು

೮. ಭಯೋತ್ಪಾದನೆ

**೧೪. ತ್ಯಾಗಿ:** ಈ ಪದ ಬಿಡುವುದು, ತ್ಯಜಿಸುವುದು, ದಾನಮಾಡುವುದು, ಉದಾರಿ, ದಾನಶೀಲ ಎಂಬ ಅರ್ಥಗಳನ್ನು ಒಳಗೊಂಡಿದೆ. ದಾನಮಾಡುವ, ಉದಾರಗುಣವುಳ್ಳ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೨೫ ಜನ ಪುರುಷವಾಚಕವಾಗಿ, ೧೨ ಜನ ತಟಸ್ಥ ಅರ್ಥದಲ್ಲಿ ಬಳಕೆ ಮಾಡಿದ್ದಾರೆ. ಇದರ ಒಟ್ಟಾರೆ ಶೇಕಡಾವಾರು ಪ್ರಮಾಣ ೬೭%ರಷ್ಟು ಪುರುಷವಾಚಕವಾಗಿ, ೩೨%ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು

ಕಂಡುಬಂದಿದೆ. ಪುರುಷವಾಚಕವಾಗಿ ಹೆಚ್ಚು ಜನ ಗುರುತಿಸಿರುವುದು ಕಂಡುಬಂದಿದೆ. ಅಧ್ಯಯನದಲ್ಲಿ ಈ ಪದಕ್ಕೆ ನೀಡಿರುವ ಅರ್ಥದ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ತ್ಯಜಿಸುವವ

೨. ತೊರೆದವ

೩. ತ್ಯಾಗಮಾಡುವವರು

೪. ಉದಾರ ಗುಣವುಳ್ಳವನು

೫. ಪರರ ಸಹಕಾರಿ

೬. ದಾನ ಮಾಡುವ ವ್ಯಕ್ತಿ

೭. ತ್ಯಜಿಸು

**೧೫. ಕುರೂಪಿ:** ಈ ಪದ ರೂಪಹೀನ, ಅಂದಗೇಡಿಯಾದ, ರೂಪುಗೆಟ್ಟ ಎಂಬ ಅರ್ಥಗಳನ್ನು ಒಳಗೊಂಡಿದೆ. ರೂಪಗೆಟ್ಟ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದವು ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೧೪ ಜನ ಪುರುಷವಾಚಕವಾಗಿ, ೨೩ ಜನ ತಟಸ್ಥ ಅರ್ಥದಲ್ಲಿ ಬಳಕೆ ಮಾಡಿದ್ದಾರೆ. ಇದರ ಒಟ್ಟಾರೆ ಶೇಕಡಾವಾರು ಪ್ರಮಾಣ ೩೭%ರಷ್ಟು ಪುರುಷವಾಚಕವಾಗಿ, ೬೨%ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡುಬಂದಿದೆ. ತಟಸ್ಥ ಅರ್ಥದಲ್ಲಿ ಹೆಚ್ಚು ಜನ ಗುರುತಿಸಿರುವುದು ಕಂಡುಬಂದಿದೆ. ಅಧ್ಯಯನದ ಸಮಯದಲ್ಲಿ ಈ ಪದಕ್ಕೆ ನೀಡಿರುವ ಅರ್ಥದ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ವಿಕೃತರೂಪ

೨. ಸೌಂದರ್ಯವಿಲ್ಲದ

೩. ಅಂಗವಿಕಲ

೪. ಕೆಟ್ಟರೂಪ

೫. ಅಸಹ್ಯವಾಗಿರುವವನು

೬. ಅಸುಂದರತೆ

೭. ವಿಕಾರ, ವಿರೂಪ

**೧೬. ಪ್ರತಿಗಾಮಿ:** ಈ ಪದ ದೇಶದ ಪ್ರಗತಿಗೆ ವಿರುದ್ಧವಾದ, ವಿರುದ್ಧವಾಗಿರುವ, ವಿರೋಧಿಸುವ ಎಂಬ ಅರ್ಥಗಳನ್ನು ಒಳಗೊಂಡಿದೆ. ಯಾವುದೇ ಚಿಂತನೆಗೆ ವಿರುದ್ಧವಾಗಿ ಚಿಂತಿಸುವ, ವಿರೋಧಿಸುವ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೧೨ ಜನ ಪುರುಷವಾಚಕವಾಗಿ, ೨೩ ಜನ ತಟಸ್ಥ ಅರ್ಥದಲ್ಲಿ ಬಳಕೆ ಮಾಡಿದ್ದಾರೆ. ಇದರ ಒಟ್ಟಾರೆ ಶೇಕಡಾವಾರು ಪ್ರಮಾಣ ೩೪%ರಷ್ಟು ಪುರುಷವಾಚಕವಾಗಿ, ೬೫%ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡುಬಂದಿದೆ. ತಟಸ್ಥ ಅರ್ಥದಲ್ಲಿ ಹೆಚ್ಚು ಜನ ಈ ಪದವನ್ನು ಗುರುತಿಸಿದ್ದಾರೆ. ಅಧ್ಯಯನದ ಸಂದರ್ಭದಲ್ಲಿ ಈ ಪದಕ್ಕೆ ನೀಡಿರುವ ಅರ್ಥದ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ವಿರೋಧಿ

೨. ಇನ್ನೊಬ್ಬರ ವಿರುದ್ಧ ಪ್ರತಿಧ್ವನಿಸು

೩. ಪ್ರಗತಿಗೆ ವಿರೋಧವಾಗಿರುವುದು

೪. ವಿರೋಧಿಸುವವ

೫. ಪ್ರತಿತಂತ್ರ

೬. ನಿಷ್ಠುರವಾದಿ

೭. ಸೇಡುಗಾರ

**೧೭. ಬುದ್ಧಿಗೇಡಿ:** ಈ ಪದ ತಿಳಿವಳಿಕೆ ಇಲ್ಲದ, ವಿವೇಕವಿಲ್ಲದ, ಆಲೋಚಿಸುವ ಶಕ್ತಿಯಿಲ್ಲದ ಎಂಬ ಅರ್ಥಗಳನ್ನು ಒಳಗೊಂಡಿದೆ. ತಿಳಿವಳಿಕೆಯಿಲ್ಲದ, ವಿವೇಕವಿಲ್ಲದ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದಲ್ಲಿ ಒಟ್ಟು ೨೧ ಜನ ಪುರುಷವಾಚಕವಾಗಿ, ೧೫ ಜನ ತಟಸ್ಥ ಅರ್ಥದಲ್ಲಿ ಬಳಕೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೫೮%ರಷ್ಟು ಪುರುಷವಾಚಕವಾಗಿ, ೪೧%ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡುಬಂದಿದೆ. ಈ ಪದವನ್ನು ಪುರುಷವಾಚಕವಾಗಿ ಹೆಚ್ಚು ಜನ ಗ್ರಹಿಸಿಕೊಂಡಿದ್ದಾರೆ. ಅಧ್ಯಯನದ ಸಂದರ್ಭದಲ್ಲಿ ಈ ಪದಕ್ಕೆ ನೀಡಿದ ಕೆಲವು ಅರ್ಥದ ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಕಡಿಮೆ ಬುದ್ಧಿಯವ

೨. ತಿಳಿವಳಿಕೆ ಇರದವ

೩. ಬುದ್ಧಿಶೂನ್ಯ

೪. ತಿಳಿವಳಿಕೆಯಿದ್ದೂ ಇಲ್ಲದಂತೆ ವರ್ತಿಸುವುದು

೫. ಮಂದಮತಿ

೬. ಅವಿವೇಕಿ

೭. ತಿಳಿಗೇಡಿ

**೧೮. ವ್ಯಾಪಾರಿ:** ಈ ಪದ ಯಾವುದಾದರೂ ಕೆಲಸದಲ್ಲಿ ತೊಡಗಿರುವ, ವಾಣಿಜ್ಯ ವಹಿವಾಟು ನಡೆಸುವ, ಕೊಳ್ಳುವ, ಮಾರುವ ವ್ಯವಹಾರ ನಡೆಸುವ ಎಂಬ ಅರ್ಥಗಳನ್ನು ಒಳಗೊಂಡಿದೆ. ವ್ಯಾಪಾರಿ ಕಾರ್ಯಚಟುವಟಿಕೆಗಳಲ್ಲಿ ತೊಡಗಿರುವ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಸಮಾನವಾಗಿ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೨೪ ಜನ ಪುರುಷವಾಚಕವಾಗಿ, ೧೦ ಜನ ತಟಸ್ಥ ಅರ್ಥದಲ್ಲಿ ಬಳಕೆ ಮಾಡಿದ್ದಾರೆ. ಇದರ ಒಟ್ಟಾರೆ ಶೇಕಡಾವಾರು ಪ್ರಮಾಣ ೭೦%ರಷ್ಟು ಪುರುಷವಾಚಕವಾಗಿ, ೨೯%ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡುಬಂದಿದೆ. ಪುರುಷವಾಚಕವಾಗಿ ಹೆಚ್ಚು ಜನ ಈ ಪದವನ್ನು ಬಳಸಿದ್ದಾರೆ. ಅಧ್ಯಯನದ ಸಂದರ್ಭದಲ್ಲಿ ಈ ಪದಕ್ಕೆ ನೀಡಿರುವ ಅರ್ಥದ ಕೆಲವು ಮಾದರಿಗಳು ಈ ಮುಂದಿನಂತಿವೆ.

ಮಾದರಿಗಳು: ೧. ಮಾರಾಟಗಾರ

೨. ಕೊಡುವುದು ಮತ್ತು ತೆಗೆದುಕೊಳ್ಳುವುದು

೩. ವರ್ತಕ

೪. ವ್ಯವಹರಿಸುವವರು

೫. ದಲ್ಲಾಳಿ

೬. ಕೊಡುಕೊಳ್ಳುವುದು

೭. ತನ್ನ ವಸ್ತು ಮಾರುವವ

**೧೯. ದಾನಿ:** ಈ ಪದ ದಾನ ನೀಡುವ, ಸಹಾಯ ಮಾಡುವ, ಕೊಡುಗೆ ನೀಡುವ ಎಂಬ ಅರ್ಥಗಳನ್ನು ಒಳಗೊಂಡಿದೆ. ದಾನ ನೀಡುವ ಮನಃಸ್ಥಿತಿ ಇರುವ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಸಮಾನವಾಗಿ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದಲ್ಲಿ ಒಟ್ಟು ೨೫ ಜನ ಪುರುಷವಾಚಕವಾಗಿ, ೧೧ ಜನ ತಟಸ್ಥ ಅರ್ಥದಲ್ಲಿ ಬಳಕೆ ಮಾಡಿದ್ದಾರೆ. ಇದರ ಒಟ್ಟಾರೆ ಶೇಕಡಾವಾರು ಪ್ರಮಾಣ ೬೯% ಪುರುಷವಾಚಕವಾಗಿ, ೩೦%ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡುಬಂದಿದೆ. ಪುರುಷವಾಚಕವಾಗಿ ಹೆಚ್ಚು ಜನ ಈ ಪದವನ್ನು ಬಳಸಿದ್ದಾರೆ. ಅಧ್ಯಯನದ ಸಂದರ್ಭದಲ್ಲಿ ಈ ಪದಕ್ಕೆ ನೀಡಿರುವ ಅರ್ಥದ ಕೆಲವು ಮಾದರಿಗಳು ಈ ಮುಂದಿನಂತಿವೆ.

ಮಾದರಿಗಳು: ೧. ದಾನ ಮಾಡಿದವ

೨. ತನ್ನ ಕೈಲಾದಷ್ಟು ಸಹಾಯ ಮಾಡುವವ

೩. ಕೊಡುಗೆ

೪. ಉಚಿತವಾಗಿ ನಿಡುವುದು

೫. ಪ್ರತಿ ಅಪೇಕ್ಷಿಸದೆ ದಾನ ನೀಡುವವನು

೬. ನೀಡುವವ

೭. ಸಹಾಯ ಮಾಡುವವ

**೨೦. ವಿಶ್ವಾಸಿ:** ಈ ಪದ ನಂಬಿಕೆಗೆ ಪಾತ್ರವಾದ, ನಂಬಿಕೆಗೆ ಯೋಗ್ಯವಾದ, ಪ್ರೀತಿಯುಳ್ಳ, ಪ್ರಾಮಾಣಿಕತೆಯುಳ್ಳ ಎಂಬ ಅರ್ಥಗಳನ್ನು ಒಳಗೊಂಡಿದೆ. ನಂಬಿಕೆಗೆ ಅರ್ಹವಾದ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಸಮಾನವಾಗಿ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದಲ್ಲಿ ಒಟ್ಟು ೨೨ ಜನ ಪುರುಷವಾಚಕವಾಗಿ, ೧೨ ಜನ ತಟಸ್ಥ ಅರ್ಥದಲ್ಲಿ ಬಳಕೆ ಮಾಡಿದ್ದಾರೆ. ಇದರ ಒಟ್ಟಾರೆ ಶೇಕಡಾವಾರು ಪ್ರಮಾಣ ೬೪%ರಷ್ಟು ಪುರುಷವಾಚಕವಾಗಿ, ೩೫%ರಷ್ಟು ತಟಸ್ಥ ಅರ್ಥದಲ್ಲಿ ಗ್ರಹಿಸಿಕೊಂಡಿರುವುದು ಕಂಡುಬಂದಿದೆ. ಪುರುಷವಾಚಕವಾಗಿ ಹೆಚ್ಚು ಜನ ಈ ಪದವನ್ನು ಬಳಸಿದ್ದಾರೆ. ಅಧ್ಯಯನದ ಸಂದರ್ಭದಲ್ಲಿ ಈ ಪದಕ್ಕೆ ನೀಡಿರುವ ಅರ್ಥದ ಕೆಲವು ಮಾದರಿಗಳು ಈ ಮುಂದಿನಂತಿವೆ.

ಮಾದರಿಗಳು: ೧. ನಂಬಿಕೆಯುಳ್ಳವ

೨. ಪ್ರೀತಿಯುಳ್ಳವನು

೩. ಆತ್ಮೀಯ

೪. ಸ್ವಾಭಿಮಾನಿ

೫. ವಿಶ್ವಾಸಕ್ಕೆ ಅರ್ಹನಾದವ

೬. ನಿಷ್ಠೆಯುಳ್ಳವರು

೭. ಹತ್ತಿರದವನು

೮. ಸ್ನೇಹಿತ

ತಟಸ್ಥ ಅರ್ಥ ನೀಡುವ ಪದಗಳನ್ನು ಒಂದು ಸಮುದಾಯದ ಒಂದು ವಿದ್ಯಾವಂತ ಗುಂಪು ಹೇಗೆ ಗ್ರಹಿಸುತ್ತಿದೆ ಎಂಬುದನ್ನು ಗುರುತಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿತ್ತು. ಕೆಲವು ಪದಗಳನ್ನು ಪುರುಷವಾಚಕವಾಗಿ ಹೆಚ್ಚು ಸಂಖ್ಯೆಯಲ್ಲಿ ಬಳಸಿರುವುದು ಕಂಡು ಬಂದರೆ, ಕೆಲವು ಪದಗಳನ್ನು ತಟಸ್ಥ ಅರ್ಥದಲ್ಲಿ ಹೆಚ್ಚು ಬಳಸಿರುವುದು ಕಂಡುಬಂದಿದೆ. ನೀಡಿದ ಒಟ್ಟು ೨೦ ಪದಗಳಲ್ಲಿ ಅಭಿಮಾನಿ ಮತ್ತು ವ್ಯಭಿಚಾರಿ ಎಂಬ ಎರಡು ಪದಗಳಿಗೆ ಮಾತ್ರ ಸ್ತ್ರೀವಾಚಕಗಳನ್ನು ಬಳಸಿರುವುದನ್ನು ಕಾಣಬಹುದಾಗಿದೆ. ಹೆಚ್ಚು ಪ್ರಮಾಣದಲ್ಲಿ ಬಳಕೆಯಾಗಿರುವ ಪುರುಷವಾಚಕಗಳು ಮತ್ತು ತಟಸ್ಥ ಅರ್ಥದ ಪದಗಳ ಪಟ್ಟಿ ಈ ಮುಂದಿನಂತಿವೆ.

| **ಹೆಚ್ಚು ಪುರುಷವಾಚಕವಾಗಿ ಬಳಕೆಯಾದ ಪದಗಳು** | **ಹೆಚ್ಚು ತಟಸ್ಥ ಅರ್ಥಗಳಲ್ಲಿ ಬಳಕೆಯಾದ ಪದಗಳು** |
|---|---|
| ೧. ಅನುಭವಿ | ೧. ಸಹಭಾಗಿ |
| ೨. ಗಿರಾಕಿ | ೨. ಅನನ್ಯ |
| ೩. ವ್ಯಭಿಚಾರಿ | ೩. ಅನಾಮಧೇಯ |
| ೪. ಗಾಯಾಳು | ೪. ಮೌನಿ |
| ೫. ಆರೋಪಿ | ೫. ಅನಿಕೇತನ |
| ೬. ವಿಜ್ಞಾನಿ | ೬. ಅಭಿಮಾನಿ |
| ೭. ಉಗ್ರಗಾಮಿ | ೭. ಕುರೂಪಿ |
| ೮. ತ್ಯಾಗಿ | ೮. ಪ್ರತಿಗಾಮಿ |
| ೯. ಬುದ್ಧಿಗೇಡಿ | |
| ೧೦. ವ್ಯಾಪಾರಿ | |
| ೧೧. ದಾನಿ | |
| ೧೨. ವಿಶ್ವಾಸಿ | |

ಒಟ್ಟಾರೆ ಅಂಕಿ ಅಂಶಗಳ ಶೇಕಡಾವಾರು ಪ್ರಕಾರ ೧೨ ಪದಗಳು ಪುರುಷವಾಚಕಗಳಾಗಿ ಹೆಚ್ಚು ಬಳಕೆಯಾಗಿವೆ. ೮ ಪದಗಳು ತಟಸ್ಥ ಅರ್ಥದಲ್ಲಿ ಹೆಚ್ಚು ಬಳಕೆಯಾಗಿರುವುದು ಕಂಡುಬಂದಿದೆ. ಸಮುದಾಯಗಳಲ್ಲಿ ಸೃಷ್ಟಿಯಾಗುವ ಯಾವುದೇ ವಿಷಯಸೂಚಕ ಪದವಾಗಲಿ, ವೃತ್ತಿ ಸೂಚಕಪದವಾಗಲಿ, ಜಾತಿಸೂಚಕ ಪದವಾಗಲಿ ಪುರುಷ ಪ್ರಧಾನ ಸಮುದಾಯದಲ್ಲಿ ಪುರುಷಮೂಲೀಯವಾಗಿಯೇ ಗ್ರಹಿಕೆಗೆ ಬಂದಿರುತ್ತದೆ. ಆ ಪದ ಮೂಲತಃ ತಟಸ್ಥವಾಗಿ ರಚಿತವಾಗಿದ್ದರೂ ಮೊದಲು ಎಲ್ಲ ಕ್ಷೇತ್ರಗಳಲ್ಲೂ

ಪುರುಷನ ಭಾಗವಹಿಸುವಿಕೆ ಪ್ರಾರಂಭವಾದ್ದರಿಂದ ಪುರುಷವಾಚಕವಾಗಿ ಅದರ ಗ್ರಹಿಕೆ ಸಮುದಾಯದ ಜನರಿಗೆ ಬಂದುಬಿಡುತ್ತದೆ. ಉದಾಹರಣೆಗೆ ಅನುಭವಿ ಪದವು ಜ್ಞಾನ, ತಿಳಿವಳಿಕೆಯುಳ್ಳ ಎಂಬ ಅರ್ಥವುಳ್ಳದ್ದಾದ್ದರಿಂದ ಸಮಾಜದಲ್ಲಿ ಎಲ್ಲ ಜ್ಞಾನಶಾಖೆಗಳಲ್ಲೂ ಪುರುಷ ಮೊದಲು ಭಾಗವಹಿಸಿ, ಅವುಗಳ ತಿಳಿವಳಿಕೆ ಪಡೆದಿದ್ದರಿಂದ ಈ ಪದವನ್ನು ಪುರುಷವಾಚಕವಾಗಿ ಜನ ಗ್ರಹಿಸುತ್ತಾರೆ.

ಒಂದು ಕಾಲದವರೆಗೆ ಮಹಿಳೆಯರಿಗೆ ಮನೆಯ ಹೊರಗಿನ ಪ್ರವೇಶ ನಿಷಿದ್ಧವಾಗಿತ್ತು. ಮನೆಯ ಹೊರಗಿನ ಯಾವುದೇ ಚಟುವಟಿಕೆಯಲ್ಲಿ ಅವಳು ಭಾಗವಹಿಸುವಂತಿರಲಿಲ್ಲ. ವ್ಯಾಪಾರ ವಹಿವಾಟು ಈ ರೀತಿಯ ಕೆಲಸಗಳನ್ನು ಪುರುಷನೇ ನಿರ್ವಹಿಸುತ್ತಿದ್ದರಿಂದ ವ್ಯಾಪಾರಿ, ಗಿರಾಕಿ ಈ ರೀತಿಯ ಪದಗಳು ಪುರುಷವಾಚಕಗಳಾಗಿ ಬಳಕೆಯಾಗುತ್ತಿರಬಹುದು. ಸಮಾಜದಲ್ಲಿನ ಅನೇಕ ಅನ್ವೇಷಣೆಗಳನ್ನು ಮೊದಲು ಪುರುಷ ಮಾಡಿದ್ದರಿಂದ ವಿಜ್ಞಾನಿ ಎಂಬ ಪದ ಪುರುಷವಾಚಕವಾಗಿ ಗುರುತಿಸಲ್ಪಟ್ಟಿದೆ. ಸ್ತ್ರೀಯರು ಕೌಟುಂಬಿಕ ವಲಯದ ಒಳಗೆ ಅನ್ವೇಷಣೆಗಳನ್ನು ಮಾಡಿದರೂ ಅವು ಸಮುದಾಯದ ಮುಖ್ಯವಾಹಿನಿಗೆ ತೆರೆದುಕೊಳ್ಳದೆ ಇದ್ದದ್ದರಿಂದ ಪದಗಳ ಅರ್ಥ ಅವರನ್ನು ಒಳಗೊಳ್ಳುತ್ತಿರಲಿಲ್ಲ. ಉಗ್ರಗಾಮಿ ಚಟುವಟಿಕೆಗಳಲ್ಲಿ ಮೊದಲು ಪುರುಷರು ತೊಡಗಿಕೊಂಡಿದ್ದರಿಂದ ಈ ಪದ ಕೂಡ ಪುರುಷವಾಚಕವಾಗಿ ಗುರುತಿಸಲ್ಪಡುತ್ತಿದೆ. ಇಂದು ಸ್ತ್ರೀಯರು ಕೂಡ ಉಗ್ರಗಾಮಿ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುತ್ತಿದ್ದಾರೆ.

ಸಮುದಾಯಗಳಲ್ಲಿ ಮೊದಲು ಕೌಟುಂಬಿಕ ವಲಯದೊಳಗಿನ ಕಲಹಗಳು ಕುಟುಂಬದ ಒಳಗೆ ಹಿರಿಯರಿಂದ ಪರಿಹಾರಗಳನ್ನು ಪಡೆಯುತ್ತಿದ್ದವು. ಕೌಟುಂಬಿಕ ವಲಯದ ಆಚೆಗಿನ ವಾಗ್ವಾದಗಳು ಊರಿನ ಮುಖಂಡರ ಉಪಸ್ಥಿತಿಯಲ್ಲಿ ವಿಚಾರಣೆಗೆ ಒಳಪಡುತ್ತಿದ್ದವು. ಕೌಟುಂಬಿಕ ವಲಯದ ಆಚೆಗೆ ಪುರುಷರ ಭಾಗವಹಿಸುವಿಕೆ ಮಾತ್ರ ಇದ್ದದ್ದರಿಂದ ವಾಗ್ವಾದಗಳು ಪುರುಷರ ನಡುವೆ ಹೆಚ್ಚು ನಡೆಯುತ್ತಿದ್ದವು. ಆರೋಪಿ ಸ್ಥಾನದಲ್ಲಿ ಪುರುಷ ನಿಲ್ಲುತ್ತಿದ್ದದ್ದರಿಂದ ಈ ಪದವನ್ನು ಪುರುಷವಾಚಕವಾಗಿ ಗ್ರಹಿಸಿಕೊಳ್ಳಲಾಗಿದೆ. ತ್ಯಾಗಿ, ದಾನಿ, ವಿಶ್ವಾಸಿ, ಬುದ್ಧಿಗೇಡಿ ಈ ರೀತಿಯ ಪದಗಳು ಕೂಡ ಪುರುಷವಾಚಕಗಳೆಂಬ ಗ್ರಹಿಕೆ ಸಮುದಾಯದಲ್ಲಿದೆ.

ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ವ್ಯಭಿಚಾರಿ ಎಂಬ ಪದ ಪುರುಷವಾಚಕವಾಗಿ ಹೆಚ್ಚು ಬಳಕೆಗೊಂಡಿರುವುದು. ಪುರುಷ ಪ್ರಧಾನ ಸಮುದಾಯಗಳಲ್ಲಿ ಅನೈತಿಕ ಚಟುವಟಿಕೆಯಲ್ಲಿ ಭಾಗಿಯಾಗುವ ಪುರುಷನಿಗಿಂತ ಮಹಿಳೆ ಬೇಗ ನಿಂದನೆಗೆ ಗುರಿಯಾಗುತ್ತಾಳೆ. ಹಾಗಾಗಿ ಈ ಪದ ಸ್ತ್ರೀವಾಚಕವಾಗಿ ಗ್ರಹಿಕೆಗೆ ಬರುವ ಸಾಧ್ಯತೆಗಳು ಹೆಚ್ಚಾಗಿರುತ್ತವೆ. ಆದರೆ ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಇದು ಪುರುಷವಾಚಕವಾಗಿ ಗ್ರಹಿಸಿಕೊಂಡಿರುವುದು ಕಂಡುಬಂದಿದೆ. ಇದಕ್ಕೆ ಕಾರಣವನ್ನು ಪರಿಶೀಲಿಸುವುದಾದರೆ, ಕನ್ನಡ ಭಾಷಿಕ ಪರಿಸರದಲ್ಲಿ ಅನೈತಿಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವ ಮಹಿಳೆಯರಿಗೆ 'ವ್ಯಭಿಚಾರಿಣಿ' ಎಂಬ ಮತ್ತೊಂದು ಪದ ಬಳಕೆಯಲ್ಲಿದೆ. ಹಾಗಾಗಿ ವ್ಯಭಿಚಾರಿ ಪದ ಪುರುಷವಾಚಕವಾಗಿ ಹೆಚ್ಚು ಜನ ಗ್ರಹಿಸಿಕೊಂಡಿರುವ ಸಾಧ್ಯತೆ ಇದೆ. ವ್ಯಭಿಚಾರಿ – ವ್ಯಭಿಚಾರಿಣಿ ಈ

ರೀತಿಯ ಸ್ತ್ರೀವಾಚಕದ ಸೃಷ್ಟಿಸುವಿಕೆ ಕನ್ನಡ ಭಾಷಿಕ ಪರಿಸರದಲ್ಲಿರುವುದರಿಂದ ತಟಸ್ಥ ಅರ್ಥನೀಡುವ ಪದಗಳು ಪುರುಷವಾಚಕಗಳಾಗಿ ಪರಿಗಣಿಸಲ್ಪಡುತ್ತಿವೆ.

ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಬ್ಬ ಮಹಿಳೆ ಮಾತ್ರ ಅಭಿಮಾನಿ ಪದಕ್ಕೆ ಪ್ರೇಕ್ಷಕ/ಪ್ರೇಕ್ಷಕಿ ಎಂದು ಸ್ತ್ರೀ ಮತ್ತು ಪುರುಷ ಇಬ್ಬರ ಮೂಲಕ ಅರ್ಥ ಗುರುತಿಸಿದ್ದಾರೆ. ವ್ಯಭಿಚಾರಿ ಪದವನ್ನು ಬಿಟ್ಟು ಉಳಿದ ಯಾವ ಪದಗಳು ಸ್ತ್ರೀವಾಚಕಗಳ ಮುಖಾಂತ ಗುರುತಿಸಲ್ಪಟ್ಟಿಲ್ಲ. ಉಳಿದ ಎಂಟು ಪದಗಳಿಗೆ ತಟಸ್ಥ ಅರ್ಥಗಳನ್ನು ಹೆಚ್ಚು ಗುರುತಿಸಿರುವುದು ಕಂಡುಬಂದಿದೆ. ಬದಲಾದ ಕಾಲಘಟ್ಟದಲ್ಲಿ ಒಂದು ಸಮುದಾಯದ ಒಂದು ಸಣ್ಣ ವಿದ್ಯಾವಂತ ಗುಂಪಿನ ಗ್ರಹಿಕೆಗಳು ಬದಲಾಗುತ್ತಿವೆ ಎಂಬುದನ್ನು ಇದರಿಂದ ಗುರುತಿಸಿಕೊಳ್ಳಬಹುದಾಗಿದೆ. ಎಲ್ಲ ಪದಗಳು ಮೊದಲು ಪುರುಷಮೂಲೀಯ ಅರ್ಥಛಾಯೆಯನ್ನು ಒಳಗೊಂಡಿರುತ್ತವೆ ಎಂಬ ಸ್ತ್ರೀವಾದಿಗಳ ನಿಲುವು ಇಲ್ಲಿ ಬದಲಾಗಬೇಕಿದೆ. ಒಂದು ವಿದ್ಯಾವಂತ ಗುಂಪು ಪದಗಳ ಅರ್ಥಗಳನ್ನು ತಟಸ್ಥವಾಗಿ ಬಳಕೆ ಮಾಡುತ್ತಿರುವುದು ಇಲ್ಲಿ ಕಂಡುಬಂದಿದೆ. ಇಂದು ಎಲ್ಲ ಕ್ಷೇತ್ರಗಳಲ್ಲೂ ಮಹಿಳೆಯೂ ಪುರುಷನಷ್ಟೇ ಸಮಭಾಗಿಯಾಗುತ್ತಿದ್ದಾಳೆ. ಅವಳ ತಿಳಿವಳಿಕೆ, ಜ್ಞಾನವಲಯ ವಿಸ್ತರಿಸಿದೆ. ಹಾಗಾಗಿ ಸಮುದಾಯದಲ್ಲಿ ಪದಗಳ ಅರ್ಥಗಳ ಗ್ರಹಿಕೆ ಇಂದು ವಿಸ್ತರಿಸಬೇಕಿದೆ.

**೫.೨. ಪದಗಳ ವಾಕ್ಯರಚಿಸಲು ಹೇಳಿರುವುದು**

ಇಡೀ ಸಮುದಾಯಕ್ಕೆ ಅನ್ವಯವಾಗುವ ವಾಕ್ಯರಚನೆಗಳಲ್ಲಿ ಪುರುಷವಾಚಕಗಳು ಪ್ರಧಾನ ಪಾತ್ರನಿರ್ವಹಿಸುತ್ತಿರುತ್ತವೆ ಎಂಬ ವಾದವಿದೆ. ಮಹಿಳೆಯು ಸಮುದಾಯದಲ್ಲಿದ್ದರೂ ಪುರುಷವಾಚಕಗಳ ಮುಖಾಂತರ ಅವಳು ಒಳಗೊಳ್ಳುವಂತೆ ವಾಕ್ಯರಚನೆಗಳಿರುತ್ತವೆ. ಹಾಗಾಗಿ ಭಾಷೆ ಪುರುಷ ಪ್ರಧಾನವಾದದ್ದು ಎಂಬುದು ಸ್ತ್ರೀವಾದಿಗಳ ನಿಲುವು. ಈ ಸಮಸ್ಯೆಗೆ ಕೆಲವು ಭಾಷಾಶಾಸ್ತ್ರಜ್ಞರು ಸೂಚಿಸಿರುವ ಸದ್ಯದ ಪರಿಹಾರವೆಂದರೆ, ವಾಕ್ಯದ ನೆಲೆಯಲ್ಲಿ ಬಹುವಚನರೂಪಗಳನ್ನು ಬಳಸುವುದು. ಉದಾಹರಣೆಗೆ: ಕನ್ನಡ ನಾಡಿನ ಕನ್ನಡಿಗ ಬಹಳ ವಿಶಾಲ ಹೃದಯವಂತ. ಈ ರೀತಿಯ ರಚನೆಯ ಬದಲು ಕನ್ನಡ ನಾಡಿನ ಕನ್ನಡಿಗರು ಬಹಳ ವಿಶಾಲ ಹೃದಯವಂತರು ಎಂದು ಬಳಸಲು ಸೂಚಿಸಿದ್ದಾರೆ. ಬಹುವಚನ ರೂಪಗಳಲ್ಲಿ ಪುರುಷ ಮತ್ತು ಸ್ತ್ರೀಯರಿಬ್ಬರೂ ಒಳಗೊಳ್ಳುತ್ತಾರೆ ಎಂಬುದು ಅವರ ನಿಲುವು.

ಈ ಹಿನ್ನೆಲೆಯಲ್ಲಿ ಕೆಲವು ಪದಗಳನ್ನು ನೀಡಿ ಮೊದಲು ಆ ಪದಗಳ ಅರ್ಥ ಬರೆದು ನಂತರ ಆ ಪದದ ಎರಡು ಮೂರು ವಾಕ್ಯಗಳನ್ನು ರಚನೆಮಾಡುವಂತೆ ಸಂಶೋಧನಾ ವಿದ್ಯಾರ್ಥಿಗಳಿಗೆ ಹೇಳಲಾಯಿತು. ಇಲ್ಲಿ ಮೂರು ರೀತಿಯ ಪದಗಳನ್ನು ನೀಡಲಾಗಿತ್ತು. ಅವುಗಳೆಂದರೆ:

೧. ಪದಗಳ ಬಹುವಚನ ರೂಪಗಳು

೨. ತಟಸ್ಥ ಅರ್ಥವಿದ್ದರೂ ಸ್ತ್ರೀವಾಚಕವಾಗಿ ಗ್ರಹಿಕೆಯಲ್ಲಿರುವ ಪದಗಳು

೩. ತಟಸ್ಥ ಅರ್ಥವಿದ್ದರೂ ಪುರುಷವಾಚಕವಾಗಿ ಗ್ರಹಿಕೆಯಲ್ಲಿರುವ ಪದಗಳು

ಈ ರೀತಿಯ ೨೦ ಪದಗಳನ್ನು ನೀಡಲಾಗಿತ್ತು. ಈ ಪದಗಳನ್ನು ಬಳಸಿ ರಚಿಸಿರುವ ಪುರುಷಪ್ರಧಾನ ವಾಕ್ಯರಚನೆಗಳ ಸಂಖ್ಯೆಗಳು, ಸ್ತ್ರೀಪ್ರಧಾನ ವಾಕ್ಯರಚನೆಗಳ ಸಂಖ್ಯೆಗಳು ಹಾಗೂ ತಟಸ್ಥವಾಗಿ ಬಳಕೆಯಾಗಿರುವ ವಾಕ್ಯರಚನೆಗಳ ಅಂಕಿ ಅಂಶಗಳನ್ನು ಈ ಮುಂದಿನ ಪಟ್ಟಿಗಳಲ್ಲಿ ನೀಡಲಾಗಿದೆ. ಪಟ್ಟಿ ೧ರಲ್ಲಿ ಸಂಖ್ಯೆಗಳಲ್ಲಿ, ಪಟ್ಟಿ ೨ರಲ್ಲಿ ಶೇಕಡಾವಾರು ಪ್ರಮಾಣವನ್ನು ನೀಡಲಾಗಿದೆ.

**ಪಟ್ಟಿ ೧–ಸಂಖ್ಯೆಗಳಲ್ಲಿ**

| ಕ್ರ ಸಂ | ಪದಗಳು | ಪುರುಷವಾಚಕವಾಗಿ ಬಳಕೆ ಮಾಡಿದವರು | ಸ್ತ್ರೀವಾಚಕವಾಗಿ ಬಳಕೆ ಮಾಡಿದವರು | ತಟಸ್ಥ ಅರ್ಥದಲ್ಲಿ ಬಳಕೆ ಮಾಡಿದವರು | ಬಳಕೆ ಮಾಡದವರು |
|---|---|---|---|---|---|
| ೦೧ | ಪೌರಕಾರ್ಮಿಕರು | ೧ | ೦ | ೧೯ | ೦ |
| ೦೨ | ಅರ್ಜಿದಾರರು | ೧ | ೦ | ೧೯ | ೦ |
| ೦೩ | ರೂಪದರ್ಶಿ | ೦ | ೧೧ | ೮ | ೧ |
| ೦೪ | ಗಗನಯಾತ್ರಿ | ೩ | ೬ | ೧೧ | ೦ |
| ೦೫ | ಕುಲಪತಿ | ೩ | ೨ | ೧೫ | ೦ |
| ೦೬ | ನರ್ಸ್ | ೧ | ೧೧ | ೮ | ೦ |
| ೦೭ | ಗಣ್ಯಮಾನ್ಯ | ೪ | ೦ | ೧೬ | ೦ |
| ೦೮ | ಗ್ರಾಮವಾಸಿ | ೬ | ೦ | ೧೪ | ೦ |
| ೦೯ | ಟೀಚರ್ | ೬ | ೩ | ೧೧ | ೦ |
| ೧೦ | ಸಾಹಿತಿ | ೧೩ | ೦ | ೫ | ೨ |
| ೧೧ | ಚೇರ್‌ಮನ್ | ೧೭ | ೦ | ೩ | ೦ |
| ೧೨ | ಕನ್ನಡಕಧಾರಿ | ೧೧ | ೧ | ೬ | ೨ |
| ೧೩ | ಬಾಯಾಳಿ | ೪ | ೫ | ೪ | ೭ |
| ೧೪ | ಸಿದ್ಧಾಂತಿ | ೧೩ | ೧ | ೫ | ೧ |
| ೧೫ | ಸೋಮಾರಿ | ೧೩ | ೦ | ೬ | ೧ |
| ೧೬ | ಸೈನಿಕರು | ೩ | ೦ | ೧೭ | ೦ |
| ೧೭ | ಹಠಮಾರಿ | ೮ | ೨ | ೮ | ೨ |
| ೧೮ | ಹುಡುಗುತನ | ೫ | ೦ | ೧೨ | ೩ |
| ೧೯ | ರೈತ | ೧೬ | ೦ | ೩ | ೧ |
| ೨೦ | ಮಾನವ | ೭ | ೦ | ೧೧ | ೨ |

**ಪಟ್ಟಿ ೨–ಶೇಕಡಾವಾರು**

| ಕ್ರ ಸಂ | ಪದಗಳು | ಪುರುಷವಾಚಕವಾಗಿ ಬಳಕೆ ಮಾಡಿದವರು | ಸ್ತ್ರೀವಾಚಕವಾಗಿ ಬಳಕೆ ಮಾಡಿದವರು | ತಟಸ್ಥ ಅರ್ಥದಲ್ಲಿ ಬಳಕೆ ಮಾಡಿದವರು |
|---|---|---|---|---|
| ೦೧ | ಪೌರಕಾರ್ಮಿಕರು | ೫% | ೦% | ೯೫% |
| ೦೨ | ಅರ್ಜಿದಾರರು | ೫% | ೦% | ೯೫% |
| ೦೩ | ರೂಪದರ್ಶಿ | ೦% | ೫೭% | ೪೨% |
| ೦೪ | ಗಗನಯಾತ್ರಿ | ೧೫% | ೩೦% | ೫೫% |
| ೦೫ | ಕುಲಪತಿ | ೧೫% | ೧೦% | ೭೫% |
| ೦೬ | ನರ್ಸ್ | ೫% | ೫೫% | ೪೦% |
| ೦೭ | ಗಣ್ಯಮಾನ್ಯ | ೨೦% | ೦% | ೮೦% |
| ೦೮ | ಗ್ರಾಮವಾಸಿ | ೩೦% | ೦% | ೭೦% |
| ೦೯ | ಟೀಚರ್ | ೩೦% | ೧೫% | ೫೫% |
| ೧೦ | ಸಾಹಿತಿ | ೭೨% | ೦% | ೨೮% |
| ೧೧ | ಚೇರ್‌ಮನ್ | ೮೫% | ೦% | ೧೫% |
| ೧೨ | ಕನ್ನಡಕಧಾರಿ | ೬೧% | ೫% | ೩೩% |
| ೧೩ | ಬಾಯಾಳಿ | ೩೦% | ೩೮% | ೩೦% |
| ೧೪ | ಸಿದ್ಧಾಂತಿ | ೬೮% | ೫% | ೨೬% |
| ೧೫ | ಸೋಮಾರಿ | ೬೮% | ೦% | ೩೧% |
| ೧೬ | ಸೈನಿಕರು | ೧೫% | ೦% | ೮೫% |
| ೧೭ | ಹಠಮಾರಿ | ೪೪% | ೧೧% | ೪೪% |
| ೧೮ | ಹುಡುಗುತನ | ೨೯% | ೦% | ೭೦% |
| ೧೯ | ರೈತ | ೮೪% | ೦% | ೧೫% |
| ೨೦ | ಮಾನವ | ೩೮% | ೦% | ೬೧% |

**೧. ಪೌರಕಾರ್ಮಿಕರು:** ಈ ಪದ ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಸ್ವಚ್ಛತಾ ಕಾರ್ಯಗಳನ್ನು ಮಾಡುವವರು ಎಂಬ ಅರ್ಥವನ್ನು ಹೊಂದಿದೆ. ಕಾರ್ಮಿಕ ಪದ ಪುರುಷವಾಚಕವಾಗಿ ಬಳಕೆಯಲ್ಲಿರುವುದರಿಂದ ಪೌರಕಾರ್ಮಿಕರು ಎಂದು ಬಹುವಚನ ರೂಪವನ್ನು ವಾಕ್ಯರಚಿಸಲು ನೀಡಲಾಗಿತ್ತು. ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆಯರು ಕೂಡ ಸ್ವಚ್ಛತಾ ಕೆಲಸಗಳನ್ನು ಮಾಡುತ್ತಾರೆ. ಹಾಗಾಗಿ ಬಹುವಚನ ರೂಪವನ್ನು ನೀಡಲಾಗಿತ್ತು. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಬ್ಬರು ಮಾತ್ರ ಈ ಪದವನ್ನು ಪುರುಷವಾಚಕವಾಗಿ ಬಳಸಿ ವಾಕ್ಯರಚನೆ ಮಾಡಿದ್ದಾರೆ. ಉಳಿದ ೧೯ ಜನ ತಟಸ್ಥ ಅರ್ಥದಲ್ಲಿ ಈ ಪದವನ್ನು ಬಳಸಿ, ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೫% ಪುರುಷವಾಚಕವಾಗಿ, ೯೫%ರಷ್ಟು ತಟಸ್ಥವಾಗಿ ರಚಿಸಿದ್ದಾರೆ. ಇದರ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಪ್ರಜೆಗಳ ಕೆಲಸವನ್ನು ನಿರ್ವಹಿಸುವವ ಪೌರಕಾರ್ಮಿಕ.

೨. ಪೌರಕಾರ್ಮಿಕರು ಸಮಾಜದಲ್ಲಿ ಜನರ ಆರೋಗ್ಯವನ್ನು ಕಾಪಾಡುವಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸುತ್ತಾರೆ.

೩. ಭಾರತದಲ್ಲಿ ಇಂದು ಪೌರಕಾರ್ಮಿಕರ ಗೋಳು ಕೇಳುವವರಿಲ್ಲ.

೪. ಪ್ರತಿನಿತ್ಯ ಸ್ವಚ್ಛತೆಯನ್ನು ಕಾಪಾಡುವ ಜಲಗಾರರು.

೫. ಪೌರಕಾರ್ಮಿಕರು ಇಂದು ಬೆಂಗಳೂರು ಒಳಗೊಂಡಂತೆ ಪ್ರಪಂಚದ ಎಲ್ಲ ನಗರ ಜೀವನದ ಅವಿಭಾಜ್ಯ ಅಂಗಗಳಾಗಿ ಕೆಲಸನಿರ್ವಹಿಸುತ್ತಿದ್ದಾರೆ.

**೨. ಅರ್ಜಿದಾರರು:** ಈ ಪದ ವೃತ್ತಿ ಹಾಗೂ ಶಿಕ್ಷಣಕ್ಕಾಗಿ ಸಂಸ್ಥೆಗಳಿಗೆ ಮನವಿಯನ್ನು ಸಲ್ಲಿಸುವವರು ಎಂಬ ಅರ್ಥವನ್ನು ಹೊಂದಿದೆ. ಈ ಪದದಲ್ಲಿ ಬಳಕೆಯಾಗಿರುವ 'ದಾರ' ಪ್ರತ್ಯಯ ಪುರುಷ ಸೂಚಕ ಪ್ರತ್ಯಯವಾದ್ದರಿಂದ ಮಹಿಳೆಯರನ್ನು ಒಳಗೊಳ್ಳಬೇಕಾದರೆ ಈ ಪದವನ್ನು ಬಹುವಚನದಲ್ಲಿ ಬಳಸಬೇಕಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಬ್ಬರು ಮಾತ್ರ ಈ ಪದವನ್ನು ಪುರುಷವಾಚಕವಾಗಿ ಬಳಸಿ ವಾಕ್ಯರಚನೆ ಮಾಡಿದ್ದಾರೆ. ಉಳಿದ ೧೯ ಜನ ತಟಸ್ಥ ಅರ್ಥದಲ್ಲಿ ಈ ಪದವನ್ನು ಬಳಸಿ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೫%ರಷ್ಟು ಪುರುಷವಾಚಕವಾಗಿ, ೯೫%ರಷ್ಟು ತಟಸ್ಥವಾಗಿವೆ. ಇದರ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಕೆಲಸ ಬಯಸಿ ಅರ್ಜಿಹಾಕುವವ.

೨. ನಮ್ಮ ತಾಲ್ಲೂಕು ಆಫೀಸಿನಲ್ಲಿ ಆದಾಯ ಪ್ರಮಾಣ ಪತ್ರಕ್ಕಾಗಿ ಅರ್ಜಿಯನ್ನು ಅರ್ಜಿದಾರರು ಕಡ್ಡಾಯವಾಗಿ ನೀಡಲೇಬೇಕು.

೩. ಪಡಿತರ ಚೀಟಿ ನೀಡುವವರಿಗಾಗಿ ಅರ್ಜಿದಾರರು ಕಾಯುತ್ತ ಕುಳಿತರು.

೪. ಪ್ರಾಂಶುಪಾಲರು ಅರ್ಜಿದಾರರನ್ನು ವಿಚಾರಿಸಿದರು.

೫. ಅವಶ್ಯವಿದ್ದ ಸಂಸ್ಥೆಗೆ ಬೇಡಿಕೆ ಅವಶ್ಯವಿದ್ದಲ್ಲಿ ಹೊರಟವರು ಅರ್ಜಿದಾರರು.

**೩. ರೂಪದರ್ಶಿ:** ಈ ಪದ ಸುಂದರವಾಗಿ ಕಾಣುವ, ರೂಪವನ್ನು ಪ್ರದರ್ಶಿಸುವ ಎಂಬ ಅರ್ಥಗಳನ್ನು ಹೊಂದಿದೆ. ಸೌಂದರ್ಯ ಸ್ಪರ್ಧೆಗಳು ಮೊದಲು ಹೆಣ್ಣುಮಕ್ಕಳಿಂದ ಪ್ರಾರಂಭವಾದ್ದರಿಂದ ರೂಪದರ್ಶಿ

ಎಂಬ ಪದ ಸಮಾಜದಲ್ಲಿ ಹೆಚ್ಚು ಸ್ತ್ರೀವಾಚಕವಾಗಿ ಬಳಕೆಯಲ್ಲಿದೆ. ಇಂದು ಸೌಂದರ್ಯ ಸ್ಪರ್ಧೆಗಳು ಪುರುಷರಿಗೂ ನಡೆಯುತ್ತಿರುವುದರಿಂದ ಅವರನ್ನು ರೂಪದರ್ಶಿ ಎಂದು ಪರಿಗಣಿಸಲಾಗುತ್ತಿದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೧೧ ಜನ ಇದನ್ನು ಸ್ತ್ರೀವಾಚಕವಾಗಿ ಬಳಸಿ ವಾಕ್ಯದ ರಚನೆ ಮಾಡಿದ್ದಾರೆ. ೮ ಜನ ತಟಸ್ಥ ಅರ್ಥದಲ್ಲಿ ಈ ಪದವನ್ನು ಬಳಸಿ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೫೮%ರಷ್ಟು ಸ್ತ್ರೀವಾಚಕವಾಗಿ, ೪೨%ರಷ್ಟು ತಟಸ್ಥವಾಗಿವೆ. ಇದರ ಬಳಕೆಯ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಡಯಾನಾ ಎಂಬ ರೂಪವತಿ ತನ್ನ ಬೆಡಗಿನಿಂದ ಹೆಸರಾಗಿ ಸೌಂದರ್ಯ ಸ್ಪರ್ಧೆಗಳಲ್ಲಿ ಭಾಗವಹಿಸಿ ರೂಪದರ್ಶಿ ಎಂಬ ಪದಕ್ಕೆ ಹೆಸರಾದವಳು.

೨. ನಟಿ ಸೌಂದರ್ಯ ತುಂಬಾ ಸುಂದರಿ, ರೂಪದರ್ಶಿಯಾಗಿದ್ದಳು.

೩. ಸೌಂದರ್ಯ ಸ್ಪರ್ಧೆಗಳಲ್ಲಿ ಭಾಗವಹಿಸಿ ತಮ್ಮ ಸೌಂದರ್ಯವನ್ನು ಪ್ರದರ್ಶಿಸುವವರು ರೂಪದರ್ಶಿಗಳು.

೪. ರೂಪವನ್ನು ತೋರುವವಳು, ಸೌಂದರ್ಯವನ್ನು ಪ್ರದರ್ಶಿಸುವವಳು ರೂಪದರ್ಶಿ.

೫. ಅತಿ ಕಡಿಮೆ ಬಟ್ಟೆ ಹಾಕಿಕೊಳ್ಳುವ ಮತ್ತು ಯಾವುದೇ ಜಾಹೀರಾತುಗಳ ಉತ್ಪನ್ನಗಳನ್ನು ಬಳಸದಿರುವ ಸಮಯದ ಗೊಂಬೆ ರೂಪದರ್ಶಿ.

೬. ವಯ್ಯಾರದಿಂದ ತನ್ನ ಅಂಗಾಂಗಳನ್ನು ಪ್ರದರ್ಶಿಸುವ ಮಹಿಳೆ ರೂಪದರ್ಶಿ.

**೪. ಗಗನಯಾತ್ರಿ:** ಈ ಪದ ಆಕಾಶದಲ್ಲಿ ಸಂಚರಿಸುವವರು ಎಂಬ ಅರ್ಥವನ್ನು ಹೊಂದಿದೆ. ಆಕಾಶದಲ್ಲಿ ಸಂಚರಿಸುವ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಸಮಾನವಾಗಿ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೩ ಜನ ಇದನ್ನು ಪುರುಷವಾಚಕವಾಗಿ, ೬ ಜನ ಸ್ತ್ರೀವಾಚಕವಾಗಿ, ೧೧ ಜನ ತಟಸ್ಥವಾಗಿ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೧೫%ರಷ್ಟು ಪುರುಷವಾಚಕವಾಗಿ, ೩೦%ರಷ್ಟು ಸ್ತ್ರೀವಾಚಕವಾಗಿ, ೫೫%ರಷ್ಟು ತಟಸ್ಥವಾಗಿವೆ. ಇದರ ಬಳಕೆಯ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ವಿಮಾನಗಳಲ್ಲಿ ಸಂಚರಿಸುವವ ಗಗನಯಾತ್ರಿ

೨. ಇಂದು ಮಹಿಳೆಯರು ಗಗನಯಾತ್ರಿಗಳಾಗಿ ಸಂಚರಿಸಲು ಇಚ್ಛಿಸುತ್ತಾರೆ.

೩. ಕಲ್ಪನಾ ಚಾವ್ಲಾ ಗಗನಯಾತ್ರಿಯಾಗಿದ್ದಾಳೆ.

೪. ಆಕಾಶದಲ್ಲಿ ತಿರುಗುವ ಸಾಮರ್ಥ್ಯ ಗಗನಯಾತ್ರಿಗಳಿಗೆ ಮಾತ್ರ ಇರುತ್ತದೆ.

೫. ಅನ್ಯಗ್ರಹಗಳು ಮತ್ತು ನಕ್ಷತ್ರಗಳ ಕುರಿತು ಬಾಹ್ಯಾಕಾಶದಲ್ಲಿ ವಾಸಿಸಿ ಅಧ್ಯಯನ ಮಾಡುವವ.

೬. ಭಾರತೀಯರಾದ ಚಾವ್ಲಾರವರು ವಿಶ್ವದ ಮಹಿಳೆಯರಲ್ಲಿ ಪ್ರಥಮಬಾರಿಗೆ ಗಗನ ಯಾತ್ರಿಯಾಗಿ ಹೋಗಿದ್ದರು.

೭. ವಿಜ್ಞಾನದ ಬೆಳವಣಿಗೆಯಿಂದ ನಮ್ಮ ಅನ್ವೇಷಣೆಗಳು ಆಕಾಶದಲ್ಲಿ ಗಗನಯಾತ್ರಿಗಳ ಮೂಲಕ ನಡೆಯುತ್ತಿವೆ.

**೫. ಕುಲಪತಿ:** ಈ ಪದ ಕುಲದ ಪ್ರಮುಖರು, ವಿಶ್ವವಿದ್ಯಾಲಯದ ಮುಖ್ಯಸ್ಥರು ಎಂಬ ಅರ್ಥಗಳನ್ನು ಹೊಂದಿದೆ. ಇದು ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಸಮಾನವಾಗಿ ಅನ್ವಯವಾಗುವ ಪದ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೩ ಜನ ಪುರುಷವಾಚಕವಾಗಿ, ೨ ಜನ ಸ್ತ್ರೀವಾಕಚವಾಗಿ, ೧೫ ಜನ ತಟಸ್ಥವಾಗಿ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೧೫%ರಷ್ಟು ಪುರುಷವಾಚಕವಾಗಿ, ೧೦%ರಷ್ಟು ಸ್ತ್ರೀವಾಚಕವಾಗಿ, ೭೫%ರಷ್ಟು ತಟಸ್ಥವಾಗಿವೆ. ಇದರ ಬಳಕೆಯ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಕನ್ನಡ ವಿಶ್ವವಿದ್ಯಾಲಯ ಹಂಪಿಯ ಕುಲಪತಿಗಳು ಮಲ್ಲಿಕಾಘಂಟಿಯವರು.

೨. ವಿಶ್ವವಿದ್ಯಾಲಯದ ಉನ್ನತ ಅಧಿಕಾರಿಗಳನ್ನು ಕುಲಪತಿ ಎನ್ನುವರು.

೩. ವಿಶ್ವವಿದ್ಯಾಲಯದ ಆಡಳಿತಕ್ಕೆ, ಅಭಿವೃದ್ಧಿಗೆ, ಶೈಕ್ಷಣಿಕ ಚಟುವಟಿಕೆಗಳಿಗೆ ಮುಖ್ಯಸ್ಥರಾದವರನ್ನು ಕುಲಪತಿ ಎನ್ನುತ್ತಾರೆ.

೪. ಒಂದು ಸಂಸ್ಥೆಯ ಮುಖ್ಯಸ್ಥರು, ವಿಶ್ವವಿದ್ಯಾಲಯದ ಮುಖ್ಯಸ್ಥನೇ ಕುಲಪತಿ.

೫. ಒಂದು ವಿವಿಯನ್ನು ಸಮರ್ಪಕವಾಗಿ ನಡೆಸಿಕೊಂಡು ಹೋಗುವುದು ಕುಲಪತಿಗಳ ಜವಾಬ್ದಾರಿ.

೬. ಒಂದು ವಿಶ್ವವಿದ್ಯಾಲದಯ ಘನತೆ, ಗೌರವವನ್ನು ಕಾಪಾಡುವ, ರೂಪಿಸುವಲ್ಲಿ ಕುಲಪತಿಯವರಿಗೆ ಹೆಚ್ಚಿನ ಜವಾಬ್ದಾರಿ ಇರುತ್ತದೆ. ಇದೊಂದು ಶ್ರೇಷ್ಠ ಹುದ್ದೆಯಾಗಿದೆ. ಜೀವ ಪರವಾದ ಬರಹಗಳನ್ನು ಚಿಂತನೆಗಳನ್ನು ಹೊರಡಿಸುವಲ್ಲಿ ಹೆಚ್ಚಿನ ಅಧಿಕಾರವಿದೆ.

**೬. ನರ್ಸ್:** ಇದು ಇಂಗ್ಲಿಷ್ ಭಾಷೆಯಿಂದ ಬಂದ ಪದವಾಗಿದೆ. ಇದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ದಾದಿ ಎಂಬ ಪದ ಬಳಕೆಯಲ್ಲಿದೆ. ಆದರೂ ಇಂಗ್ಲಿಷ್ ರೂಪವೇ ಹೆಚ್ಚು ಬಳಕೆಯಲ್ಲಿದೆ. ಪಾರಂಪರಿಕವಾಗಿ ಶುಶ್ರೂಷೆ ಕೆಲಸಗಳನ್ನು ಹೆಂಗಸರು ಹೆಚ್ಚು ನಿರ್ವಹಿಸುತ್ತಿದ್ದರಿಂದ, ಈ ಪದ ಸ್ತ್ರೀವಾಚಕವಾಗಿ ಭಾಷಿಕರ ಗ್ರಹಿಕೆಯಲ್ಲಿದೆ. ಆದರೆ, ಶುಶ್ರೂಷೆ ಮಾಡುವ ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಈ ಪದ ಸಮಾನವಾಗಿ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಬ್ಬರು ಮಾತ್ರ ಇದನ್ನು ಪುರುಷವಾಚಕವಾಗಿ ಬಳಸಿ ವಾಕ್ಯರಚನೆ ಮಾಡಿದ್ದಾರೆ. ಉಳಿದವರಲ್ಲಿ ೧೧ ಜನ ಸ್ತ್ರೀವಾಚಕವಾಗಿ, ೮ ಜನ ತಟಸ್ಥವಾಗಿ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೫%ರಷ್ಟು ಪುರುಷವಾಚಕವಾಗಿ, ೫೫%ರಷ್ಟು ಸ್ತ್ರೀವಾಚಕವಾಗಿ, ೪೦%ರಷ್ಟು ತಟಸ್ಥವಾಗಿವೆ. ಇದರ ಬಳಕೆಯ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಪರಿಚಾರಕಿ ಅಥವಾ ರೋಗಿಗಳ ಸೇವಕಿ. ಆಸ್ಪತ್ರೆಗಳಲ್ಲಿ ರೋಗಿಗಳ ಸೇವೆ ಮಾಡಿ ಅವರು ಗುಣಮುಖರಾಗಲು ಸಹಕರಿಸುತ್ತಾಳೆ.

೨. ಆಸ್ಪತ್ರೆಯಲ್ಲಿ ನರ್ಸ್ ಕೆಲಸ ಮಾಡುತ್ತಾಳೆ.

೩. ಆಸ್ಪತ್ರೆಯ ಸೇವಕರು ರೋಗಿಗಳಿಗೆ ಸೇವೆ ಮಾಡುವವರು ನರ್ಸ್.

೪. ಶುಶ್ರೂಷಕಿ ಅಥವಾ ಶುಶ್ರೂಷಕರಾಗಿರುತ್ತಾರೆ. ರೋಗಿಗಳ ಜವಾಬ್ದಾರರು, ನಿರ್ವಾಹಕರು.

೫. ಆಸ್ಪತ್ರೆಯಲ್ಲಿ ರೋಗಿಗಳಿಗೆ ಶುಶ್ರೂಷೆ ಮಾಡುವ ಮಹಿಳೆ. ನರ್ಸ್ ಒಂದು ರೀತಿಯಲ್ಲಿ ಒಡಹುಟ್ಟಿದವಳಾಗಿರುತ್ತಾಳೆ ತನ್ನ ಕೆಲಸದಲ್ಲಿ.

೬. ನಿಸ್ವಾರ್ಥ ಸೇವೆಯ ಮೂಲಕ ದಾದಿಯು ಕರ್ತವ್ಯ ನಿರ್ವಹಿಸುತ್ತಾಳೆ.

೭. ರೋಗಿಗಳನ್ನು ನೋಡಿಕೊಳ್ಳುವವ.

**೭. ಗಣ್ಯಮಾನ್ಯ:** ಈ ಪದ ಗಣನೀಯವಾದ, ಪ್ರಮುಖವಾದ, ಗೌರವಯುಕ್ತವಾದ ಮನ್ನಣೆಪಡೆದ ಎಂಬ ಅರ್ಥಗಳನ್ನು ಹೊಂದಿದೆ. ಇದು ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಸಮಾನವಾಗಿ ಅನ್ವಯವಾಗುವ ಗೌರವಸೂಚಕ ಸಂಬೋಧನಾ ರೂಪ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೪ ಜನ ಪುರುಷವಾಚಕವಾಗಿ, ೧೬ ಜನ ತಟಸ್ಥವಾಗಿ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೨೦%ರಷ್ಟು ಪುರುಷವಾಚಕವಾಗಿ, ೮೦%ರಷ್ಟು ತಟಸ್ಥವಾಗಿವೆ. ಇದರ ಬಳಕೆಯ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ವಿಶಿಷ್ಟತೆಯಿಂದ ಗುರುತಿಸಿಕೊಂಡವನು ಗಣ್ಯಮಾನ್ಯ

೨. ಸಮಾಜದ ಸೌಹಾರ್ದತೆಗೆ ಪಾತ್ರವಾಗಿರುವ ವ್ಯಕ್ತಿಗಳೆಲ್ಲರೂ ಗಣ್ಯಮಾನ್ಯರು

೩. ಹೆಸರುವಾಸಿಯಾದ, ಗೌರವಾನ್ವಿತ ಪ್ರಧಾನಮಂತ್ರಿ ಮೋದಿಯವರು ತುಂಬಾ ಗಣ್ಯಮಾನ್ಯ ವ್ಯಕ್ತಿಯಾಗಿದ್ದಾರೆ.

೪. ಸಮಾಜಮುಖಿ ಚಿಂತನೆಯನ್ನು ಮಾಡಿ, ಸಮಾಜವನ್ನು ತಿದ್ದುವಂತಹ ಕಾರ್ಯದಲ್ಲಿ ತೊಡಗಿದ ವ್ಯಕ್ತಿಗಳಾದ ಅಂಬೇಡ್ಕರ್, ಸುಭಾಷ್, ವಿವೇಕಾನಂದ ಇತರೆ ವ್ಯಕ್ತಿಗಳನ್ನು ಗಣ್ಯಮಾನ್ಯ ಎಂದು ಕರೆಯುವುದು ಉತ್ತಮ.

೫. ಉತ್ತಮ ಗುಣಗಳನ್ನು ತನ್ನ ನಿಜಜೀವನದಲ್ಲಿ ಅಳವಡಿಸಿಕೊಂಡವರು ಗಣ್ಯಮಾನ್ಯರಾಗಿರುತ್ತಾರೆ.

೬. ಸಮಾಜದ ಸೌಹಾರ್ದತೆಗೆ ಪಾತ್ರವಾಗಿರುವ ವ್ಯಕ್ತಿಗಳೆಲ್ಲರೂ ಗಣ್ಯಮಾನ್ಯರು.

೭. ಹಳ್ಳಿಗಳಲ್ಲಿ ಗಣ್ಯಮಾನ್ಯರೆನಿಸಿಕೊಂಡವರು ಸಹ ಮನೆಮುರಿಯುವ ಕೆಲಸದಲ್ಲಿ ತೊಡಗಿರುತ್ತಾರೆ.

೮. ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿ ಸೇವೆಯನ್ನು ಹೊಂದಿರುವವರು ಗಣ್ಯಮಾನ್ಯರು.

**೮. ಗ್ರಾಮವಾಸಿ:** ಈ ಪದ ಗ್ರಾಮದಲ್ಲಿ ವಾಸಿಸುವವರು, ನೆಲೆಸಿರುವವರು ಎಂಬ ಅರ್ಥಗಳನ್ನು ಹೊಂದಿದೆ. ಗ್ರಾಮದಲ್ಲಿ ವಾಸಿಸುವ ಪುರುಷ, ಸ್ತ್ರೀ, ಮಕ್ಕಳು ಎಲ್ಲರಿಗೂ ಈ ಪದ ಸಮಾನವಾಗಿ

ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೬ ಜನ ಪುರುಷವಾಚಕವಾಗಿ, ೧೪ ಜನ ತಟಸ್ಥ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೩೦%ರಷ್ಟು ಪುರುಷವಾಚಕವಾಗಿ, ೭೦%ರಷ್ಟು ತಟಸ್ಥವಾಗಿವೆ. ಇದರ ಬಳಕೆಯ ಕೆಲವು ಮಾದರಿಗಳು ಈ ಮುಂದಿನಂತಿವೆ.

ಮಾದರಿಗಳು: ೧. ಗ್ರಾಮವಾಸಿಗಳು ಇಂದು ಪಟ್ಟಣದ ಮೊರೆಹೋಗುತ್ತಿದ್ದಾರೆ.

೨. ಹಳ್ಳಿಗಳಲ್ಲಿ ನೆಲೆಸಿದವರು, ಸೀಮಿತ ಸೌಲಭ್ಯಗಳಿಗೆ ಹೊಂದಿಕೊಂಡು ಕೃಷಿಯನ್ನು ಪ್ರಧಾನ ಕಸುಬಾಗಿಸಿಕೊಂಡು ಬದುಕುವವರು.

೩. ಹಲವು ವರ್ಷಗಳಿಂದ ಗ್ರಾಮದಲ್ಲಿರುವವನೇ ಗ್ರಾಮವಾಸಿ.

೪. ಇಂದಿನ ಗ್ರಾಮವಾಸಿಗಳು ಗ್ರಾಮಪಂಚಾಯ್ತಿಯ ಸವಲತ್ತುಗಳನ್ನು ಬಳಸುವಲ್ಲಿ ನಿಸ್ಸೀಮರು.

೫. ಇಂದಿನ ಆಧುನಿಕ ಜ್ಞಾನ ಗ್ರಾಮವಾಸಿಗೂ ಒಳಹೊಕ್ಕಿದೆ. ಗ್ರಾಮವಾಸಿಯು ಆರೋಗ್ಯದಿಂದ ಹೆಚ್ಚಿನ ವರ್ಷಗಳ ಕಾಲ ಬದುಕುತ್ತಾರೆ.

೬. ಯಾವುದಾದರೂ ಒಂದು ಗ್ರಾಮದಲ್ಲಿ ವಾಸಿಸುವವನು ಗ್ರಾಮವಾಸಿ.

೭. ಅತೀ ನೆಮ್ಮದಿಯಿಂದಿರುವ ಮತ್ತು ಯಾವುದೇ ಸೌಲಭ್ಯಗಳಿಲ್ಲದ ಜೀವನ ಕ್ರಮ.

೮. ಬಹುಪಾಲು ಗ್ರಾಮವಾಸಿಗಳು ರೈತರು.

**೯. ಟೀಚರ್:** ಇದು ಇಂಗ್ಲಿಷ್ ಪದ. ಶಿಕ್ಷಕರು, ಗುರುಗಳು ಎಂಬ ಅರ್ಥದಲ್ಲಿ ಕನ್ನಡ ಭಾಷಿಕರಲ್ಲಿ ಬಳಕೆಯಲ್ಲಿದೆ. ಶಿಕ್ಷಣ ನೀಡುವ ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಈ ಪದ ಸಮಾನವಾಗಿ ಅನ್ವಯವಾಗುತ್ತದೆ. ಬಳಕೆಯ ನೆಲೆಯಲ್ಲಿ ಈ ಪದ ಹೆಚ್ಚು ಸ್ತ್ರೀವಾಚಕವಾಗಿ ಬಳಕೆಯಲ್ಲಿದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೬ ಜನ ಪುರುಷವಾಚಕವಾಗಿ, ೩ ಜನ ಸ್ತ್ರೀವಾಕಚವಾಗಿದೆ. ೧೧ ಜನ ತಟಸ್ಥ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೩೦%ರಷ್ಟು ಪುರುಷವಾಚಕವಾಗಿ, ೧೫%ರಷ್ಟು ಸ್ತ್ರೀವಾಚಕವಾಗಿ, ೫೫%ರಷ್ಟು ತಟಸ್ಥವಾಗಿವೆ. ಇದರ ಬಳಕೆ ಕೆಲವು ಮಾದರಿಗಳು ಈ ಮುಂದಿನಂತಿವೆ.

ಮಾದರಿಗಳು: ೧. ಶಿಕ್ಷಕ(ಕಿ) ಪ್ರತಿಯೊಂದು ಹೊಸ ವಿಚಾರ ತಿಳಿಸಿಕೊಡುವವರು.

೨. ಸುಶಿಕ್ಷಿತವಾದ ಜ್ಞಾನವನ್ನು ಪಡೆದ ಶಿಕ್ಷಕನು ವಿದ್ಯಾರ್ಥಿಯನ್ನು ಉತ್ತಮ ದಾರಿಗೆ ನಡೆಸಬಲ್ಲವನು.

೩. ಪಾಠ ಹೇಳುವ ಮಹಿಳೆ ಟೀಚರ್.

೪. ನಮ್ಮ ಪ್ರಾಥಮಿಕ ಶಾಲೆಯ ಶಿಕ್ಷಕರು ಅತ್ಯುತ್ತಮ ಬೋಧಕರಾಗಿದ್ದಾರೆ.

೫. ಮಕ್ಕಳಿಗೆ ವಿದ್ಯೆಯನ್ನು ಕಲಿಸಿ ಮಕ್ಕಳಲ್ಲಿ ಒಳ್ಳೆತನ ಒಳ್ಳೆಗುಣ ಮೂಡಿಸುವ ಶಕ್ತಿ ಶಿಕ್ಷಕರಿಗೆ ಇದೆ.

೬. ಶಾಲೆಗಳಲ್ಲಿ ಟೀಚರ್ ಬೋಧಿಸುತ್ತಾರೆ.

೧೦. **ಸಾಹಿತಿ:** ಈ ಪದ ಸಾಹಿತ್ಯವನ್ನು ರಚಿಸುವವರು ಎಂಬ ಅರ್ಥವನ್ನು ಒಳಗೊಂಡಿದೆ. ಸಾಹಿತ್ಯ ರಚಿಸುವ ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಈ ಪದ ಸಮಾನವಾಗಿ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೧೩ ಜನ ಪುರುಷವಾಚಕವಾಗಿ, ೫ ಜನ ತಟಸ್ಥ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೭೨%ರಷ್ಟು ಪುರುಷವಾಚಕವಾಗಿ, ೨೭%ರಷ್ಟು ತಟಸ್ಥವಾಗಿವೆ. ಇದರ ಬಳಕೆಯ ಕೆಲವು ಮಾದರಿಗಳು ಈ ಮುಂದಿನಂತಿವೆ.

ಮಾದರಿಗಳು: ೧. ಸಾಹಿತ್ಯದಲ್ಲಿ ಅಪಾರ ಕೃಷಿ ಮಾಡಿದವನೇ ಸಾಹಿತಿ.

೨. ಜೀವನದ ಹಲವು ಮುಖಗಳನ್ನು ಕೃತಿಗಳ ರೂಪದಲ್ಲಿ ಜನರಿಗೆ ನೀಡುವಂತವನು ಸಾಹಿತಿ.

೩. ಸಮಾಜದಲ್ಲಿನ ಅನಿಷ್ಟಗಳನ್ನು ತಿಳಿಸುವವನು ಮತ್ತು ಸೌಂದರ್ಯದ ಆರಾಧಕ.

೪. ಕಲ್ಪನೆಗಳ ಮೂಲಕ ಸಾಹಿತ್ಯವನ್ನು ಉಣಬಡಿಸುವವನು.

೫. ಸಾಹಿತಿ ಸಮುದಾಯದ ಧ್ವನಿಯಾಗಿ ಇರಬೇಕು.

೬. ಕಾದಂಬರಿ, ಕತೆ ಮೊದಲಾದ ಸಾಹಿತ್ಯ ಪ್ರಕಾರಗಳ ರಚನೆಯಲ್ಲಿ ಪರಿಣಿತಿಯನ್ನು ಹೊಂದಿದವರು.

೧೧. **ಚೇರ್‌ಮನ್:** ಇದು ಇಂಗ್ಲಿಷ್ ಪದ. ಇದೇ ರೂಪ ಕನ್ನಡ ಭಾಷಿಕರಲ್ಲಿಯೂ ಬಳಕೆಯಲ್ಲಿದೆ. ಗ್ರಾಮಪಂಚಾಯ್ತಿ ಮುಖ್ಯಸ್ಥರು ಹಾಗೂ ಯಾವುದೇ ಸಂಸ್ಥೆಯ ಮುಖ್ಯಸ್ಥರನ್ನು ಚೇರ್‌ಮನ್ ಎಂದು ಕರೆಯುತ್ತಾರೆ. ಈ ಪದದಲ್ಲಿರುವ Men ಪುರುಷವಾಚಕ ಪದ. ಇಂಗ್ಲಿಷ್‌ನಲ್ಲಿ ಈ ಪದದ ರಚನೆ ಪುರುಷರನ್ನು ಮಾತ್ರ ಸೂಚಿಸುವಂತಿದ್ದರೂ ಈ ಹುದ್ದೆ ಅಲಂಕರಿಸಿದ ಸ್ತ್ರೀ, ಪುರುಷ ಎಲ್ಲರಿಗೂ ಈ ಪದವೇ ಬಳಕೆಯಲ್ಲಿತ್ತು. ಸ್ತ್ರೀವಾದಿಗಳು ಇಂತಹ ಕೆಲವು ಪದಗಳನ್ನು ರಾಚನಿಕವಾಗಿ ಬದಲಾಯಿಸಿದರು. ಹೆಣ್ಣು ಇಂತಹ ಪದವಿಗಳನ್ನು ನಿರ್ವಹಿಸಿದಾಗ ಚೇರ್‌ವುಮನ್ ಪದ ಬಳಸಬೇಕೆಂದು ಸೂಚಿಸಿದರು. ನಂತರ ಲಿಂಗ ತಾರತಮ್ಯವನ್ನು ಸೂಚಿಸದ ಚೇರ್‌ಪರ್ಸನ್ ಎಂಬ ಪದವನ್ನು ಬಳಕೆಗೆ ತರಲಾಯಿತು. ಆದರೆ, ಕನ್ನಡ ಭಾಷಿಕ ಪರಿಸರದಲ್ಲಿ ಚೇರ್‌ಮನ್ ಪದವು ಗ್ರಾಮೀಣ ಪರಿಸರದಲ್ಲಿ ಚೇರ್‌ಮೆನಪ್ಪ, ಚೇರಮೆನಮ್ಮ ಎಂಬ ನೆಲೆಗಳಲ್ಲಿ ಬಳಕೆಯಲ್ಲಿದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೧೭ ಜನ ಪುರುಷವಾಚಕವಾಗಿ, ೩ ಜನ ತಟಸ್ಥ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೮೫%ರಷ್ಟು ಪುರುಷವಾಚಕವಾಗಿ, ೧೫%ರಷ್ಟು ತಟಸ್ಥವಾಗಿವೆ. ಇದರ ಬಳಕೆಯ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಗ್ರಾಮದ ಜವಾಬ್ದಾರಿಯನ್ನು ನೋಡಿಕೊಳ್ಳುವವನು.

೨. ಕಂಪನಿಯ ಚೇರ್‌ಮನ್‌ಗಳು ಪ್ರತಿಯೊಂದು ವ್ಯವಹಾರದಲ್ಲಿ ಭಾಗಿಯಾಗಿದ್ದರೆ ಕಂಪನಿಯ ಬೆಳವಣಿಗೆ ಸಾಧ್ಯ.

೩. ಗ್ರಾಮ ಅಥವಾ ಸಂಸ್ಥೆಗಳ ಕೆಲಸ ನಿರ್ವಹಿಸುವ ಪ್ರಮುಖ ವ್ಯಕ್ತಿ.

೪. ಒಂದು ಖಾಸಗಿ ಸಂಸ್ಥೆಯನ್ನು ನಡೆಸಿಕೊಂಡು ಹೋಗುವ ಆ ಸಂಸ್ಥೆಯ ಮುಖ್ಯಸ್ಥ ಚೇರ್‌ಮನ್‌ರಾಗಿದ್ದಾರೆ.

೫. ನಮ್ಮೂರಿನ ಪಂಚಾಯಿತಿ ಚೇರ್‌ಮನ್ ಅನುದಾನವನ್ನೆಲ್ಲಾ ನುಂಗಿ ನೀರು ಕುಡಿದ ಮಹಾನ್ ಪುರುಷ.

೬. ಚೇರ್‌ಮನ್ ಜವಾಬ್ದಾರಿಯುತ ಕೆಲಸ ಕಾರ್ಯಗಳನ್ನು ನಿರ್ವಹಿಸುವವನು.

೭. ಸಂಘ ಸಂಸ್ಥೆಗಳನ್ನು ಮುನ್ನಡೆಸುವ ಜವಾಬ್ದಾರಿಯುತ ಮನುಷ್ಯ.

೧೨. **ಕನ್ನಡಕಧಾರಿ:** ಈ ಪದವು ಕಣ್ಣಿಗೆ ಕನ್ನಡಕ ಧರಿಸುವವರು ಎಂಬ ಅರ್ಥವನ್ನು ಹೊಂದಿದೆ. ಕನ್ನಡಕ ಧರಿಸುವ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಸಮಾನವಾಗಿ ಬಳಕೆಯಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೧೧ ಜನ ಪುರುಷವಾಚಕವಾಗಿ, ಒಬ್ಬರು ಸ್ತ್ರೀವಾಚಕವಾಗಿ, ೬ ಜನ ತಟಸ್ಥ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೬೧%ರಷ್ಟು ಪುರುಷವಾಚಕವಾಗಿ, ೫%ರಷ್ಟು ಸ್ತ್ರೀವಾಚಕವಾಗಿ, ೩೩% ತಟಸ್ಥವಾಗಿವೆ. ಇದರ ಬಳಕೆಯ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಮಹಾತ್ಮಗಾಂಧಿಯವರು ಕನ್ನಡಕಧಾರಿಯಾಗಿದ್ದರು.

೨. ಕನ್ನಡಕ ಧರಿಸಿದವ. ಕನ್ನಡ ಲೇಖಕರಾದ ಪೂರ್ಣಚಂದ್ರ ತೇಜಸ್ವಿಯವರು ಅವರ ವ್ಯಕ್ತಿತ್ವ ಅಲ್ಲದೇ ಕನ್ನಡಕದ ಮೂಲಕವೂ ಹೆಸರಾದವರು.

೩. ಸಿಟಿಯಲ್ಲಿ ವಯಸ್ಸಾದವರು ಬಹುಪಾಲು ಕನ್ನಡಕಧಾರಿಗಳಾಗಿರುತ್ತಾರೆ.

೪. ಕನ್ನಡಕ ಧರಿಸುವವರು. ನಮ್ಮ ರೂಮಿನಲ್ಲಿ ಗೌರಿ ಅಕ್ಕ ಕನ್ನಡಕವನ್ನು ಧರಿಸಿದ್ದಾಳೆ. ಕನ್ನಡಕವನ್ನು ಧರಿಸಿರುವುದರಿಂದ ಅವಳು ನೋಡಲು ಚೆನ್ನಾಗಿ ಕಾಣುತ್ತಾಳೆ.

೫. ಕಣ್ಣಿಗೆ ರಕ್ಷಕವನ್ನು ಹಾಕಿದವ. ಡಾಕ್ಟರ್ ಕನ್ನಡಕ ಹಾಕಿರುತ್ತಾರೆ.

೬. ಕೃತಕ ದೃಷ್ಟಿ ಉಳ್ಳವನು ಕನ್ನಡಕಧಾರಿ.

೭. ಕಣ್ಣು ಕಾಣಿಸುವಂತೆ ಮಂಜಾದ ದೃಷ್ಟಿ ಸರಿಪಡಿಸುವಂತಹ ಸಾಧನ ಧರಿಸಿದವ.

೮. ಕನ್ನಡಕಧಾರಿ ಕಣ್ಣಿನ ಸಮಸ್ಯೆ ಉಳ್ಳವನು.

೯. ದೃಷ್ಟಿದೋಷ ಸರಿಪಡಿಸಲು ಕನ್ನಡಕ ಧರಿಸುವವನು ಕನ್ನಡಕಧಾರಿ.

೧೩. **ಬಾಯಾಳಿ:** ಈ ಪದ ಹೆಚ್ಚು ಮಾತನಾಡುವ ಎಂಬ ಅರ್ಥವನ್ನು ಹೊಂದಿದೆ. ಹೆಚ್ಚು ಮಾತನಾಡುವ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಸಮಾನವಾಗಿ ಅನ್ವಯವಾಗುತ್ತದೆ. ಸಾಮಾಜಿಕವಾಗಿ ಹೆಚ್ಚು ಮಾತನಾಡುವ ಹೆಣ್ಣಿಗೆ ಈ ಪದ ಹೆಚ್ಚು ಬಳಕೆಯಾಗುತ್ತಿರುವುದನ್ನು ಗಮನಿಸಬಹುದು. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೪ ಜನ ಪುರುಷವಾಚಕವಾಗಿ, ೫ ಜನ ಸ್ತ್ರೀವಾಚಕವಾಗಿ, ೪ ಜನ ತಟಸ್ಥ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೩೦%ರಷ್ಟು ಪುರುಷವಾಚಕವಾಗಿ, ೩೮%ರಷ್ಟು ಸ್ತ್ರೀವಾಚಕವಾಗಿ, ೩೦%ರಷ್ಟು ತಟಸ್ಥವಾಗಿವೆ. ಇದರ ಬಳಕೆಯ ಕೆಲವು ಮಾದರಿಗಳು ಮುಂದಿನಂತಿವೆ.

ಮಾದರಿಗಳು: ೧. ಕೆಲವು ಜನಗಳು ಬಾಯಾಳಿತನದಿಂದ ಕೆಲಸ ಮಾಡಿಸಿಕೊಳ್ಳುತ್ತಾರೆ.

೨. ಕೆಲವರು ಹೆಚ್ಚು ಮಾತನಾಡಿ ಬಾಯಾಳಿಯೆಂದು ವಿಶ್ವವಿಖ್ಯಾತಿಯಾಗಿದ್ದಾರೆ.

೩. ಸುಮ್ಮಸುಮ್ಮನೆ ಪ್ರತಿ ವಿಷಯದಲ್ಲೂ ಮಾತನಾಡುವವನು ಬಾಯಾಳಿ.

೪. ಮಾತನ್ನೇ ಬಂಡವಾಳವಾಗಿರಿಸಿದವನು ಬಾಯಾಳಿ.

೫. ನನ್ನ ಗೆಳತಿ ದೊಡ್ಡ ಬಾಯಾಳಿ.

೬. ಇನ್ನೊಬ್ಬರೊಂದಿಗೆ ಕಾರಣವಿಲ್ಲದೆ ಜಗಳ ಮಾಡುವವನು ಬಾಯಾಳಿ.

೭. ಅತಿ ಹೆಚ್ಚು ಮಾತನಾಡುವವಳು.

೮. ಕೆಲಸ ಮಾಡದೆ ಮಾತನಾಡುವವಳು.

೧೪. **ಸಿದ್ಧಾಂತಿ:** ಈ ಪದ ಸಿದ್ಧಾಂತಗಳನ್ನು ರೂಪಿಸುವವರು ಎಂಬ ಅರ್ಥವನ್ನು ಹೊಂದಿದೆ. ಸಿದ್ಧಾಂತ ರೂಪಿಸುವ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಸಮಾನವಾಗಿ ಈ ಪದ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೧೩ ಜನ ಪುರುಷವಾಚಕವಾಗಿ, ಒಬ್ಬರು ಸ್ತ್ರೀವಾಚಕವಾಗಿ ೫ ಜನ ತಟಸ್ಥವಾಗಿ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೬೮% ಪುರುಷವಾಚವಾಗಿ, ೫% ಸ್ತ್ರೀವಾಚಕವಾಗಿ, ೨೬% ತಟಸ್ಥವಾಗಿವೆ. ಇದರ ಬಳಕೆಯ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ತನ್ನದೇ ಸಿದ್ಧಾಂತ ಪ್ರಸ್ತುತ ಪಡಿಸುವವರು ಸಿದ್ಧಾಂತಿಗಳು.

೨. ಯಾವುದೇ ಒಂದು ಸಿದ್ಧಾಂತಕ್ಕೆ ಕಟ್ಟುಬಿದ್ದು ಅದನ್ನು ನಂಬಿ ಬಲವಾಗಿ ಪ್ರತಿಪಾದಿಸುವವನು.

೩. ಅಜ್ಜಿಯವರು ಮನೆಯಲ್ಲಿ ಮೊಮ್ಮಕ್ಕಳಿಗೆ ಅನೇಕ ರೀತಿಯ ಸಿದ್ಧಾಂತವನ್ನು ಹೇಳುತ್ತಾರೆ.

೪. ಒಂದು ವಿಚಾರಕ್ಕೆ ಬದ್ಧನಾದವ, ಕಲಬುರ್ಗಿಯವರು ಒಬ್ಬ ಸಿದ್ಧಾಂತಿ.

೫. ಕಟ್ಟುನಿಟ್ಟಾಗಿ, ಅಂದುಕೊಂಡಂತೆ ಇರುವವನು ಸಿದ್ಧಾಂತಿಗಾರ.

೬. ಹಲವು ತತ್ವಗುಣಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡವನು ಸಿದ್ಧಾಂತಿ.

೭. ಪರಿಕಲ್ಪನೆಗಳ ಮೂಲಕ ತತ್ವದರ್ಶನ ನೀಡುವವನು.

೮. ತತ್ವಕ್ಕೆ ಬದ್ಧನಾದವನು, ನಮ್ಮೂರಿನ ರೈತನೂ ಸಹ ಒಬ್ಬ ಸಿದ್ಧಾಂತಿ.

೧೫. **ಸೋಮಾರಿ:** ಈ ಪದ ಆಲಸ್ಯ ಗುಣವುಳ್ಳ, ಕೆಲಸಗಳನ್ನು ಮುಂದೂಡುವವರೂ ಎಂಬ ಅರ್ಥಗಳನ್ನು ಹೊಂದಿದೆ. ಆಲಸ್ಯಗುಣವುಳ್ಳ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಸಮಾನವಾಗಿ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೧೩ ಜನ ಪುರುಷವಾಚಕವಾಗಿ, ೬ ಜನ ತಟಸ್ಥವಾಗಿ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೬೮%ರಷ್ಟು ಪುರುಷವಾಚಕವಾಗಿ, ೩೧%ರಷ್ಟು ತಟಸ್ಥವಾಗಿದೆ. ಇದರ ಬಳಕೆಯ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಕೆಲಸವನ್ನು ನಾಳೆಗೆ ಮುಂದುಡುವವರು.

೨. ಪ್ರತಿ ಕೆಲಸಕ್ಕೂ ಆಲಸ್ಯತನವನ್ನು ತೋರುವವ.

೩. ಮೈಗಳ್ಳ, ಇಂದಿನ ಯುವಕರು ಸೋಮಾರಿತನವನ್ನು ಹೆಚ್ಚು ಮೈಗೂಡಿಸಿಕೊಳ್ಳುತ್ತಿದ್ದಾರೆ.

೪. ಬೇಜವಾಬ್ದಾರಿ ಮಾಡಿಕೊಳ್ಳುವವ, ಆಸಕ್ತಿ ಇಲ್ಲದವ, ಮನೋಜ್ ಓದುವಾಗ ತುಂಬಾ ಸೋಮಾರಿಯಾಗಿದ್ದಾನೆ.

೫. ಉದಾಸೀನಗಾರ ಕೆಲಸದಲ್ಲಿ ಹಿಂದೇಟು ಹಾಕುವವನು ಸೋಮಾರಿ.

೬. ಯಾವುದೇ ಒಂದು ಕೆಲಸವನ್ನು ನಿರ್ಲಕ್ಷಿಸಿ ಕಾಯಕ ನಿರ್ವಹಿಸದವನು ಸೋಮಾರಿಯಾಗಿರುತ್ತಾನೆ.

೭. ಕೆಲಸ ಮಾಡದೆ ಸಮಯ ವ್ಯರ್ಥ ಮಾಡುವವನು ಸೋಮಾರಿ.

೧೬. **ಸೈನಿಕರು:** ಈ ಪದ ದೇಶ ರಕ್ಷಣೆ ಮಾಡುವವರು ಎಂಬ ಅರ್ಥವನ್ನು ಹೊಂದಿದೆ. ಇತ್ತೀಚಿನ ದಿನಗಳವರೆಗೆ ದೇಶರಕ್ಷಣೆಯ ಕೆಲಸವನ್ನು ಪುರುಷರು ಮಾತ್ರ ನಿರ್ವಹಿಸುತ್ತಿದ್ದರು. ಈಗ ಮಹಿಳೆಯರು ದೇಶರಕ್ಷಣೆ ಕೆಲಸಕ್ಕೆ ಸೇರ್ಪಡೆಯಾಗಿದ್ದಾರೆ. ಹಾಗಾಗಿ ಸೈನಿಕ ಪದವನ್ನು ಬಹುವಚನ ರೂಪದಲ್ಲಿ ನೀಡಲಾಗಿದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಮೂರು ಜನ ಪುರುಷವಾಚಕವಾಗಿ, ೧೭ ಜನ ತಟಸ್ಥವಾಗಿ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೧೫%ರಷ್ಟು ಪುರುಷವಾಚಕವಾಗಿ, ೮೫%ರಷ್ಟು ತಟಸ್ಥವಾಗಿವೆ. ಇದರ ಬಳಕೆಯ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ರಕ್ಷಣೆಗೆ ನಿಯುಕ್ತರಾದವರು ಸೈನಿಕರು.

೨. ನಮ್ಮ ದೇಶದ ರಕ್ಷಣೆ ಮಾಡಲು ಎಷ್ಟೋ ಜನ ಸೈನಿಕರು ಪಣತೊಟ್ಟು ನಿಂತಿದ್ದಾರೆ.

೩. ದೇಶಸೇವೆಗಾಗಿ ದುಡಿಯುವವರೇ ಸೈನಿಕರು.

೪. ನಿರ್ದಿಷ್ಟ ಭೂ ಪ್ರದೇಶವನ್ನು, ವ್ಯವಸ್ಥಿತವಾಗಿ ದೇಶಕಾಯುವ ಸೇವಕರು.

೫. ಗಡಿಗಳಲ್ಲಿ ಪ್ರಕೃತಿಯ ವಿಕೋಪವನ್ನು ಸಹಿಸಿಕೊಂಡು ಹೊಟ್ಟೆಪಾಡಿಗಾಗಿ ದೇಶದ ನೆಪವೊಡ್ಡಿ ಬಡ ಜನರು ಸೈನಿಕರಾಗಿ ಕೆಲಸಕ್ಕೆ ಸೇರಿಕೊಂಡು ಹುತಾತ್ಮರಾಗುತ್ತಿದ್ದಾರೆ.

೬. ದೇಶವನ್ನು ರಕ್ಷಿಸುವರು ಸೈನಿಕರು.

೧೭. **ಹಠಮಾರಿ:** ಈ ಪದ ಛಲವುಳ್ಳ, ಆಗ್ರಹಮಾಡುವ, ಒತ್ತಾಯ ಮಾಡುವ ಎಂಬ ಅರ್ಥಗಳನ್ನು ಹೊಂದಿದೆ. ಹಠಮಾರಿತನವುಳ್ಳ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಈ ಪದ ಸಮಾನವಾಗಿ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೮ ಜನ ಪುರುಷವಾಚಕವಾಗಿ, ಇಬ್ಬರು ಸ್ತ್ರೀವಾಕಚವಾಗಿ, ೮ ಜನ ತಟಸ್ಥ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೪೪%ರಷ್ಟು ಪುರುಷವಾಚಕ, ೧೧%ರಷ್ಟು ಸ್ತ್ರೀವಾಚಕ, ೪೪%ರಷ್ಟು ತಟಸ್ಥವಾಗಿದೆ. ಇದರ ಬಳಕೆಯ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಯಾರ ಮಾತನ್ನು ಕೇಳದವನು.

೨. ಹಿಡಿದ ಕೆಲಸವನ್ನು ಮುಗಿಸುವ ತನಕ ಕೆಲಸ ಮುಂದುವರಿಸುವವರು.

೩. ಯಾವುದನ್ನು ಒಪ್ಪಿಕೊಳ್ಳದಿರುವುದು, ತನ್ನತನ ಬಿಡಲಾರದೆ ಇರುವುದು. ಹಠಮಾರಿತನ ತಾನೇ ನಾಶಮಾಡಿಕೊಳ್ಳುವ ಗುಣ.

೪. ಛಲಗಾರ ಯಾವುದೇ ಕೆಲಸವನ್ನು ಎಷ್ಟು ಕಷ್ಟಬಂದರೂ ನಿಲ್ಲಿಸದೆ ಮುಗಿಸುವವನು ಹಠಮಾರಿ.

೫. ಚೈತ್ರ ತಮ್ಮ ಮನೆಯಲ್ಲಿ ತನಗೆ ಹಣ್ಣನ್ನು ಕೊಡದೆ ಇದ್ದರೆ ಹಠಮಾರಿಯಾಗುತ್ತಾಳೆ.

೬. ಹೆಣ್ಣು ಹಠಮಾರಿಯಾಗಿರಬಹುದು.

೧೮. **ಹುಡುಗುತನ:** ಈ ಪದ ಹುಡುಗಾಟ, ಕುಚೇಷ್ಟೆ, ಮಕ್ಕಳ ಸ್ವಭಾವ ಮುಂತಾದ ಅರ್ಥಗಳನ್ನು ಹೊಂದಿದೆ. ಹುಡುಗಾಟವಾಡುವ ಸ್ತ್ರೀ ಮತ್ತು ಪುರುಷ ಇಬ್ಬರಿಗೂ ಸಮಾನವಾಗಿ ಈ ಪದ ಅನ್ವಯವಾಗುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೫ ಜನ ಪುರುಷವಾಚಕವಾಗಿ, ೧೨ ಜನ ತಟಸ್ಥ ವಾಕ್ಯರಚನೆ

ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೨೯%ರಷ್ಟು ಪುರುಷವಾಚಕವಾಗಿ, ೭೦%ರಷ್ಟು ತಟಸ್ಥವಾಗಿದೆ. ಇದರ ಬಳಕೆಯ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಕೆಲವರಿಗೆ ವಯಸ್ಸಾದರೂ ಹುಡುಗು ಬುದ್ಧಿ ಇರುತ್ತದೆ.

೨. ಕೆಲವು ಹುಡುಗರು ತುಂಬಾ ತುಂಟತನ ಅಥವಾ ಹುಡುಗಾಟಿಕೆಯನ್ನು ಮೈಗೂಡಿಸಿಕೊಂಡಿರುತ್ತಾರೆ.

೩. ಹರೆಯದ ವಯಸ್ಸಿನಲ್ಲಿ ಹುಡುಗುತನ ಸಹಜ.

೪. ಎಲ್ಲದರಲ್ಲೂ ಮುಗ್ಧತೆಯನ್ನು ಕಾಣುವವ.

೫. ಸುಮ್ಮಸುಮ್ಮನೆ ಅಕ್ಕ ಪಕ್ಕದವರನ್ನು ಛೇಡಿಸುವುದು, ಕಡಿಮೆ ಬುದ್ಧಿಯುಳ್ಳವ.

೬. ಪಕ್ವತೆ ಇಲ್ಲದವನು, ಸಣ್ಣ ಬುದ್ಧಿಯುಳ್ಳವನು.

೭. ಪ್ರತಿಯೊಬ್ಬರಿಗೂ ಹುಡುಗತನ ಇರಲೇಬೇಕು.

**೧೯. ರೈತ:** ಈ ಪದ ಕೃಷಿ ಚಟುವಟಿಕೆಯಲ್ಲಿ ತೊಡಗಿರುವವರು ಎಂಬ ಅರ್ಥವನ್ನು ಹೊಂದಿದೆ. ಕನ್ನಡ ಭಾಷಿಕ ಪರಿಸರದಲ್ಲಿ ರೈತ ಪದವು ಪುರುಷವಾಚಕವಾಗಿ ಬಳಕೆಯಲ್ಲಿದೆ. ಕೃಷಿ ಚಟುವಟಿಕೆಗಳಲ್ಲಿ ಮಹಿಳೆಯರು ಭಾಗವಹಿಸಿದರೂ ಅವರನ್ನು 'ರೈತಮಹಿಳೆ', 'ಕೃಷಿಕಳು' ಎಂಬ ಪದಗಳಿಂದ ಗುರುತಿಸಲಾಗುತ್ತಿದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೧೬ ಜನ ಪುರುಷವಾಚಕವಾಗಿ, ೩ ಜನ ತಟಸ್ಥ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೮೪%ರಷ್ಟು ಪುರುಷವಾಚಕವಾಗಿ, ೧೫%ರಷ್ಟು ತಟಸ್ಥವಾಗಿದೆ. ಇದರ ಬಳಕೆಯ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಹೊಲ ಹುಳುಮೆ ಮಾಡುವವರು

೨. ಹೊಲ ಗದ್ದೆಯಲ್ಲಿ ಪ್ರತಿದಿನವು ದುಡಿಯುವವರನ್ನು ರೈತ ಎಂದು ಕರೆಯುತ್ತೇವೆ.

೩. ರೈತನು ಈ ದೇಶದ ಬೆನ್ನೆಲುಬು ಆಗಿದ್ದಾನೆ.

೪. ನಮ್ಮ ತಂದೆ ಒಬ್ಬ ಒಳ್ಳೆಯ ಉತ್ತಮ ಬೆಳೆಯನ್ನು ಬೆಳೆದು ಒಳ್ಳೆ ರೈತನಾಗಿದ್ದಾನೆ.

೫. ಭೂಮಿಯನ್ನು ಉಳುಮೆ ಮಾಡಿ ಬೆಳೆಯನ್ನು ಬೆಳೆಯುವವನು.

೬. ದೇಶಕ್ಕೆ ಅನ್ನ ನೀಡುವವ ರೈತನಾಗಿದ್ದಾನೆ.

೭. ಜಗತ್ತಿನ ಜೀವಿಗಳಿಗೆ ಅನ್ನ ಹಾಕುವ ದೇವರು. ಎಲ್ಲರ ಉದರಗಳ ಹಕ್ಕುದಾರ.

**೨೦. ಮಾನವ:** ಈ ಪದ ಒಂದು ಜೀವ ಸಮುದಾಯವನ್ನು ಗುರುತಿಸುವ ಪದ. ಕನ್ನಡ ಭಾಷಿಕ ಸಮುದಾಯದಲ್ಲಿ ಈ ಪದ ಪುರುಷವಾಚಕವಾಗಿ ಗ್ರಹಿಕೆಯಲ್ಲಿದೆ. ಇದರ ಸ್ತ್ರೀವಾಚಕ ರೂಪಗಳಾಗಿ ಮಾನುಷಿ, ಮಾನವಿ ಈ ರೀತಿಯ ಪದಗಳನ್ನು ಕೆಲವು ಸ್ತ್ರೀವಾದಿಗಳು ರಚಿಸಿದ್ದಾರೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೭ ಜನ ಪುರುಷ ವಾಚಕವಾಗಿ, ೧೧ ಜನ ತಟಸ್ಥ ವಾಕ್ಯರಚನೆ ಮಾಡಿದ್ದಾರೆ. ಇದರ ಶೇಕಡಾವಾರು ಪ್ರಮಾಣ ೩೮%ರಷ್ಟು ಪುರುಷವಾಚಕವಾಗಿ, ೬೧%ರಷ್ಟು ತಟಸ್ಥವಾಗಿದೆ. ಇದರ ಬಳಕೆಯ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಮಾದರಿಗಳು:** ೧. ಮಾನವ ಸಂಕುಲ ನಮ್ಮ ದೇಶದ ಮತ್ತೊಂದು ಆಸ್ತಿಯಾಗಿದೆ.

೨. ಮಾನವ ಇತರೆ ಪ್ರಾಣಿಗಿಂತ ಹೆಚ್ಚು ಬುದ್ಧಿಯುಳ್ಳ ಪ್ರಾಣಿ.

೩. ಜೀವ ಜಗತ್ತಿನ ವಿಶಿಷ್ಟ ಜೀವಿ ಮಾನವ.

೪. ಜೀವಂತ ಪ್ರಾಣಿಗಳಲ್ಲಿ ಬುದ್ಧಿಶಕ್ತಿಯನ್ನು ಹೊಂದಿರುವ ಒಂದು ಪ್ರಾಣಿ. ಪ್ರಾಣಿಗಳಲ್ಲೂ ಮಾನವ ತನ್ನ ಬುದ್ಧಿವಂತಿಕೆಯಿಂದ ಶ್ರೇಷ್ಠನಾಗಿದ್ದಾನೆ.

೫. ನಾವೆಲ್ಲರೂ ಮಾನವರಾಗೋಣ, ಮನುಷ್ಯತ್ವ ರೂಢಿಸಿಕೊಳ್ಳೋಣ.

೬. ಮಾನವ ಬುದ್ಧಿಜೀವಿಯಾಗಿದ್ದಾನೆ.

೭. ಸಂಘಟನೆಗಳ ಮೂಲಕ ಗುರ್ತಿಸಿಕೊಳ್ಳುವ ಮಾನವೀಯತೆ ಮೆರೆಯುವಂತಹ ಜೀವಿ.

ಒಟ್ಟಾರೆ ಈ ಅಧ್ಯಯನದ ಮುಖಾಂತರ ಗುರುತಿಸಲ್ಪಟ್ಟಿರುವ ಹೆಚ್ಚು ಪುರುಷವಾಚಕವಾಗಿ ಬಳಕೆಯಾಗಿರುವ ಪದಗಳು, ಹೆಚ್ಚು ಸ್ತ್ರೀವಾಚಕಗಳಾಗಿ ಬಳಕೆಯಾಗಿರುವ ಪದಗಳು ಹಾಗೂ ಹೆಚ್ಚು ತಟಸ್ಥವಾಗಿ ಬಳಕೆಯಾಗಿರುವ ಪದಗಳು ಈ ಮುಂದಿನಂತಿವೆ.

| ಕ್ರ ಸಂ | ಹೆಚ್ಚು ತಟಸ್ಥವಾಗಿ ಬಳಕೆಯಾದ ಪದಗಳು | ಹೆಚ್ಚು ಪುರುಷವಾಚಕವಾಗಿ ಬಳಕೆಯಾದ ಪದಗಳು | ಹೆಚ್ಚು ಸ್ತ್ರೀವಾಚಕವಾಗಿ ಬಳಕೆಯಾದ ಪದಗಳು |
|---|---|---|---|
| ೦೧ | ಪೌರಕಾರ್ಮಿಕರು | ಸಾಹಿತಿ | ರೂಪದರ್ಶಿ |
| ೦೨ | ಅರ್ಜಿದಾರರು | ಚೇರ್‌ಮನ್ | ನರ್ಸ್ |
| ೦೩ | ಗಗನಯಾತ್ರಿ | ಕನ್ನಡಕಧಾರಿ | ಬಾಯಾಳಿ |
| ೦೪ | ಕುಲಪತಿ | ಸಿದ್ಧಾಂತಿ | |
| ೦೫ | ಗಣ್ಯಮಾನ್ಯ | ಸೋಮಾರಿ | |
| ೦೬ | ಗ್ರಾಮವಾಸಿ | ಹಠಮಾರಿ | |
| ೦೭ | ಟೀಚರ್ | ರೈತ | |
| ೦೮ | ಸೈನಿಕರು | | |
| ೦೯ | ಹಠಮಾರಿ | | |
| ೧೦ | ಹುಡುಗುತನ | | |
| ೧೧ | ಮಾನವ | | |

ಈ ಅಧ್ಯಯನದಲ್ಲಿ ತಟಸ್ಥ ಅರ್ಥವಿದ್ದರೂ ಸಾಮಾಜಿಕವಾಗಿ ಹೆಚ್ಚು ಸ್ತ್ರೀವಾಚಕವೆಂದು ಗ್ರಹಿಕೆಯಲ್ಲಿರುವ ನಾಲ್ಕು ಪದಗಳನ್ನು ನೀಡಲಾಗಿತ್ತು. ಅವುಗಳೆಂದರೆ, ರೂಪದರ್ಶಿ, ನರ್ಸ್, ಬಾಯಾಳಿ, ಟೀಚರ್. ಈ ನಾಲ್ಕು ಪದಗಳಲ್ಲಿ ಟೀಚರ್ ಪದ ತಟಸ್ಥ ಅರ್ಥದಲ್ಲಿ ಹೆಚ್ಚು ಬಳಕೆಯಾಗುವುದು ಕಂಡು ಬಂದಿದೆ. ಅಧ್ಯಯನಕ್ಕೆ ಒಳಪಟ್ಟ ವರ್ಗ ವಿದ್ಯಾವಂತರಾಗಿರುವುದರಿಂದ, ಟೀಚರ್ ಪದದ ಸರಿಯಾದ ಅರ್ಥಗ್ರಹಿಕೆ ಅವರಿಗಿರುವುದರಿಂದ, ಈ ರೀತಿಯ ಫಲಿತಾಂಶ ಬಂದಿದೆ. ತಟಸ್ಥ ಅರ್ಥವಿರುವ ಈ ಪದ ತಟಸ್ಥ ಅರ್ಥದಲ್ಲೇ ಹೆಚ್ಚು ಬಳಕೆಯಾಗಿದೆ. ಇಂದು ಪುರುಷರಿಗೂ ಸೌಂದರ್ಯ ಸ್ಪರ್ಧೆಗಳಿವೆ. ಅಲ್ಲಿ ಅವರು ಕೂಡ ತಮ್ಮ ರೂಪವನ್ನು ಪ್ರದರ್ಶಿಸುತ್ತಾರೆ. ರೂಪದರ್ಶಿ ಪದ ಪುರುಷರಿಗೂ ಮಾಧ್ಯಮಗಳಲ್ಲಿ ಬಳಕೆಯಾಗುತ್ತಿದೆ. ಆದರೂ ಈ ಅಧ್ಯಯನದಲ್ಲಿ ಹೆಚ್ಚು ಜನ ಇದನ್ನು ಸ್ತ್ರೀವಾಚಕವಾಗಿಯೇ ಬಳಸಿದ್ದಾರೆ.

'ನರ್ಸ್' ಪದ ಮೂಲತಃ ತಟಸ್ಥ ಅರ್ಥವನ್ನು ಹೊಂದಿದ್ದರೂ ಮೇಲ್ ನರ್ಸ್(Male Nurse) ಎಂಬ ಪದ ಪುರುಷರನ್ನು ಗುರುತಿಸಲು ಇಂಗ್ಲಿಷ್‌ನಲ್ಲಿ ಬಳಕೆಯಲ್ಲಿದೆ. ಈ ಅಧ್ಯಯನದಲ್ಲಿ ನರ್ಸ್ ಪದವು ಹೆಚ್ಚು ಸ್ತ್ರೀವಾಚಕವಾಗಿ ಬಳಕೆಯಾಗಿದೆ. ಹೆಂಗಸರು ಹೆಚ್ಚು ಮಾತನಾಡುತ್ತಾರೆ ಎಂಬ ನಿಲುವು ಸಮಾಜದಲ್ಲಿರುವುದರಿಂದ ಬಾಯಾಳಿ ಪದವನ್ನು ಸ್ತ್ರೀವಾಚಕವಾಗಿಯೇ ಇಲ್ಲಿಯೂ ಹೆಚ್ಚು ಬಳಕೆಯಾಗಿದೆ. ಸಮುದಾಯದ ಕೆಲವು ನಿಲುವುಗಳು ಅಪ್ರಜ್ಞಾಪೂರ್ವಕವಾಗಿ ಅರ್ಥವನ್ನು ನಿಯತ್ರಿಸುತ್ತಿರುತ್ತದೆ ಎಂಬುದಕ್ಕೆ ಇದು ಉದಾಹರಣೆಯಾಗಿದೆ. ಮಹಿಳೆಯರು ಸಾಹಿತ್ಯ ರಚಿಸುತ್ತಾರೆ ಮತ್ತು ಸಿದ್ಧಾಂತಗಳನ್ನು ರೂಪಿಸುತ್ತರಾದರೂ ಈ ಅಧ್ಯಯನದಲ್ಲಿ ಈ ಪದಗಳು ಹೆಚ್ಚು ಪುರುಷವಾಚಕವಾಗಿಯೇ ಬಳಕೆಯಾಗಿವೆ.

ಈ ಅಧ್ಯಯನದಲ್ಲಿ ಹಠಮಾರಿ ಪದವನ್ನು ಅದರ ವಿವಿಧ ಅರ್ಥಗಳ ಹಿನ್ನೆಲೆಯಲ್ಲಿ ಮೂರು ನೆಲೆಯಲ್ಲಿ ಬಳಸಿರುವುದು ಕಂಡುಬಂದಿದೆ. ಹಠಮಾರಿ ಪದಕ್ಕೆ ಮೂರು ರೀತಿಯ ಅರ್ಥಗಳಿವೆ. ಅವುಗಳೆಂದರೆ:

೧. ಛಲವುಳ್ಳ – ಯಾವುದೇ ಕೆಲಸವನ್ನು ಎಷ್ಟೇ ಕಷ್ಟಬಂದರೂ ನಿಲ್ಲಿಸದೆ ಮುಗಿಸುವವನು ಹಠಮಾರಿ – ಪುರುಷ.
೨. ಒತ್ತಾಯಮಾಡುವ – ಚೈತ್ರ ನಮ್ಮ ಮನೆಯಲ್ಲಿ ತನಗೆ ಹಣ್ಣನ್ನು ಕೊಡದೆ ಇದ್ದರೆ ಹಠಮಾರಿಯಾಗುತ್ತಾಳೆ – ಮಕ್ಕಳಿಗೆ.
೩. ಆಗ್ರಹಮಾಡುವ – ಹೆಣ್ಣು ಹಠಮಾರಿಯಾಗಿರಬಾರದು – ಹೆಣ್ಣಿಗೆ.

ಛಲವುಳ್ಳ ಎಂಬ ಅರ್ಥದ ನೆಲೆಯಲ್ಲಿ ಪುರುಷವಾಚಕಗಳನ್ನು ಬಳಸಿ ವಾಕ್ಯರಚಿಸಲಾಗಿದೆ. ಒತ್ತಾಯಮಾಡುವ ಎಂಬ ಅರ್ಥದ ನೆಲೆಯಲ್ಲಿ ಮಕ್ಕಳನ್ನು ಕುರಿತು ವಾಕ್ಯರಚಿಸಲಾಗಿದೆ. ಹೆಣ್ಣು ಆಗ್ರಹಮಾಡಬಾರದು ಎಂಬ ನೆಲೆಯಲ್ಲಿ ಹಠಮಾರಿ ಪದವನ್ನು ಬಳಸಿ ವಾಕ್ಯ ರಚನೆ ಮಾಡಿರುವುದು ಕಂಡುಬಂದಿದೆ.

ಈ ಅಧ್ಯಯನದಲ್ಲಿ ಮಾನವ ಎಂಬ ಪದ ತಟಸ್ಥ ಅರ್ಥದಲ್ಲಿ ಹೆಚ್ಚು ಬಳಕೆಯಾಗಿರುವುದು ಬಹಳ ಮುಖ್ಯವಾದ ಅಂಶ. ಮಾನವ ಪದ ಕನ್ನಡ ಭಾಷಿಕರಲ್ಲಿ ಪುರುಷವಾಚಕವಾಗಿ ಗ್ರಹಿಕೆಯಲ್ಲಿದೆ. ಇಡೀ ಸಮುದಾಯವನ್ನು ಸೂಚಿಸುವ ಪದಗಳು ಕೇವಲ ಪುರುಷವಾಚಕವಾಗಿ ಸೃಷ್ಟಿಯಾಗುತ್ತವೆಯೇ? ಎಂಬ ಪ್ರಶ್ನೆ ಇಲ್ಲಿ ಎದುರಾಗುತ್ತದೆ. ಇದಕ್ಕೆ ಕಾರಣವನ್ನು ಪರಿಶೀಲಿಸುವುದಾದರೆ, ಕನ್ನಡ ಭಾಷೆಯಲ್ಲಿ ಕೆಲವು ಸಂದರ್ಭಗಳಲ್ಲಿ 'ಅ' ಪ್ರತ್ಯಯವು ಪುರುಷವಾಚಕ ಪ್ರತ್ಯಯವಾಗಿ ಕಾರ್ಯನಿರ್ವಹಿಸುತ್ತದೆ. ಉದಾಹರಣೆಗೆ: ಕಾರ್ಮಿಕ, ಸಚಿವ, ರಾಜ್ಯಪಾಲ, ಅಧ್ಯಕ್ಷ ಮುಂತಾದವು. ಮಾನವ ಪದ 'ಅ' ಕಾರಾಂತವಾಗಿರುವುದರಿಂದ ಪುರುಷವಾಚಕವಾಗಿ ಗ್ರಹಿಕೆಗೆ ಬಂದಿರಬಹುದಾದ ಒಂದು ಸಾಧ್ಯತೆಯನ್ನು ಗುರುತಿಸಬಹುದು.

ಮಾನವ ಪದವು ಎಲ್ಲ ಸಂದರ್ಭಗಳಲ್ಲೂ ಪುರುಷವಾಚಕವಾಗಿ ಕಾರ್ಯನಿರ್ವಹಿಸುವುದಿಲ್ಲ. ಇದನ್ನು ಕೆಲವು ಉದಾಹರಣೆಗಳ ಮೂಲಕ ಪರಿಶೀಲಿಸಬಹುದು:

ಉದಾ: ೧. ಮಾನವ ಸಂಘ ಜೀವಿ, ಅವನು ಇತರೆ ಪ್ರಾಣಿಗಳಿಗಿಂತ ಬುದ್ಧಿವಂತ ಜೀವಿ.

೨. ಜೀವ ಜಗತ್ತಿನ ವಿಶಿಷ್ಟ ಜೀವಿ ಮಾನವ.

೩. ಮಾನವ ಇತರೆ ಪ್ರಾಣಿಗಳಿಗಿಂತ ಹೆಚ್ಚು ಬುದ್ಧಿಯುಳ್ಳ ಪ್ರಾಣಿ.

ಉದಾಹರಣೆ ಒಂದರಲ್ಲಿ 'ಅವನು' ಎಂಬ ಸರ್ವನಾಮದಿಂದ ಮಾನವ ಎಂಬ ಪದವು ಪುರುಷವಾಚಕವಾಗಿ ಗ್ರಹಿಕೆಗೆ ಬರುತ್ತದೆ. ಉದಾಹರಣೆ ಎರಡು ಮತ್ತು ಮೂರರಲ್ಲಿ ಮಾನವ ಪದವು ಒಂದು ಜೀವ ಸಮುದಾಯವನ್ನು ಸೂಚಿಸುತ್ತಿರುವ ಪದವಾಗಿ ಮಾತ್ರ ಬಳಕೆಯಾಗಿದೆ. ಹಾಗಾಗಿ ಮಾನವ ಪದವು ಎಲ್ಲ ಸಂದರ್ಭದಲ್ಲೂ ಪುರುಷವಾಚಕವಾಗಿ ಬಳಕೆಯಾಗುವುದಿಲ್ಲ.

ಈ ಅಧ್ಯಯನಕ್ಕೆ ನೀಡಿದ ಒಟ್ಟು ೨೦ ಪದಗಳಲ್ಲಿ ೧೧ ಪದಗಳು ಹೆಚ್ಚು ತಟಸ್ಥ ಅರ್ಥದಲ್ಲಿ ವಾಕ್ಯರಚನೆಯಾಗಿರುವುದನ್ನು ಗಮನಿಸಬಹುದು. ಕೆಲವು ಪದಗಳು ಪುರುಷವಾಚಕಗಳಾಗಿ ಬಳಕೆಯಾಗಿಲ್ಲ. ಕೆಲವು ಪದಗಳು ಸ್ತ್ರೀವಾಚಕಗಳಾಗಿ ಬಳಕೆಯಾಗಿಲ್ಲ. ಆದರೆ, ಎಲ್ಲ ತಟಸ್ಥ ಪದಗಳೂ ತಟಸ್ಥ ಅರ್ಥದಲ್ಲಿ ಬಳಕೆಯಾಗಿರುವುದು ಕಂಡು ಬಂದಿದೆ. ಕೆಲವು ಪದಗಳ ತಟಸ್ಥ ಬಳಕೆಯ ಸಂಖ್ಯೆ ಕಡಿಮೆ ಇದ್ದರೂ ಎಲ್ಲ ಪದಗಳ ತಟಸ್ಥ ಬಳಕೆಯ ಮಾದರಿಗಳಿವೆ. ಸಮುದಾಯದ ಅನೇಕ ನಂಬಿಕೆಗಳು, ಗ್ರಹಿಕೆಗಳು ಕೆಲವು ಪದಗಳನ್ನು ಪುರುಷವಾಚಕವಾಗಿ ಮಾತ್ರ ಬಳಕೆ ಮಾಡುವಂತೆ, ಕೆಲವು ಪದಗಳನ್ನು ಸ್ತ್ರೀವಾಚಕಗಳಾಗಿ ಮಾತ್ರ ಬಳಕೆಮಾಡುವಂತೆ ನಿಯಂತ್ರಿಸುತ್ತಿರುತ್ತವೆ. ಕಾಲಬದಲಾದಂತೆ ಸಮುದಾಯದ ಕೆಲವು ಗ್ರಹಿಕೆಗಳು ಬದಲಾಗುತ್ತಿರುತ್ತವೆ. ಈ ಅಧ್ಯಯನದಲ್ಲಿ ಪದಗಳಿಗಿರುವ ಸಾಮಾಜಿಕ ಗ್ರಹಿಕೆಗಳನ್ನು ಮೀರಿ ಅವುಗಳನ್ನು ಬಳಕೆ ಮಾಡಿರುವುದು ಕಂಡುಬಂದಿದೆ.

**೫.೩. ಬರಹಗಳಲ್ಲಿನ ಲಿಂಗಭಿನ್ನತೆ ಗುರುತಿಸಲು ಹೇಳಿರುವುದು**

ಸಾಮಾಜಿಕ ಸಂದರ್ಭಗಳಲ್ಲಿ ಬಳಕೆಯಾಗುವ ಗಂಡು ಮತ್ತು ಹೆಣ್ಣಿನ ಮಾತುಕತೆಯಲ್ಲಿನ ಭಿನ್ನತೆಗಳನ್ನು ಗುರುತಿಸುವುದು ಒಂದು ಮಾದರಿಯಾದರೆ, ಗಂಡಿನ ಬರಹ ಮತ್ತು ಹೆಣ್ಣಿನ ಬರಹದಲ್ಲಿನ ಭಾಷಾ ಶೈಲಿಯಲ್ಲಿಯೂ ಭಿನ್ನತೆಗಳಿವೆ ಎಂಬುದನ್ನು ಗುರುತಿಸಲು ಪ್ರಯತ್ನಿಸಿದ್ದು ಮತ್ತೊಂದು ಮಾದರಿ. ಮೇರಿ ಹೇಯ್ಸ್ ಎಂಬ ಪಾಶ್ಚಾತ್ಯ ಚಿಂತಕಿ ೧೯೭೭ರಲ್ಲಿ ಬರಹದ ಭಾಷೆಯನ್ನು ಪರಿಶೀಲಿಸಿ ಗಂಡಸರ ಬರವಣಿಗೆಗಿಂತ ಹೆಂಗಸರ ಬರವಣಿಗೆ ಭಿನ್ನವಾಗಲು ಅವರವರು ಬಳಸುವ ಭಾಷಾಂಶಗಳ ವ್ಯಾಪಕತೆಯಲ್ಲಿ ಇರುವ ವ್ಯತ್ಯಾಸವೇ ಕಾರಣ ಎಂಬ ಪ್ರಮೇಯವನ್ನು ರೂಪಿಸುತ್ತಾಳೆ. ಇವರು ಗಂಡಿನ ಬರಹ ಮತ್ತು ಹೆಣ್ಣಿನ ಬರಹಗಳಿಗೆ ಇರುವ ಕೆಲವು ಲಕ್ಷಣಗಳನ್ನು ಗುರುತಿಸುತ್ತಾರೆ. ಅವುಗಳೆಂದರೆ:

| ಗಂಡಿನ ಬರಹ | | ಹೆಣ್ಣಿನ ಬರಹ |
|---|---|---|
| ೧. ಚಿಕ್ಕ ವಾಕ್ಯಗಳು | – | ವಿವರಣ ವಾಕ್ಯಗಳು |
| ೨. ಅಧಿಕಾರಯುತ ನೆಲೆಯಲ್ಲಿರುತ್ತವೆ | – | ಭಾವುಕ ನೆಲೆಯಲ್ಲಿರುತ್ತವೆ |
| ೩. ಹೆಚ್ಚು ಔಪಚಾರಿಕ ಮಾದರಿಗಳನ್ನು ಅನುಸರಿಸುತ್ತಾರೆ. | – | ಅನೌಪಚಾರಿಕ ನೆಲೆ |

೪. ಉದ್ಗಾರ ವಾಚಕಗಳ ಬಳಕೆ ಇಲ್ಲ – ಉದ್ಗಾರ ವಾಚಕಗಳ ಬಳಕೆ ಹೆಚ್ಚು
೫. ನಿರ್ಧಾರಾತ್ಮಕವಾಗಿರುತ್ತವೆ – ನಿರೂಪಣಾ ಮಾದರಿಯಲ್ಲಿರುತ್ತವೆ
ಮುಂತಾದವುಗಳು.

ಮೇಲಿನ ವಿಂಗಡಣೆಗಳನ್ನು ಗಮನಿಸಿದರೆ, ಇಲ್ಲಿ ಬರಹಗಳ ವಿಂಗಡಣೆಗೆ ಅನುಸರಿಸಿರುವ ಮಾನದಂಡಗಳು ಈ ಮುಂದಿನಂತಿವೆ.

೧. ಗಂಡಿನ ಬರಹದ ಮಾದರಿಗಿಂತ ಹೆಣ್ಣಿನ ಬರಹದ ಮಾದರಿಯನ್ನು ಸಂಪೂರ್ಣ ವಿರುದ್ಧ ನೆಲೆಯಲ್ಲಿ ಗುರುತಿಸಿರುವುದು.

೨. ಯಾವುದು ಗಂಡಿನ ಬರಹದ ಶೈಲಿ ಅಲ್ಲವೋ ಅದನ್ನು ಹೆಣ್ಣಿನ ಬರಹದ ಶೈಲಿ ಎನ್ನುವುದು.

೩. ಸಾಮಾಜಿಕವಾಗಿ ಗಂಡು ಹೆಣ್ಣಿನ ಭಾಷಾ ಬಳಕೆಯ ಶೈಲಿಯಲ್ಲಿ ಇದೆ ಎನ್ನಲಾಗುತ್ತಿರುವ ಭಿನ್ನತೆಗಳನ್ನು ಬರಹದ ಭಾಷೆಗೂ ಅನ್ವಯಿಸಿ ಹೇಳುತ್ತಿರುವುದು.

ಎಷ್ಟೋ ಶತಮಾನಗಳ ಕಾಲ ಹೆಣ್ಣಿಗೆ ಗಂಡಿಗೆ ಇದ್ದ ಸ್ವಾತಂತ್ರ್ಯಗಳು ಇರಲಿಲ್ಲ. ಅದರಲ್ಲಿ ವಿದ್ಯಾಭ್ಯಾಸ, ಬರಹ ಮುಂತಾದವುಗಳು ಸೇರುತ್ತವೆ. ಇಂತಹ ಅವಕಾಶಗಳು ಅವಳಿಗೆ ಸಿಗಲು ಪ್ರಾರಂಭವಾದಾಗ, ಈಗಾಗಲೇ ಇದ್ದ ಬರಹದ ಶೈಲಿಗಳಿಗೆ ಅವಳು ಹೊಂದಿಕೊಳ್ಳಲು ಕಾಲಾವಕಾಶ ತೆಗೆದುಕೊಂಡಳು. ಇದು ಗಂಡು ಮತ್ತು ಹೆಣ್ಣಿನ ವಿಷಯಕ್ಕೆ ಮಾತ್ರ ಅನ್ವಯವಾಗುವುದಿಲ್ಲ. ಯಾವುದೇ ಹೊಸವಿಷಯಕ್ಕೆ ಯಾರೇ ಮೊದಲು ತೆರೆದುಕೊಳ್ಳಲು ಪ್ರಯತ್ನಿಸಿದಾಗ ಪ್ರಾರಂಭಿಕ ಹಂತದಲ್ಲಿ ಕೆಲವು ವ್ಯತ್ಯಾಸಗಳುಂಟಾಗುತ್ತವೆ.

ಹೆಣ್ಣು ಮೊದಲು ಬರವಣಿಗೆಯನ್ನು ಪ್ರಾರಂಭಿಸಿದಾಗ ತನ್ನ ಕೆಲವು ವಿಶಿಷ್ಟ ಅನುಭವಗಳನ್ನು ಹೇಳಿಕೊಳ್ಳಲು ಪ್ರಾರಂಭಿಸಿದಳು. ಅವುಗಳೆಂದರೆ, ಮುಟ್ಟು, ತಾಯ್ತನ, ಕುಟುಂಬ ನಿರ್ವಹಣೆ, ಹಾಲುಣಿಸುವಿಕೆ. ಈ ರೀತಿಯ ತನ್ನ ಕೆಲವು ವಿಶಿಷ್ಟ ಅನುಭವಗಳನ್ನು ದಾಖಲಿಸುವಲ್ಲಿ ಅವಳು ಭಾವುಕ ನೆಲೆಗೆ ಸರಿಯುವುದು ಸಹಜ. ಇದು ಅವಳ ಬರವಣಿಗೆಯ ಒಂದು ಮಾದರಿಯಾದರೆ, ಸಾಮಾಜಿಕವಾಗಿ ತಾನು ಅನುಭವಿಸಿದ ಲಿಂಗತಾರತಮ್ಯವನ್ನು ವಿವರಿಸುವುದು, ಅದರ ವಿರುದ್ಧ ಧ್ವನಿ ಎತ್ತುವುದು ಮತ್ತೊಂದು ಮಾದರಿಯಾಯಿತು. ಪುರುಷನಿಗೆ ಈ ರೀತಿಯ ಅಂಶಗಳನ್ನು ವಿವರಿಸುವ ಅನಿವಾರ್ಯತೆ ಹಾಗೂ ಸಾಮಾಜಿಕ ಒತ್ತಡಗಳಿಲ್ಲದ ಕಾರಣ ಗಂಡು ಮತ್ತು ಹೆಣ್ಣಿನ ಅನುಭವಗಳನ್ನು ದಾಖಲಿಸುವ ಹಿನ್ನೆಲೆಯಲ್ಲಿ ಅವರ ಬರಹದ ಶೈಲಿಯನ್ನು ವಿಂಗಡಿಸುವ ಪರಿಪಾಠ ಪ್ರಾರಂಭವಾಯಿತು.

ಈ ಹಿನ್ನೆಲೆಯಲ್ಲಿ ಗಂಡು ಮತ್ತು ಹೆಣ್ಣಿನ ಬರಹದ ಭಾಷೆಯಲ್ಲಿನ ಭಿನ್ನತೆಯನ್ನು ಗುರುತಿಸಲು ಪ್ರಾಯೋಗಿಕ ಅಧ್ಯಯನವನ್ನು ಮಾಡಲಾಯಿತು. ಒಟ್ಟು ೨೦ ವಿದ್ಯಾರ್ಥಿಗಳಿಗೆ ೭ ರೀತಿಯ ಬರಹಗಳನ್ನು ನೀಡಿ ಇದರಲ್ಲಿ ಗಂಡಿನ ಬರಹ ಯಾವುದು, ಹೆಣ್ಣಿನ ಬರಹ ಯಾವುದೆಂದು ಗುರುತಿಸಲು ಸಾಧ್ಯವಾದರೆ ಗುರುತಿಸಿ ಹಾಗೂ ಹಾಗೆ ಗುರುತಿಸಲು ನಿಮಗೆ ಅನಿಸಿದ ಕಾರಣಗಳನ್ನು ದಾಖಲಿಸಿ ಎಂದು ಹೇಳಲಾಯಿತು. ಗಂಡಿನ ಬರಹ ಮತ್ತು ಹೆಣ್ಣಿನ ಬರಹವೆಂದು ಗುರುತಿಸಲು ಸಾಧ್ಯವಾಗಲಿಲ್ಲವೆಂದರೆ ಅದನ್ನೂ ದಾಖಲಿಸಿ

ಎಂದು ಹೇಳಲಾಯಿತು. ಈ ಅಧ್ಯಯನಕ್ಕೆ ೭ ರೀತಿಯ ಬರಹಗಳನ್ನು ಆಯ್ಕೆ ಮಾಡಲಾಯಿತು. ಅವುಗಳನ್ನು ಆಯ್ಕೆ ಮಾಡಲು ಅನುಸರಿಸಿದ ನಿಯಮಗಳು ಈ ಮುಂದಿನಂತಿವೆ.

೧. ವೇಶ್ಯೆಯ ಜೀವನವನ್ನು ಅನಾವರಣ ಮಾಡುವ ಪುರುಷನ ಬರವಣಿಗೆ: ಕಾದಂಬರಿ – ಕೆಂಗುಲಾಬಿ, ಲೇಖಕರು – ಹನುಮಂತ ಹಾಲಿಗೇರಿ, ೨೦೧೧.

೨. ರಾಷ್ಟ್ರದ ಆರ್ಥಿಕತೆಯನ್ನು ಕುರಿತು ಮಹಿಳೆ ಬರೆದಿರುವ 'ಘಾನಾದಲ್ಲಿ ಹೂಡಿಕೆ' ಎಂಬ ಲೇಖನ: ಲೇಖಕರು – ಸಿ.ಜಿ ಮಂಜುಳ, ಜೂನ್ ೧೪, ೨೦೧೬ರಂದು ಪ್ರಜಾವಾಣಿ ಪತ್ರಿಕೆಯಲ್ಲಿ ಪ್ರಕಟವಾದ ಅಂಕಣ ಬರಹ.

೩. ಕೃಷಿಗೆ ಸಂಬಂಧಿಸಿದ ಹೊಸಯಂತ್ರದ ಆವಿಷ್ಕಾರಕ್ಕೆ ಸಂಬಂಧಿಸಿದ ಮಹಿಳೆ ಬರೆದ ಲೇಖನ: ಲೇಖಕರು – ಕವಿತಾ ಆರ್., ಪ್ರಜಾವಾಣಿ ಆವಿಷ್ಕಾರ ಕಾಲಂನಲ್ಲಿ ಪ್ರಕಟವಾದ ಬರಹ.

೪. ಪುರುಷನ ಆಂತರಿಕ ತುಮುಲಗಳು, ಗೊಂದಲಗಳನ್ನು ಅಭಿವ್ಯಕ್ತಿಸುವ ಮಹಿಳೆ ಬರೆದ ಬರವಣಿಗೆ: ಕಾದಂಬರಿ – ಕ್ಷೀರೋಧಜೆ, ಲೇಖಕರು – ಮಹಾಲಕ್ಷ್ಮಿ, ೧೯೮೪.

೫. ಸ್ತ್ರೀವಾದದ ಧೋರಣೆಗಳನ್ನು ಒಳಗೊಂಡಿರುವ ಪುರುಷನ ಬರವಣಿಗೆ: ಕೃತಿ – ಲಿಂಗಸಂಬಂಧಗಳು ಮತ್ತು ಅಭಿವೃದ್ಧಿ, ಲೇಖಕರು–ಟಿ.ಆರ್. ಚಂದ್ರಶೇಖರ್, ೨೦೧೦.

೬. ಮಕ್ಕಳ ನಾಟಕ ಸಾಹಿತ್ಯವನ್ನು ಕುರಿತ ಮಹಿಳೆಯ ಬರವಣಿಗೆ: ಆತ್ಮಕಥೆ – ಸೋಲಿಸಬೇಡ ಗೆಲಿಸಯ್ಯ, ಲೇಖಕರು – ಪ್ರೇಮಕಾರಂತ, ೨೦೧೦.

೭. ಪ್ರಾಚೀನ ಭಾರತದ ಇತಿಹಾಸಕ್ಕೆ ಸಂಬಂಧಿಸಿದ ಮಹಿಳೆಯ ಬರವಣಿಗೆ: ಕೃತಿ–ಪ್ರಾಚೀನ ಭಾರತದ ಇತಿಹಾಸ, ಲೇಖಕರು – ಅರ್ಚನ ಎಂ.ಎಸ್.

ಮೇಲಿನ ಈ ಏಳು ಬರವಣಿಗೆಯನ್ನು ಪುರುಷನ ಬರವಣಿಗೆ ಎಂದು, ಮಹಿಳಾ ಬರವಣಿಗೆ ಎಂದು ಹಾಗೂ ಯಾರ ಬರವಣಿಗೆ ಎಂದು ಗುರುತಿಸಲಾಗದವುಗಳ ಸಂಖ್ಯೆಗಳನ್ನು ಈ ಮುಂದಿನ ಪಟ್ಟಿಯಲ್ಲಿ ನೀಡಲಾಗಿದೆ. ಪಟ್ಟಿ ೧ರಲ್ಲಿ ಸಂಖ್ಯೆಗಳನ್ನು, ಪಟ್ಟಿ ೨ರಲ್ಲಿ ಅವುಗಳ ಒಟ್ಟಾರೆ ಶೇಕಡಾವಾರು ಪ್ರಮಾಣವನ್ನು ನೀಡಲಾಗಿದೆ.

**ಪಟ್ಟಿ ೧: ಸಂಖ್ಯೆಗಳಲ್ಲಿ**

| ಕ್ರ ಸಂ | ನೀಡಲಾದ ಬರಹಗಳ ವಿವರ | ಪುರುಷನ ಬರಹವೆಂದು ಗುರುತಿಸಿದವರು | ಮಹಿಳೆಯ ಬರಹವೆಂದು ಗುರುತಿಸಿದವರು | ಯಾರ ಬರಹವೆಂದು ಗುರುತಿಸಲು ಆಗದಿರುವವರು |
|---|---|---|---|---|
| ೦೧ | ಹನುಮಂತ ಹಾಲಿಗೇರಿಯವರ ಕೆಂಗುಲಾಬಿ ಕಾದಂಬರಿ | ೫ | ೧೫ | ೦ |
| ೦೨ | ಸಿ.ಜಿ. ಮಂಜುಳ ಅವರ ಘಾನಾದಲ್ಲಿ ಹೂಡಿಕೆ | ೧೪ | ೨ | ೪ |
| ೦೩ | ಕವಿತ ಆರ್., ಅವರ ಆವಿಷ್ಕಾರ | ೧೩ | ೩ | ೪ |
| ೦೪ | ಮಹಾಲಕ್ಷ್ಮಿ ಅವರ ಕ್ಷೀರೋಧಜೆ ಕಾದಂಬರಿ | ೧೭ | ೩ | ೦ |
| ೦೫ | ಟಿ.ಆರ್. ಚಂದ್ರಶೇಖರ್ ಅವರ ಲಿಂಗ ಸಂಬಂಧಗಳು ಮತ್ತು ಅಭಿವೃದ್ಧಿ | ೨ | ೧೭ | ೧ |
| ೦೬ | ಪ್ರೇಮಕಾರಂತರ ಸೋಲಿಸಬೇಡ ಗೆಲಿಸಯ್ಯ ಆತ್ಮಕಥನ | ೫ | ೧೩ | ೨ |
| ೦೭ | ಅರ್ಚನ ಎಂ.ಎಸ್. ಅವರ ಪ್ರಾಚೀನ ಭಾರತದ ಇತಿಹಾಸ | ೧೮ | ೦ | ೨ |

**ಪಟ್ಟಿ–೨ ಶೇಕಡಾವಾರು**

| ಕ್ರ ಸಂ | ನೀಡಲಾದ ಬರಹಗಳ ವಿವರ | ಪುರುಷನ ಬರಹವೆಂದು ಗುರುತಿಸಿದವರು | ಮಹಿಳೆಯ ಬರಹವೆಂದು ಗುರುತಿಸಿದವರು | ಯಾರ ಬರಹವೆಂದು ಗುರುತಿಸಲು ಆಗದಿರುವವರು |
|---|---|---|---|---|
| ೦೧ | ಹನುಮಂತ ಹಾಲಿಗೇರಿಯವರ ಕೆಂಗುಲಾಬಿ ಕಾದಂಬರಿ | ೨೫% | ೭೫% | ೦% |
| ೦೨ | ಸಿ.ಜಿ. ಮಂಜುಳ ಅವರ ಘಾನಾದಲ್ಲಿ ಹೂಡಿಕೆ | ೭೦% | ೧೦% | ೨೦% |
| ೦೩ | ಕವಿತ ಆರ್., ಅವರ ಆವಿಷ್ಕಾರ | ೬೫% | ೧೫% | ೨೦% |
| ೦೪ | ಮಹಾಲಕ್ಷ್ಮಿ ಅವರ ಕ್ಷಿರೋಧಜೆ ಕಾದಂಬರಿ | ೮೫% | ೧೫% | ೦% |
| ೦೫ | ಟಿ.ಆರ್. ಚಂದ್ರಶೇಖರ್ ಅವರ ಲಿಂಗ ಸಂಬಂಧಗಳು ಮತ್ತು ಅಭಿವೃದ್ಧಿ | ೧೦% | ೮೫% | ೫% |
| ೦೬ | ಪ್ರೇಮಕಾರಂತರ ಸೋಲಿಸಬೇಡ ಗೆಲಿಸಯ್ಯ ಆತ್ಮಕಥನ | ೨೫% | ೬೫% | ೧೦% |
| ೦೭ | ಅರ್ಚನ ಎಂ.ಎಸ್. ಅವರ ಪ್ರಾಚೀನ ಭಾರತದ ಇತಿಹಾಸ | ೯೦% | ೦% | ೧೦% |

೧. **ಬರಹ ಒಂದು:** ಈ ಬರಹ ಹನುಮಂತ ಹಾಲಿಗೇರಿ ಬರೆದಿರುವ ಕೆಂಗುಲಾಬಿ ಎಂಬ ಕಾದಂಬರಿಯ ಕೆಲವು ಆಯ್ದ ಭಾಗಗಳು. ಇದು ಒಬ್ಬ ವೇಶ್ಯೆಯ ಜೀವನವನ್ನು ಅನಾವರಣ ಮಾಡುವ ಕಾದಂಬರಿ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಟ್ಟಿರುವ ಪುಟಗಳಲ್ಲಿ ಕಥಾನಾಯಕಿ ಗಿರಾಕಿಯೊಂದಿಗೆ ಮಲಗಿದ್ದಾಗ ಪೋಲಿಸರು ಬಂದು ಸ್ಟೇಷನ್ನಿಗೆ ಎಳೆದೊಯ್ಯುವುದು, ಸ್ಟೇಷನ್ನಿನಲ್ಲಿ ನಡೆಯುವ ಘಟನೆಗಳು, ತನ್ನ ಮಗುವಿನ ನೆನಪು ಮುಂತಾದ ಘಟನೆಗಳನ್ನು ಒಳಗೊಂಡಿದೆ. ಈ ಎಲ್ಲ ಘಟನೆಗಳನ್ನು ಕಥಾನಾಯಕಿಯೇ ನಿರೂಪಿಸುವ ಮಾದರಿಯನ್ನು ಈ ಬರಹ ಒಳಗೊಂಡಿದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಈ ಬರಹವನ್ನು ಪುರುಷನ ಬರಹವೆಂದು ೫ ಜನ ಗುರುತಿಸಿದ್ದಾರೆ. ಮಹಿಳಾ ಬರಹವೆಂದು ೧೫ ಜನ ಗುರುತಿಸಿದ್ದಾರೆ. ಹೀಗೆ ಅವರು ಗುರುತಿಸಲು ನೀಡಿರುವ ಕಾರಣಗಳ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಅ) ಮಹಿಳಾ ಬರಹವೆಂದು ಗುರುತಿಸಿದ ಕೆಲವು ಮಾದರಿಗಳು:**

೧. ಈ ಬರಹವನ್ನು ಮಹಿಳೆ ಬರೆದಿದ್ದಾಳೆ. ಪ್ರತಿ ವಾಕ್ಯದಲ್ಲೂ ಲೇಖಕಿ ಸ್ತ್ರೀ ಸಂಬಂಧ ಸೂಚಕವಾಗಿಯೇ ತನ್ನನ್ನು ಕರೆದುಕೊಂಡಿದ್ದಾಳೆ. ಹಾಗೂ ತನ್ನ ವೈಯಕ್ತಿಕ ಬದುಕನ್ನು, ತನ್ನ ಅಸಹಾಯಕತೆಯನ್ನು ಹೇಳಿದ್ದಾಳೆ. ಅವಸರವಾಗಿ ಸೀರೆ ಸುತ್ತಿಕೊಂಡು, ತನ್ನ ಎದೆ ಹಾಲು ಕುಡಿಯುತ್ತಿದ್ದ ಹಸುಗೂಸು ಮುಂತಾದ ವಾಕ್ಯಗಳು ಸ್ತ್ರೀ ಸೂಚಕಗಳಾಗಿವೆ.

೨. ಈ ಬರವನ್ನು ಬರೆದಿರುವುದು ಒಂದು ಹೆಣ್ಣು. ಕಾರಣ ವೇಶ್ಯೆಯೊಬ್ಬಳ ಬದುಕಿನ ಚಿತ್ರಣ ಇದರಲ್ಲಿ ವ್ಯಕ್ತವಾಗಿದೆ. ಒಬ್ಬ ಗಂಡು ಹೆಣ್ಣನ್ನು ಭಾವನೆಗಳ ಮೂಲಕ ಅರ್ಥಮಾಡಿಕೊಳ್ಳಲು ಬಹಳ ಕಷ್ಟವಿದೆ.

೩. ಒಂದು ಹೆಣ್ಣು ಮಾತ್ರ ತನ್ನ ಜೀವನದಲ್ಲಿ ನಡೆದಂತಹ ಘಟನೆಗಳನ್ನು ಯಥಾವತ್ತಾಗಿ ಹೇಳಲು ಸಾಧ್ಯ.

೪. ಮಹಿಳೆಯರ ನೋವು-ನಲಿವುಗಳನ್ನು ಅರ್ಥೈಸಿಕೊಂಡ ಮಹಿಳೆಯರು ಮಾತ್ರ ಇಂತಹ ಬರಹಗಳನ್ನು ಬರೆಯಲು ಸಾಧ್ಯವಾಗುತ್ತದೆ.

೫. ಇಲ್ಲಿನ ಮುಖ್ಯ ಪಾತ್ರ ಹೆಣ್ಣಾಗಿರುವುದು ಮೊದಲ ಕಾರಣ. ನಂತರದ್ದು ಇಲ್ಲಿರುವುದು ಮಹಿಳಾ ಸಂವೇದನೆ. ಮಹಿಳೆಯ ಕಷ್ಟ ಕೋಟಲೆಗಳು ಬಹುವಾಗಿ ಅರಿತಿರುವವರು ಮಹಿಳೆಯರು. ಆದ್ದರಿಂದ ಇದು ಮಹಿಳಾ ಬರಹ.

೬. "ಈಗ ನಮ್ಮದೆ ಏಳೆಂಟು ಹೆಂಗಸರ ಗುಂಪಿದ್ದುದರಿಂದ ನಮ್ಮ ಹತ್ತಿರಕ್ಕೆ ಬರುವ ಧೈರ್ಯವನ್ನು ಪೋಲಿಸರು ಮಾಡಲಿಲ್ಲ" ಈ ವಾಕ್ಯದಿಂದ ನನಗೆ ಇದನ್ನು ಒಬ್ಬ ಲೇಖಕಿ ಬರೆದಿದ್ದಾಳೆಂದು ಅನಿಸುತ್ತದೆ.

೭. ಗಿರಾಕಿಗಳು ಎಂಬ ಪದವನ್ನು ವೇಶ್ಯಾವಾಟಿಕೆಯಲ್ಲಿ ಪುರುಷರಿಗೆ ಮಾತ್ರ ಬಳಸುವುದು. ಇದನ್ನು ಮಹಿಳೆ ಹೇಳಿಕೊಂಡಿದ್ದರಿಂದ ಇದು ಮಹಿಳಾ ಬರವಣಿಗೆಯಾಗಿದೆ.

**ಆ) ಪುರುಷ ಬರಹವೆಂದು ಗುರುತಿಸಿದ ಕೆಲವು ಮಾದರಿಗಳು**

೧. ಈ ಬರವಣಿಗೆಯಲ್ಲಿ ಮಹಿಳಾ ಸಂಬಂಧಿಯಾಗಿದ್ದರೂ ಇದನ್ನು ಬರೆದಿರುವುದು ಒಬ್ಬ ಪುರುಷ ಎಂದು ಗುರುತಿಸಬಹುದು. ಇದಕ್ಕೆ ಕಾರಣವೆಂದರೆ ವೇಶ್ಯೆಯರ ಬಗ್ಗೆ ಮಹಿಳಾ ಬರವಣಿಗೆ ತುಂಬ ಕಡಿಮೆ. ಮತ್ತು ಮೈಮನಗಳ ಸುಳಿಯಲ್ಲಿ ಮತ್ತು ಮಸಣದ ಹೂ ಕಾದಂಬರಿಯ ಓದಿನ ಪ್ರಭಾವವು ನಾನು ಈ ಬರವಣಿಗೆಯನ್ನು ಪುರುಷ ಬರೆದಿರುವುದಾಗಿ ಗುರುತಿಸಲು ಕಾರಣವಾಗಿರಬಹುದು.

೨. ಇಲ್ಲಿಯ ಭಾಷಾಶೈಲಿಯನ್ನು ಗಮನಿಸಿದರೆ ನನಗೆ ಪುರುಷ ಬರೆದಿರಬೇಕು ಎಂದು ಅನ್ನಿಸಿತು.

೩. ಇಲ್ಲಿನ ಪಾತ್ರಗಳು ಪೂರ್ಣ ಪ್ರಮಾಣದಲ್ಲಿ ಹೆಣ್ಣಿನ ನೋವನ್ನು ಅಥವಾ ಸಮಸ್ಯೆಯನ್ನು ಕಟ್ಟಿಕೊಡುವಲ್ಲಿ ತುಂಬಾ ವಿಫಲವಾಗಿವೆ. ಆದ್ದರಿಂದ ಇದು ಒಬ್ಬ ಪುರುಷ ಬರೆದಂತಹ ಕಥೆಯಾಗಿದೆಯೆಂಬುದು ನನ್ನ ಅಭಿಪ್ರಾಯ. ಹೆಣ್ಣು ಈ ಕಥೆಯನ್ನು ಬರೆದಿದ್ದರೆ ಇನ್ನೂ ಹೆಚ್ಚಿನ ರೀತಿಯಲ್ಲಿ ತಾನು ಅನುಭವಿಸಿದಂತಹ ನೋವನ್ನು ಪ್ರತಿಬಿಂಬಿಸುತ್ತಿದ್ದಳು.

ಮೇಲಿನ ವಿವರಗಳ ಹಿನ್ನೆಲೆಯಲ್ಲಿ ಇದನ್ನು ಪರಿಶೀಲಿಸುವುದಾದರೆ, ಈ ಬರಹವನ್ನು ಹೆಚ್ಚು ಜನ ಇದರ ವಿಷಯಾಧಾರಿತವಾಗಿ ಮಹಿಳಾ ಬರಹವೆಂದು ಗುರುತಿಸಿರುವುದು ಕಂಡುಬಂದಿದೆ. ಈ ಬರಹ ಪುರುಷನದ್ದಾಗಿದ್ದರೂ ಇಲ್ಲಿ ವ್ಯಕ್ತವಾಗಿರುವುದು ಹೆಣ್ಣಿಗೆ ಸಂಬಂಧಿಸಿದ ವಿಷಯವಾದ್ದರಿಂದ, ಇದನ್ನು ಮಹಿಳಾ ಬರಹವೆಂದು ನಿರ್ಧರಿಸಲಾಗಿದೆ. ಕೆಲವರು ಇದನ್ನು ಪುರುಷ ಬರಹವೆಂದು ಗುರುತಿಸಿದ್ದಾರೆ. ಅದಕ್ಕೆ ಅವರು ಕೊಟ್ಟಿರುವ ಕಾರಣಗಳು ಕನ್ನಡದಲ್ಲಿ ವೇಶ್ಯೆಯರ ಕುರಿತು ಮಹಿಳೆಯರು ಹೆಚ್ಚು ಬರವಣಿಗೆ ಮಾಡಿಲ್ಲದಿರುವುದು ಹಾಗೂ ಪೂರ್ಣ ಪ್ರಮಾಣದಲ್ಲಿ ಹೆಣ್ಣಿನ ನೋವನ್ನು ಕಟ್ಟಿ ಕೊಡುವುದರಲ್ಲಿ ಈ ಬರಹ ವಿಫಲವಾಗಿರುವುದು. ಒಬ್ಬರು ಭಾಷಾಶೈಲಿಯನ್ನು ಗಮನಿಸಿದರೆ ನನಗೆ ಪುರುಷ ಬರೆದಿರಬಹುದು ಎನಿಸುತ್ತದೆ ಎಂದು ಹೇಳುತ್ತಾರಾದರೂ ಆ ಭಾಷಾಶೈಲಿಯ ಬಗೆಗೆ ವಿವರ ನೀಡುವುದಿಲ್ಲ. ಒಟ್ಟಾರೆ ಈ ಬರಹವನ್ನು ವಿಷಯಾಧಾರಿತವಾಗಿ ಹೆಚ್ಚು ಜನ ಮಹಿಳಾ ಬರಹವೆಂದು ಗುರುತಿಸಿದ್ದಾರೆ.

**೨. ಬರಹ ಎರಡು:** ಈ ಬರಹ ಪ್ರಜಾವಾಣಿ ಪತ್ರಿಕೆಯಲ್ಲಿ ಪ್ರಕಟವಾದ ಸಿ.ಜಿ. ಮಂಜುಳ ಅವರ ಲೇಖನ. ಈ ಬರಹವು ಭಾರತ ಮತ್ತು ಘಾನಾ ರಾಷ್ಟ್ರಗಳ ಕೆಲವು ಆರ್ಥಿಕ ಒಪ್ಪಂದಗಳನ್ನು ಕುರಿತ ವಿಷಯಗಳನ್ನು ಒಳಗೊಂಡಿದೆ. ಇದು ಭಾರತದ ರಾಷ್ಟ್ರಪತಿ ಪ್ರಣವ್ ಮುಖರ್ಜಿ ಹಾಗೂ ಘಾನಾ ಅಧ್ಯಕ್ಷ ಜಾನ್ ಡ್ರಮಾನಿಯವರ ನಡುವೆ ನಡೆದ ಉಭಯ ರಾಷ್ಟ್ರಗಳ ಆರ್ಥಿಕ ನೀತಿಯನ್ನು ಕುರಿತ ವರದಿಯಾಗಿದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಈ ಬರಹವನ್ನು ಪುರುಷನ ಬರಹವೆಂದು ೧೪ ಜನ ಗುರುತಿಸಿದ್ದಾರೆ. ಇಬ್ಬರು ಮಹಿಳಾ ಬರಹವೆಂದು ಗುರುತಿಸಿದ್ದಾರೆ. ४ ಜನ ಯಾರ ಬರಹವೆಂದು ಗುರುತಿಸಲು ಆಗುತ್ತಿಲ್ಲ ಎಂದು ತಿಳಿಸಿದ್ದಾರೆ. ಹೀಗೆ ಅವರು ಗುರುತಿಸಲು ಸಾಧ್ಯವಿಲ್ಲ ನೀಡಿರುವ ಕಾರಣಗಳ ಕೆಲವು ಮಾದರಿಗಳು ಈ ಮುಂದಿನಂತಿವೆ:

**ಅ) ಪುರುಷನ ಬರಹವೆಂದು ಗುರುತಿಸಿದ ಕೆಲವು ಮಾದರಿಗಳು**

೧. ಭಾರತ ಮತ್ತು ಇತರ ರಾಷ್ಟ್ರಗಳ ಅಂತರರಾಷ್ಟ್ರೀಯ ಸಂಬಂಧಗಳ ಕುರಿತು ವಿಶೇಷವಾಗಿ ಪುರುಷ ಅಧಿಕಾರಿಗಳು ವರದಿಗಳನ್ನು ತಯಾರಿಸುತ್ತಿರುತ್ತಾರೆ. ವಿದೇಶಿ ವ್ಯಾಪಾರ, ವಿದೇಶಿ ಬಂಡವಾಳ,

ಆಮದು, ರಫ್ತುಗಳ ವಿಲೇವಾರಿಗಳಿಗೆ ಸಂಬಂಧಿಸಿದಂತೆ ಹೆಚ್ಚು ಪುರುಷರೇ ಕೆಲಸ ಮಾಡುತ್ತಾರೆ. ಜೊತೆಗೆ ಮಾಧ್ಯಮ ವರದಿಗಾರರಲ್ಲೂ ಇಂತಹ ವಿಷಯಗಳ ಕುರಿತು ವರದಿ ಸಿದ್ಧಪಡಿಸುವವರು ಪುರುಷರಾಗಿರುವುದರಿಂದ ಇದು ಪುರುಷನ ಬರಹವಾಗಿದೆ.

೨. ರಾಷ್ಟ್ರಪತಿಗಳ ಜತೆ ತೆರಳುವ ನಿಯೋಗದಲ್ಲಿ ಮಹಿಳೆಯರಿರಲಿಲ್ಲ. ಹೆಚ್ಚಿನ ಸಂದರ್ಭದಲ್ಲಿ ವಿದೇಶ ಪ್ರವಾಸಕ್ಕೆ ಮಹಿಳಾ ಪತ್ರಕರ್ತರನ್ನು ಕರೆದೊಯ್ಯುವುದಿಲ್ಲ. ಈ ಕಾರಣದಿಂದ ಇದು ಗಂಡು ಬರಹ.

೩. ಈ ಬರಹದ ಭಾಷೆ ಪುರುಷ ಭಾಷೆಯಾಗಿದೆ. ಕಾರಣ ಮಾಹಿತಿ ನೀಡುವ ಆಧಾರದ ಮೇಲೆ ಇದು ಪುರುಷ ಬರಹವೆಂದು ತೀರ್ಮಾನಿಸಬಹುದು.

೪. ಆರ್ಥಿಕವಾಗಿ ಹೆಚ್ಚು ಜ್ಞಾನ ಪುರುಷರಿಗೆ ಇರುತ್ತದೆ.

೫. ಸಾಮಾನ್ಯವಾಗಿ ಆರ್ಥಿಕ ವ್ಯವಹಾರಗಳಿಗೆ ಸಂಬಂಧಿಸಿದ ಪರಿಕಲ್ಪನೆ ಹೆಚ್ಚಾಗಿ ಪುರುಷರಲ್ಲಿರುವುದನ್ನು ಕಾಣಬಹುದು. ಅಂಕಿ ಸಂಖ್ಯೆಗಳ ನಿರ್ದಿಷ್ಟ ಮಾಹಿತಿ ನೀಡಿರುವುದು, ಮಾಹಿತಿಗಳನ್ನು ಖಚಿತವಾಗಿ ನಿರ್ದಿಷ್ಟಪಡಿಸಿರುವುದನ್ನು ಗಮನಿಸಿದರೆ ಇದನ್ನು ಪುರುಷನೇ ವರದಿ ಮಾಡಿದ್ದಾನೆ ಎಂದು ಗೊತ್ತಾಗುತ್ತದೆ.

೬. ನಮ್ಮ ಭಾರತೀಯ ಸಮಾಜದಲ್ಲಿ ಹೆಚ್ಚು ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿ ಪುರುಷನ ಪ್ರತಿನಿಧೀಕರಣ ಹೆಚ್ಚಿರುವುದರಿಂದ.

೭. ಸಮಾಜದಲ್ಲಿನ ಆಗೂ-ಹೋಗುಗಳನ್ನು ಪುರುಷರೇ ಹೆಚ್ಚಾಗಿ ತಿಳಿದವರು.

**ಆ) ಮಹಿಳಾ ಬರಹವೆಂದು ಗುರುತಿಸಿದ ಮಾದರಿ**

೧. ಈ ಬರವಣಿಗೆಯು ವರದಿಯ ರೀತಿಯಲ್ಲಿದೆ ಮತ್ತು ಸರಳ ವಾಕ್ಯಗಳಿಂದ ಕೂಡಿದೆ. ಆದ್ದರಿಂದ ಈ ಬರವಣಿಗೆಯನ್ನು ಮಹಿಳೆ ಬರೆದಿದ್ದಾಳೆ ಎಂದು ಗುರುತಿಸುತ್ತೇನೆ.

**ಇ) ಯಾರ ಬರಹವೆಂದು ಗುರುತಿಸದ ಮಾದರಿ**

೧. ಇದನ್ನು ಯಾರು ಬರೆದವರು ಎಂದು ಗುರುತಿಸುವುದು ಕಷ್ಟ. ಕಾರಣ ಇದು ಒಂದು ಪತ್ರಿಕೆಯಲ್ಲಿನ ಸ್ಟೇಟ್‌ಮೆಂಟ್ ಆಗಿದೆ.

ಈ ಮೇಲಿನ ವಿವರಗಳ ಹಿನ್ನೆಲೆಯಲ್ಲಿ ಇದನ್ನು ಪರಿಶೀಲಿಸುವುದಾದರೆ, ಈ ಬರಹವನ್ನು ಹೆಚ್ಚು ಜನ ವಿಷಯಾಧಾರಿತವಾಗಿ ಪುರುಷನ ಬರವಣಿಗೆ ಎಂದು ಗುರುತಿಸಿರುವುದು ಕಂಡುಬಂದಿದೆ. ಆರ್ಥಿಕ ಜ್ಞಾನ ಹೆಚ್ಚು ಪುರುಷರಿಗೆ ಇರುತ್ತದೆ. ಈ ರೀತಿಯ ಕೆಲಸಗಳನ್ನು ಮಹಿಳೆಯರಿಗೆ ವಹಿಸುವುದಿಲ್ಲ ಹಾಗೂ ಅಂಕಿ ಅಂಶಗಳನ್ನು ನಿಖರವಾಗಿ ಪುರುಷರು ಮಾತ್ರ ನೀಡುತ್ತಾರೆ ಎಂಬ ನಿಲುವುಗಳು ಈ ಬರಹವನ್ನು ಪುರುಷನ ಬರಹವೆಂದು ನಿರ್ಧರಿಸಲು ಕಾರಣವಾಗಿವೆ. ಈ ಬರಹವನ್ನು ಮಹಿಳಾ ಬರಹ ಎಂದು ಗುರುತಿಸಿದವರು ಇದು ವರದಿ ರೀತಿಯಲ್ಲಿದೆ ಮತ್ತು ಸರಳ ವಾಕ್ಯಗಳಿಂದ ಕೂಡಿದೆ

ಎಂದು ಹೇಳುತ್ತಾರೆ. ಇವರ ಪ್ರಕಾರ ಮಹಿಳಾ ಬರಹದ ಶೈಲಿಯು ವರದಿ ರೀತಿ ಹಾಗೂ ಸರಳ ವಾಕ್ಯರಚನೆಯಿಂದ ಕೂಡಿರುತ್ತದೆ ಎಂಬುದಾಗಿದೆ. ಇದನ್ನು ಯಾರು ಬರೆದರೆಂದು ಗುರುತಿಸಲು ಆಗದವರು ನೀಡಿರುವ ಕಾರಣ ಇದು ಪತ್ರಿಕೆಯಲ್ಲಿನ ಸ್ಟೇಟ್‌ಮೆಂಟ್ ಆಗಿದೆ ಎಂಬುದಾಗಿದೆ. ಪತ್ರಿಕೆಗಳ ಸ್ಟೇಟ್‌ಮೆಂಟ್‌ಗಳನ್ನು ಪುರುಷ ಅಥವಾ ಮಹಿಳೆ ಯಾರಾದರೂ ಬರೆದಿರಬಹುದೆಂಬುದು ಇವರ ನಿಲುವಾಗಿದೆ.

**೩. ಬರಹ ಮೂರು:** ಈ ಬರಹವು ಪ್ರಜಾವಾಣಿ ಪತ್ರಿಕೆಯ ಆವಿಷ್ಕಾರ ಕಾಲಂನಲ್ಲಿ ಪ್ರಕಟವಾದ ಕವಿತ ಆರ್. ಅವರ ಬರಹ. ಈ ಬರಹವು ಕೃಷಿಗೆ ಸಂಬಂಧಿಸಿದೆ. ಅಕ್ಕಿಯನ್ನು ಒಣಗಿಸುವ ಹೊಸ ಯಂತ್ರದ ಆವಿಷ್ಕಾರವನ್ನು ಕುರಿತ ಬರವಣಿಗೆ ಇದು. ಈ ಯಂತ್ರದಿಂದ ರೈತರಿಗಾಗುವ ಅನುಕೂಲಗಳೇನು, ಇದಕ್ಕೆ ಮೊದಲು ಅಕ್ಕಿ ಒಣಗಿಸಲು ಆಧುನಿಕ ಯಂತ್ರವಿಲ್ಲದ್ದರಿಂದ ರೈತರಿಗಾಗುತ್ತಿದ್ದ ನಷ್ಟಗಳನ್ನು ಈ ಬರಹ ಅಂಕಿ ಅಂಶಗಳ ಮೂಲಕ ತಿಳಿಸುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಇದನ್ನು ೧೩ ಜನ ಪುರುಷನ ಬರಹವೆಂದು, ಮೂರು ಜನ ಮಹಿಳಾ ಬರಹವೆಂದು, ೪ ಜನ ಯಾರ ಬರಹವೆಂದು ಗುರುತಿಸಲಾಗದಿರುವುದು ಕಂಡುಬಂದಿದೆ. ಹೀಗೆ ಅವರು ಗುರುತಿಸಲು ನೀಡಿರುವ ಕಾರಣಗಳ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಅ) ಪುರುಷನ ಬರಹವೆಂದು ಗುರುತಿಸಿದ ಕೆಲವು ಮಾದರಿಗಳು**

೧. ಕೃಷಿ ಮತ್ತು ಕೃಷಿ ಸಂಬಂಧಿ ಚಟುವಟಿಕೆಗಳಲ್ಲಿ ಹೆಚ್ಚು ತೊಡಗಿಕೊಳ್ಳುವವರು ಪುರುಷರು. ವಿಶೇಷವಾಗಿ ಉಪಕರಣಗಳನ್ನು ಸಂಶೋಧಿಸುವವರು ಪುರುಷರೇ ಆಗಿರುವುದರಿಂದ ಇಂತಹ ಸಂಶೋಧನೆಗಳ ಬಗ್ಗೆ ಹೆಚ್ಚು ಅಧ್ಯಯನ ಮಾಡುವುದು ಮತ್ತು ತಿಳಿದುಕೊಂಡಿರುವುದು ಪುರುಷರಾಗಿರುವುದರಿಂದ ಇದು ಪುರುಷ ಬರಹವಾಗಿದೆ.

೨. ಒಬ್ಬ ರೈತಾಪಿ ಕುಟುಂಬದ ಯುವಕ ಅಥವಾ ರೈತರ ಸಮಸ್ಯೆಗಳನ್ನು ಬಲ್ಲಂತಹ ಪುರುಷ ಈ ಲೇಖನದಲ್ಲಿ ಹೊಸದೊಂದು ಆವಿಷ್ಕಾರದ ಮಾತುಗಳನ್ನು ಬರೆದಿದ್ದಾನೆ. ಅಲ್ಲದೆ ಕೃಷಿಗೆ ಬೇಕಾದಂತಹ ಸಲಕರಣೆ ಹಾಗೂ ಸಮಸ್ಯೆಗಳ ಬಗ್ಗೆ ಪುರುಷರಿಗೆ ಗೊತ್ತಿರುವುದರಿಂದ ಈ ಲೇಖನವನ್ನು ಪುರುಷ ಬರೆದಿದ್ದಾನೆ. ಅಲ್ಲದೆ ಈ ಲೇಖನದಲ್ಲಿ ಪುರುಷನ ಧೋರಣೆಯ ಮಾತುಗಳು ಕಂಡುಬರುತ್ತವೆ.

೩. ಹೆಣ್ಣಿಗೆ ಬೇಸಾಯದಲ್ಲಿ ಆಸಕ್ತಿ ಕಡಿಮೆ ಇದೆ ಎಂದು ತಿಳಿದು ಎಲ್ಲ ಆಧುನಿಕ ಉಪಕರಣಗಳನ್ನು ಪುರುಷರೇ ತಯಾರಿಸುತ್ತಾರೆ.

೪. ಈ ಬರವಣಿಗೆಯು ಸಂದರ್ಶನ ರೂಪದಲ್ಲಿರುವುದರಿಂದ ಒಬ್ಬ ಪುರುಷ ವಿಶ್ವವಿದ್ಯಾಲಯಕ್ಕೆ ಭೇಟಿ ನೀಡಿ ಸಂಗ್ರಹಿಸಿದ ಮಾಹಿತಿಯನ್ನು ವರದಿ ಮಾಡಿದ್ದಾರೆ. ಆದ್ದರಿಂದ ಇದು ಪುರುಷ ಬರವಣಿಗೆ ಎನಿಸುತ್ತದೆ.

**ಆ) ಮಹಿಳೆಯ ಬರಹವೆಂದು ಗುರುತಿಸಿದ ಕೆಲವು ಮಾದರಿಗಳು**

೧. ಈ ಬರಹದ ಭಾಷೆ ಮಹಿಳೆ ಬರೆದ ಭಾಷೆಯಾಗಿದೆ. ಕಾರಣ ರೈತರ ನೋವು, ಸಂಕಟವನ್ನು ಇನ್ನೂ ವಿವರಿಸುವ ಸಾಧ್ಯತೆ ಇತ್ತು. ಹೀಗಾಗಿ ಅವರು ವಸ್ತುನಿಷ್ಟವಾಗಿ ಹೇಳಿದ್ದಾರೆ. 'ರೈತನಿಗೆ' ಎಂಬ

ಶಬ್ದವನ್ನು ಬಳಸಿದ್ದಾರೆ. ಒಂದು ವೇಳೆ ಪುರುಷ ಬರೆದಿದ್ದರೆ 'ರೈತರು' ಎಂದು ಬಳಸುತ್ತಿದ್ದ ಎಂಬ ಭಾವನೆ ನನ್ನದು.

೨. ಈ ಬರಹವು ಹೆಣ್ಣಿನದ್ದು ಏಕೆಂದರೆ ಮಳೆಗಾಲದಲ್ಲಿ ರೈತರು ಭತ್ತ ಮತ್ತು ಅಕ್ಕಿ ಒಣಗಿಸಲು ಪರದಾಡುತ್ತಿರುತ್ತಾರೆ ಎಂದು ಬರೆದಿದ್ದಾರೆ. ಅದೇ ಗಂಡು ಬರೆದರೆ ಪರದಾಡುತ್ತಾರೆ ಎನ್ನುತ್ತಿದ್ದರು.

ಮೇಲಿನ ವಿವರಗಳ ಹಿನ್ನೆಲೆಯಲ್ಲಿ ಇದನ್ನು ಪರಿಶೀಲಿಸುವುದಾದರೆ, ಈ ಬರಹವನ್ನು ಹೆಚ್ಚು ಜನ ವಿಷಯಾಧಾರಿತ ಹಿನ್ನೆಲೆಯಲ್ಲಿ ಪುರುಷ ಬರಹವೆಂದು ಗುರುತಿಸಿದ್ದಾರೆ. ಇದರ ವಿಷಯ ರೈತನಿಗೆ ಸಂಬಂಧಿಸಿದ್ದರಿಂದ, ಪುರುಷರೇ ಬೇಸಾಯ ಮಾಡುವುದರಿಂದ ಹಾಗೂ ಹೊಸಯಂತ್ರಗಳ ಆವಿಷ್ಕಾರ ಪುರುಷನೇ ಮಾಡುತ್ತಾನೆ ಎಂಬ ನಂಬಿಕೆಗಳು ಈ ಬರಹವನ್ನು ಪುರುಷನ ಬರಹವೆಂದು ನಿರ್ಧರಿಸಲು ಕಾರಣವಾಗಿರುವುದನ್ನು ಗುರುತಿಸಬಹುದು. ಮಹಿಳೆಯ ಬರಹವೆಂದು ಗುರುತಿಸಿರುವವರ ಕಾರಣಗಳನ್ನು ಪರಿಶೀಲಿಸುವುದಾದರೆ, ಮಹಿಳೆಯರು ಕೃಷಿ ಚಟುವಟಿಕೆಯಿಂದ ಹೊರಗಿರುವುದರಿಂದ ರೈತನಿಗೆ ಎಂದು ಬಳಸಿದ್ದಾರೆ. ಪುರುಷ ಬರೆದಿದ್ದರೆ ಕೃಷಿ ಅವನ ಕ್ಷೇತ್ರವಾದ್ದರಿಂದ ಆತ್ಮಾರ್ಥಕವಾಗಿ 'ರೈತ' ಪದವನ್ನು ಬಳಸುತ್ತಿದ್ದ ಎಂದು ಗುರುತಿಸಲಾಗಿದೆ. ನಾಲ್ಕು ಜನ ಇದನ್ನು ಯಾರ ಬರಹವೆಂದು ಗುರುತಿಸಲು ಸಾಧ್ಯವಾಗುತ್ತಿಲ್ಲ ಎಂದಿದ್ದಾರೆ. ಈ ಬರಹವು ಮಹಿಳೆಯ ಬರಹವಾಗಿದ್ದರೂ ಇಲ್ಲಿ ವ್ಯಕ್ತವಾಗಿರುವ ವಿಷಯದ ಆಧಾರವಾಗಿ ಪುರುಷನ ಬರಹವೆಂದು ಹೆಚ್ಚು ಜನ ಗುರುತಿಸಿದ್ದಾರೆ.

**೪. ಬರಹ ನಾಲ್ಕು:** ಈ ಬರಹ ಮಹಾಲಕ್ಷ್ಮಿ ಎಂಬುವವರು ಬರೆದಿರುವ ಕ್ಷೀರೋಧಜೆ ಎಂಬ ಮಹಿಳಾ ಪ್ರಧಾನ ಕಥಾವಸ್ತುವುಳ್ಳ ಕಾದಂಬರಿ. ಈ ಕಾದಂಬರಿಯಲ್ಲಿ ಆಯ್ಕೆ ಮಾಡಿ ನೀಡಲಾದ ಕೆಲವು ಪುಟಗಳಲ್ಲಿ ಕಥಾನಾಯಕನ ಮನಸ್ಸಿನ ಕೆಲವು ಗೊಂದಲಗಳ ನಿರೂಪಣೆಯಿದೆ. ಕೆಲಸವಿಲ್ಲದ ಪರಿಸ್ಥಿತಿ, ಪೌರೋಹಿತ್ಯಕ್ಕೆ ಅಂಟಿಕೊಳ್ಳಲು ಇಷ್ಟಪಡದೆ ಹೆಂಡತಿ, ಮನೆ ಎಲ್ಲವನ್ನು ಬಿಟ್ಟು ಬೇರೆ ದೇಶಕ್ಕೆ ಹೋಗುವುದು, ಅಲ್ಲಿನ ಮಾಂಸಾಹಾರಕ್ಕೆ ಹೊಂದಿಕೊಳ್ಳುವುದು, ಧೂಮಪಾನ, ಮಧ್ಯಪಾನಗಳ ಚಟ ಬೆಳೆಸಿಕೊಳ್ಳುವುದು, ಇವುಗಳು ತಪ್ಪು ಎನ್ನುವ ಗೊಂದಲ. ಈ ರೀತಿ ನಾಯಕನ ಚಿತ್ರಣವನ್ನು ನೀಡುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ಒಟ್ಟು ೧೭ ಜನ ಇದು ಪುರುಷನ ಬರಹವೆಂದು, ೩ ಜನ ಮಹಿಳಾ ಬರಹವೆಂದು ಗುರುತಿಸುತ್ತಾರೆ. ಹೀಗೆ ಅವರು ಗುರುತಿಸಲು ನೀಡಿರುವ ಕಾರಣಗಳ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಅ) ಪುರುಷನ ಬರಹವೆಂದು ಗುರುತಿಸಿದ ಕೆಲವು ಮಾದರಿಗಳು**

೧. ಈ ಬರವಣಿಗೆಯಲ್ಲಿ ಬಳಕೆಯಾಗಿರುವ ವೈದಿಕ ಸಂಪ್ರದಾಯದ ಧಿಕ್ಕಾರ, ಮಾಂಸಹಾರ ಈ ತರದ ಪದಗಳ ಬಳಕೆಯಿಂದ ಪುರುಷ ಬರೆದಿರುವುದೆಂದು ಗುರುತಿಸಬಹುದು.

೨. ತನ್ನ ಬದುಕಿನ ನೋವುಗಳನ್ನು ಪುರುಷರಂತೆ ಮಹಿಳೆ ಸ್ವಚ್ಛಂದವಾಗಿ ಅಭಿವ್ಯಕ್ತಿಗೊಳಿಸಲು ಸಾಧ್ಯವಿಲ್ಲ.

೩. ಒಬ್ಬ ಪುರುಷ ತನ್ನ ಸಂಸಾರದ ವಿಷಯವನ್ನು ವ್ಯಕ್ತಪಡಿಸುವಿಕೆಯನ್ನು ಗಮನಿಸಿದಾಗ ಪುರುಷ ಬರವಣಿಗೆ ಎನಿಸುತ್ತದೆ.

೪. ಇದು ಒಬ್ಬ ಲೇಖಕ ಬರೆದದ್ದು ಎಂದೆನಿಸುತ್ತದೆ. ಇಲ್ಲಿರುವ ಕೆಲ ಪದಗಳಾದ 'ಅವಳ' ಎಂಬುದರಿಂದ ಅನಿಸುತ್ತದೆ.

೫. ಒಬ್ಬ ಯುವಕನ ಗೊಂದಲದ ಬದುಕನ್ನು ಚಿತ್ರಿಸುವಲ್ಲಿ ಪುರುಷನ ಬುದ್ಧಿವಂತಿಕೆಯ ಮನಸ್ಸನ್ನು ಸೂಚಿಸುತ್ತದೆ. ತಂದೆಯ ಪ್ರೀತಿ, ಮಧ್ಯಪಾನದ ವಿವರಗಳನ್ನು ಗಮನಿಸಿದಾಗ ಲೇಖಕರು ಹತ್ತಿರದಿಂದ ಗಮನಿಸಿದಂತೆಯೂ, ಸ್ವತಃ ಅನುಭವಿಸಿರುವಂತೆಯೂ ಕಂಡು ಬರುತ್ತದೆ.

೬. ವೈದಿಕ ಪರಂಪರೆಯಲ್ಲಿರುವ ಕಟ್ಟುಪಾಡುಗಳನ್ನು ಜಾತಿಯ ಬಗೆಗಿನ ಭಾವನೆಯನ್ನು ಮೀರಿ ಆಧುನಿಕತೆಗೆ ಒಗ್ಗಿಕೊಂಡು ಜೀವನ ನಡೆಸುವ ತುಮುಲವಿರುವುದರಿಂದ ಇದು ಪುರುಷನ ಬರಹವಾಗಿದೆ.

೭. ಈ ಬರವಣಿಗೆ ಲೇಖಕನದು. ಏಕೆಂದರೆ, ಇಲ್ಲಿ ನಾನು ಏಕಾಗಿ ಹಡಗಿನಿಂದ ಇಳಿದೆನೋ, ಒಂದು ದಿನವೂ ಮಾಂಸವನ್ನು ಮುಟ್ಟದವನಾದ ನಾನು ಏನೇನು ತಿಂದು ಹೊಟ್ಟೆ ತುಂಬಿಸಿಕೊಳ್ಳಬೇಕೋ! ಎಂದು ಪುರುಷ ತಾನು ಹೇಳಿಕೊಳ್ಳುವುದನ್ನು ಗಮನಿಸಬೇಕಾಗಿದೆ.

**ಆ) ಮಹಿಳೆಯ ಬರಹವೆಂದು ಗುರುತಿಸಿದ ಕೆಲವು ಮಾದರಿಗಳು**

೧. ಈ ಗದ್ಯದ ಬರಹದಲ್ಲಿ ಮಹಿಳೆಯ ಭಾಷೆ ಇದೆ. ಕಾರಣ ಒಂದು ನಿಧಾನಗತಿಯ ವಿವರಣೆ ಇದೆ. ಮಹಿಳೆ ಬರೆದ ಕಾದಂಬರಿಯ ಸಾಲುಗಳನ್ನು ಓದಿದಂತೆ ಅನಿಸುತ್ತದೆ.

೨. ಇದು ಹೆಣ್ಣು ಬರೆದದ್ದು. ಏಕೆಂದರೆ ಈ ಬರಹದಲ್ಲಿ ಒಂದು ಹೆಣ್ಣು ನೋವನ್ನು ಪುರುಷನಿಂದ ಉಂಡವಳಾಗಿದ್ದು ಅವನಿಂದ ದೂರವಾಗಿದ್ದಂತೆ ಕಾಣುತ್ತದೆ. ಈ ಕಥೆಯಲ್ಲಿ ಬರುವ ಪುರುಷರ ಸಂಭಾಷಣೆಗಳು ಪುರುಷ ಬರೆದಂತೆ ಕಾಣುವುದಿಲ್ಲ. ಪುರುಷರ ಮನಃಸ್ಥಿತಿಯನ್ನು ತಿಳಿದ ಹೆಣ್ಣು ಬರೆದಂತೆ ನನಗೆ ಗೋಚರಿಸುತ್ತಿದೆ.

ಮೇಲಿನ ವಿವರಗಳ ಹಿನ್ನೆಲೆಯಲ್ಲಿ ಇದನ್ನು ಪರಿಶೀಲಿಸುವುದಾದರೆ, ಈ ಬರಹವನ್ನು ಹೆಚ್ಚು ಜನ ಇದರಲ್ಲಿ ವ್ಯಕ್ತವಾಗಿರುವ ವಿಷಯವನ್ನು ಆಧರಿಸಿ ಪುರುಷ ಬರಹವೆಂದು ಗುರುತಿಸಿರುವುದು ಕಂಡು ಬಂದಿದೆ. ವೈದಿಕ ಸಂಪ್ರದಾಯದ ಧಿಕ್ಕಾರ, ಮಧ್ಯ, ಮಾಂಸಗಳ ವಿವರ, ಗೊಂದಲದಿಂದ ಮನೆಬಿಟ್ಟು ಹೋಗುವಿಕೆ ಈ ವಿವರಗಳು ಪುರುಷನಿಗೆ ಸಂಬಂಧಿಸಿದವು ಎಂಬ ಗ್ರಹಿಕೆಗಳು ಪುರುಷನ ಬರವಣಿಗೆ ಎಂದು ಗುರುತಿಸಲು ಕಾರಣವಾಗಿವೆ. ಮಹಿಳೆಯ ಬರಹವೆಂದು ಗುರುತಿಸಿರುವವರು ಇಲ್ಲಿ ನಿಧಾನಗತಿ ವಿವರಣೆಯಿದೆ ಎಂದು ಕಾರಣ ನೀಡುತ್ತಾರೆ. ನಿಧಾನಗತಿಯ ನಿರೂಪಣೆ ಮಹಿಳೆಯ ಬರಹದ ಒಂದು ಶೈಲಿ ಎಂದು ಇವರು ತಿಳಿದಿರುವುದು ಗೋಚರವಾಗುತ್ತಿದೆ. ಮತ್ತೊಬ್ಬರು ಪುರುಷರ ಸಂಭಾಷಣೆಗಳು ಪುರುಷ ಬರೆದಂತೆ ಕಾಣುವುದಿಲ್ಲ ಎಂದು ಗುರುತಿಸುತ್ತಾರೆ. ಪುರುಷನ ಸಂಭಾಷಣೆಯ ಶೈಲಿ ಯಾವ

ರೀತಿಯಲ್ಲಿರುತ್ತದೆ ಎಂದು ಇವರು ತಿಳಿಸುವುದಿಲ್ಲ. ಒಟ್ಟಾರೆ ಈ ಬರಹ ಮಹಿಳೆಯದ್ದಾಗಿದ್ದರೂ ಇಲ್ಲಿನ ವಿಷಯವನ್ನಾಧರಿಸಿ ಹೆಚ್ಚು ಜನ ಪುರುಷನ ಬರಹವೆಂದು ತೀರ್ಮಾನಿಸಿದ್ದಾರೆ.

**೫. ಬರಹ ಐದು:** ಇದು ಟಿ.ಆರ್. ಚಂದ್ರಶೇಖರ್ ಅವರ ಲಿಂಗ ಸಂಬಂಧಗಳು ಮತ್ತು ಅಭಿವೃದ್ಧಿ ಎಂಬ ಪುಸ್ತಕದ ಆಯ್ದ ಪುಟಗಳ ಬರಹವಾಗಿದೆ. ಈ ಬರಹ ಸ್ತ್ರೀವಾದದ ಉದ್ದೇಶಗಳ ಹಿನ್ನೆಲೆಯಲ್ಲಿ ರಚಿತವಾಗಿದೆ. ಕೌಟುಂಬಿಕ ವ್ಯವಸ್ಥೆಯಲ್ಲಿರುವ ಮಹಿಳೆಯರ ನಿಯಂತ್ರಣಗಳು, ಲೈಂಗಿಕತೆಯಲ್ಲಿ ಪುರುಷನಿಗೆ ಇಲ್ಲದ, ಮಹಿಳೆಗೆ ಮಾತ್ರ ಇರುವ ನಿಯಂತ್ರಣಗಳು, ಕೌಟುಂಬಿಕ ಹಿಂಸೆಯನ್ನು ಮೌನವಾಗಿ ಅನುಭವಿಸಬೇಕಾಗಿರುವ ಮಹಿಳೆಯ ಸ್ಥಿತಿಯನ್ನು ಈ ಬರಹ ಚಿತ್ರಿಸುತ್ತದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೧೭ ಜನ ಇದನ್ನು ಮಹಿಳಾ ಬರಹವೆಂದು, ಇಬ್ಬರು ಪುರುಷನ ಬರಹವೆಂದು, ಒಬ್ಬರು ಯಾರ ಬರಹವೆಂದು ಗುರುತಿಸಲು ಆಗದಿರುವುದು ಕಂಡುಬಂದಿದೆ. ಹೀಗೆ ಅವರು ಗುರುತಿಸಲು ನೀಡಿರುವ ಕಾರಣಗಳ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಅ) ಮಹಿಳಾ ಬರಹವೆಂದು ಗುರುತಿಸಿದ ಕೆಲವು ಮಾದರಿಗಳು**

೧. ಇಲ್ಲಿ ಮಹಿಳೆ ಮತ್ತು ಪುರುಷರ ನಡುವಿನ ತಾರತಮ್ಯವನ್ನು ಸಮಾಜ ಹೇಗೆ ನೋಡುತ್ತದೆ ಎಂಬ ವಿಡಂಬನೆಯಿದೆ. ಹೆಣ್ಣು ತನ್ನ ಜೀವನದಲ್ಲಿ ನಡೆಯುವ ದುರಂತದ ಬದುಕನ್ನು ತನ್ನ ಮಾತುಗಳ ಮೂಲಕವೇ ಇಲ್ಲಿ ಪ್ರಸ್ತುತಪಡಿಸಿದ್ದಾಳೆ. ಹುಟ್ಟುತ್ತಲೇ ಯಾರೂ ಮಹಿಳೆಯಾಗುವುದಿಲ್ಲ, ಮರ್ಯಾದೆ, ಪಾವಿತ್ರ್ಯತೆ, ಅಪವಿತ್ರ ಎಂಬಂತಹ ಪದಗಳು ನೇರವಾಗಿ ತನಗೆ(ಹೆಣ್ಣಿಗೆ) ಸೇರಿದವುಗಳೆಂಬ ಆತ್ಮನಿವೇದನೆಯ ಮಾತುಗಳಿರುವುದರಿಂದ ಇದು ಮಹಿಳೆಯ ಬರಹವಾಗಿದೆ.

೨. ಹೆಣ್ಣಿನ ಶೋಷಣೆಯ ಬಗ್ಗೆ ಹೆಣ್ಣಾದವಳೇ ಹೇಳಿಕೊಳ್ಳಬೇಕೆ ಹೊರತು ಯಾವೊಬ್ಬ ಪುರುಷನು ಹೇಳಲಾರ. ಹಾಗಾಗಿ ಈ ಬರವಣಿಗೆಯಲ್ಲಿ ಮಹಿಳೆಯ ಮೇಲಿನ ಶೋಷಣೆಗಳನ್ನು ಹೇಳಿಕೊಂಡಿರುವುದರಿಂದ ಇದು ಮಹಿಳೆಯ ಬರಹವಾಗಿದೆ.

೩. ಈ ಲೇಖನದಲ್ಲಿ ಹೆಣ್ಣಿನ ಮೇಲೆ ನಡೆಯುವಂತಹ ಶೋಷಣೆಗಳು, ಹೆಣ್ಣಿನ ಮೇಲೆ ಏರುವ ಆಪಾದನೆಗಳು, ಸಮಾಜದಲ್ಲಿ ಹೆಣ್ಣನ್ನು ನೋಡುತ್ತಿರುವ ದೃಷ್ಟಿಕೋನದ ಅರಿವುಗಳೆಲ್ಲ ಗೋಚರಿಸುತ್ತಿದೆ. ಅಲ್ಲದೇ ಈ ಲೇಖನದಲ್ಲಿ ಪ್ರತಿಭಟನಾ ನೆಲೆಯನ್ನು ಕಾಣಬಹುದು. ಒಂದು ಹೆಣ್ಣು ತಾನು ಹಾಗೂ ತನ್ನ ಸಮಾಜದ ಹೆಣ್ಣುಗಳ ನೋವುಗಳನ್ನು ಬರೆದಿದ್ದಾಳೆಂಬುದು ನನ್ನ ಅಭಿಪ್ರಾಯವಾಗಿದೆ.

೪. ಈ ಬರಹ ಹೆಣ್ಣಿನದು. ಇಲ್ಲಿನ ವಿಚಾರಗಳು ಹೆಣ್ಣಿನ ನೋವಿನ ಮತ್ತು ಸಾಮಾಜಿಕ ಕಟ್ಟುಪಾಡುಗಳ ಕುರಿತು ಇದೆ. ಹೆಣ್ಣು ಈ ಸಮಸ್ಯೆಯನ್ನು ಅನುಭವಿಸುವವಳಾದ್ದರಿಂದ ಈ ಬರವಣಿಗೆಯನ್ನು ಬರೆದಿರುತ್ತಾಳೆ ಮತ್ತು ತಮ್ಮ ಸಮಸ್ಯೆಯ ಬಗೆಗೆ ಪುರುಷರಲ್ಲೂ ಅನುಕಂಪವಿದೆ ಎನ್ನುವುದನ್ನು ತೋರಿಸುವ ಸಲುವಾಗಿ ಅಮರ್ತ್ಯಸೇನ್ ಅವರ ಉದಾಹರಣೆ ನೀಡಲಾಗಿದೆ.

೫. ಕುಟುಂಬದಲ್ಲಿ ಹೆಣ್ಣು ಅನುಭವಿಸುವ ಸಂಕಟಗಳನ್ನು ಬಹಳ ಆಪ್ತವಾಗಿ ಚಿತ್ರಿಸಿದೆ.

೬. ಇಲ್ಲಿ ಕುಟುಂಬದಿಂದಲೇ ಹೆಣ್ಣಿನ ಶೋಷಣೆ ಯಾವ ರೀತಿ ಆರಂಭವಾಗುತ್ತದೆ? ಅದು ಹೆಣ್ಣು ಮಕ್ಕಳೇ ಯಾವ ರೀತಿಯಲ್ಲಿ ಒಪ್ಪಿಕೊಳ್ಳುವಂತೆ ಮಾಡಿದೆ ಎಂದು ಇದನ್ನೆಲ್ಲಾ ಅನುಭವಿಸಿದವರು ಇಲ್ಲಿ ಅಭಿವ್ಯಕ್ತಿಗೊಳಿಸಿದ್ದಾರೆ.

ಮೇಲಿನ ವಿವರಗಳ ಹಿನ್ನೆಲೆಯಲ್ಲಿ ಇದನ್ನು ಪರಿಶೀಲಿಸುವುದಾದರೆ, ಈ ಬರವನ್ನು ಹೆಚ್ಚು ಜನ ವಿಷಯಾಧಾರಿತವಾಗಿ ಮಹಿಳೆಯ ಬರವಣಿಗೆ ಎಂದು ಗುರುತಿಸಿರುವುದು ಕಂಡು ಬಂದಿದೆ. ಈ ಬರಹ ಮಹಿಳೆಯ ಶೋಷಣೆಯನ್ನು ಕುರಿತಾದ್ದರಿಂದ, ಅದರಲ್ಲೂ ಕೌಟುಂಬಿಕ ಶೋಷಣೆ, ಲೈಂಗಿಕ ಸ್ವಾತಂತ್ರ್ಯದ ನಿಯಂತ್ರಣಗಳನ್ನು ಕುರಿತಾಗಿರುವುದರಿಂದ ಇದು ಮಹಿಳೆಯರಿಗೆ ಸಂಬಂಧಿಸಿದ ವಿಷಯವಾಗಿರುವುದರಿಂದ ಇದನ್ನು ಮಹಿಳಾ ಬರಹವೆಂದು ನಿರ್ಧರಿಸಿದ್ದಾರೆ. ಇಬ್ಬರು ಇದನ್ನು ಪುರುಷ ಬರಹವೆಂದು ಗುರುತಿಸಿದ್ದರೂ ಕಾರಣವನ್ನು ದಾಖಲಿಸಿಲ್ಲ. ಒಬ್ಬರು ಈ ಲೇಖನ ಮಹಿಳೆ ಅಥವಾ ಪುರುಷರದೆಂದು ಗುರುತಿಸುವುದು ಕಷ್ಟವಾಗಿದೆ ಎಂದು ಹೇಳಿದ್ದಾರೆ. ಕಾರಣವನ್ನು ತಿಳಿಸಿಲ್ಲ. ಒಟ್ಟಾರೆ ಈ ಬರಹವು ಪುರುಷನದ್ದಾಗಿದ್ದರೂ ಇದರ ವಿಷಯವನ್ನು ಆಧರಿಸಿ ಮಹಿಳಾ ಬರಹವೆಂದು ಹೆಚ್ಚು ಜನ ನಿರ್ಧರಿಸಿದ್ದಾರೆ.

**೬. ಬರಹ ಆರು:** ಈ ಬರಹ ಪ್ರೇಮಕಾರಂತರ ಸೋಲಿಸಬೇಡ ಗೆಲಿಸಯ್ಯ ಎಂಬ ಆತ್ಮಕಥನದ ಆಯ್ದ ಪುಟಗಳು. ಈ ಪುಟಗಳಲ್ಲಿ ಮಕ್ಕಳ ನಾಟಕವನ್ನು ಕುರಿತ ವಿವರಗಳಿವೆ. ನಾಟಕದ ಕಥಾವಸ್ತು, ಪಾತ್ರವಿಶೇಷತೆ, ನಾಟಕದ ಪ್ರಾರಂಭ, ಅಂತ್ಯ, ಮಕ್ಕಳಿಗೆ ನಾಟಕ ಶಿಬಿರಗಳ ಅವಶ್ಯಕತೆ, ಅವರಲ್ಲಿ ಅಭಿನಯ ಕಲೆಯನ್ನು ಬೆಳೆಸುವ ರೀತಿ ಮುಂತಾದ ಅಂಶಗಳ ವಿವರಗಳನ್ನು ಈ ಆಯ್ದ ಪುಟಗಳು ಒಳಗೊಂಡಿವೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೧೩ ಜನ ಇದನ್ನು ಮಹಿಳಾ ಬರಹವೆಂದು ಗುರುತಿಸಿದ್ದಾರೆ. ೫ ಜನ ಇದನ್ನು ಪುರುಷನ ಬರಹವೆಂದು ಗುರುತಿಸಿದ್ದಾರೆ. ಇಬ್ಬರು ಯಾರ ಬರಹವೆಂದು ಗುರುತಿಸಲು ಸಾಧ್ಯವಾಗುತ್ತಿಲ್ಲ ಎಂದು ತಿಳಿಸಿರುವುದು ಕಂಡುಬಂದಿದೆ. ಹೀಗೆ ಅವರು ಗುರುತಿಸಲು ನೀಡಿರುವ ಕಾರಣಗಳ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಅ) ಮಹಿಳಾ ಬರಹವೆಂದು ಗುರುತಿಸಿದ ಕೆಲವು ಮಾದರಿಗಳು**

೧. ಮಕ್ಕಳ ಮನಸ್ಸನ್ನು ತುಂಬಾ ಆಳವಾಗಿ ಅರಿತು ಬರೆದಿರುವಂತೆ ತೋರುತ್ತದೆ. ಮಕ್ಕಳ ಮನಸ್ಸನ್ನು ಇಷ್ಟು ಆಳವಾಗಿ ಅರಿಯುವ ಸಾಧ್ಯತೇ ಇರುವುದರು ಒಬ್ಬ ತಾಯಿಗೆ ಮಾತ್ರ.

೨. ಇಲ್ಲಿಯ ಬರವಣಿಗೆಯ ಶೈಲಿ ಹಾಗೂ ಮಕ್ಕಳ ಕುರಿತ ಭಾವನೆಗಳು ಪುರುಷರಿಗಿಂತ ಮಹಿಳೆಯರಿಗೆ ಹೆಚ್ಚು ಗೊತ್ತಿರುತ್ತದೆ.

೩. ಮಕ್ಕಳೊಂದಿಗಿರಲು ಹೆಚ್ಚು ಆಸಕ್ತಿವಹಿಸುವವಳು ಸ್ತ್ರೀ. ಆದ್ದರಿಂದ ಇಲ್ಲಿನ ವಿಷಯವನ್ನು ಓದಿದಾಗ ಹೆಣ್ಣು ಬರೆದಿರಬೇಕೆಂದು ನನ್ನ ಅಭಿಪ್ರಾಯ.

೪. ಮಕ್ಕಳ ನಾಟಕಗಳು ವಿಶಿಷ್ಟ ಕಲೆಯನ್ನು ಅನಾವರಣಗೊಳಿಸುವಂತಹ ಹೊಸ ಹೊಸ ಪ್ರಯೋಗಗಳನ್ನು ಹುಟ್ಟುಹಾಕುವಂತಹವುಗಳಾಗಿರುತ್ತವೆ. ಈ ಸಾರಾಂಶದಲ್ಲಿ ಮಕ್ಕಳ ಪ್ರತಿಭೆ ಮತ್ತು

ಅವರ ಕಲಿಕೆಯ ಸೂಕ್ಷ್ಮ ಅಂಶಗಳಿರುವುದರಿಂದ ಅವುಗಳನ್ನು ಹತ್ತಿರದಿಂದ ಗಮನಿಸುವ ತಾಯಿಗೆ ಅವು ಹೆಚ್ಚು ಅರ್ಥವಾಗಿರುತ್ತವೆ. ಅಂತಹ ಅನುಭವಗಳನ್ನು ಒಬ್ಬ ತಾಯಿ ಮನಸ್ಸು ಇಲ್ಲಿ ಅಕ್ಷರ ರೂಪಕ್ಕಿಳಿಸಿದೆ.

೫. ಈ ಬರಹವನ್ನು ಹೆಣ್ಣು ಬರೆದಿದ್ದಾಳೆ. ಏಕೆಂದರೆ, ಮಕ್ಕಳೊಂದಿಗೆ ಬೆರೆಯಲು ಹೆಣ್ಣು ಇಷ್ಟಪಟ್ಟಷ್ಟು ಗಂಡು ಇಚ್ಛಿಸುವುದಿಲ್ಲ.

೬. ನನಗೆ ಮಕ್ಕಳ ಜೊತೆ ಕೆಲಸಮಾಡುವುದೆಂದರೆ ಬಹಳ ಇಷ್ಟ ಈ ಮಾತನ್ನು ನೋಡಿದಾಗ ನನಗೆ ಸ್ತ್ರೀ ಬರೆದಿರುತ್ತಾರೆಂದು ಅನಿಸುತ್ತಿದೆ.

೭. ಮಕ್ಕಳ ಮನಸ್ಸು ತಾಯಿಗೆ ಮಾತ್ರ ತಿಳಿದಿರುತ್ತದೆ. ಇಲ್ಲಿ ಮಾತನಾಡಿರುವವರು ಮಕ್ಕಳ ಮನಸ್ಸಿನ ಮೇಲೆ ಬೀರಬಹುದಾದ ಪರಿಣಾಮ ಮತ್ತು ಅವರ ಭವಿಷ್ಯ ರೂಪಿಸುವ ಮಾದರಿಯನ್ನು ಗಮನದಲ್ಲಿರಿಸಿಕೊಂಡಿರುವುದು ಕಂಡುಬರುವುದರಿಂದ ಇಲ್ಲಿ ಮಹಿಳೆ ಮಾತಾಡಿದ್ದಾಳೆಂದು ತೋರುತ್ತದೆ.

**ಆ) ಪುರುಷನ ಬರಹವೆಂದು ಗುರುತಿಸಿದ ಕೆಲವು ಮಾದರಿಗಳು**

೧. ಈ ಗದ್ಯ ಬರಹ ಪುರುಷರು ಬರೆದ ಬರಹವಾಗಿದೆ. ಕಾರಣ ತುಂಬಾ ವಿವರಣಾತ್ಮಕವಾಗಿ ಬರೆದ ಕಾರಣ ಇದನ್ನು ಪುರುಷನೊಬ್ಬನ ಬರೆಹವೆಂದು ತೀರ್ಮಾನಿಸಬಹುದು.

೨. ಇದು ಪುರುಷರ ಬರವಣಿಗೆ ಯಾಕೆಂದರೆ ನಾಟಕವನ್ನು ಕರಿತು ಯಾವ ಮಹಿಳೆಯರೂ ವಿಸ್ತಾರವಾಗಿ ತಿಳಿಸುವುದಿಲ್ಲ.

೩. ಇದರ ನಿರೂಪಣೆ ಗಂಡಿನದ್ದಾಗಿದೆ.

೪. ನಾಟಕಗಳನ್ನು ಸಾಮಾನ್ಯವಾಗಿ ಪುರುಷರೇ ರಚಿಸಿ ರಂಗದ ಮೇಲೆ ಪ್ರದರ್ಶಿಸುವುದನ್ನು ಹೆಚ್ಚಾಗಿ ಕಾಣಬಹುದು. ಇಲ್ಲಿಯವರೆಗಿನ ಬಹುತೇಕ ನಾಟಕಗಳನ್ನು ಪುರುಷರೇ ನಿರ್ದೇಶಿಸಿರುವ ಹಿನ್ನೆಲೆಯಲ್ಲಿ ಇದನ್ನು ಕೂಡ ಪುರುಷರೇ ಹೇಳುತ್ತಿದ್ದಾರೆ ಎನಿಸುತ್ತದೆ.

೫. ಈ ಬರಹ ಗಂಡಿನದ್ದು. ಈ ಲೇಖನ ರಂಗಭೂಮಿಗೆ ಸಂಬಂಧಪಟ್ಟದ್ದು. ಅದರಲ್ಲೂ ಮಕ್ಕಳ ನಾಟಕಕ್ಕೆ ಸಂಬಂಧಿಸಿದ್ದು. ಅಲ್ಲದೆ ಇದರಲ್ಲಿ ಯಕ್ಷಗಾನ ಮುಂತಾದ ಪ್ರಕಾರಗಳ ಪ್ರಸ್ತಾಪವಿರುವುದರಿಂದ ಇದು ಗಂಡಿನ ಬರಹ.

೬. ಈ ಬರಹ ಗಂಡಿನದ್ದು. ಇಲ್ಲಿಯ ಬರವಣಿಗೆಯ ಶೈಲಿಯು ಗಂಡಿನದ್ದಾಗಿದೆ. ಭಾವನೆಗಳು ಸಹ ಗಂಡಿನ ಧ್ವನಿಯಲ್ಲಿ ಕಂಡುಬರುತ್ತವೆ.

ಮೇಲಿನ ವಿವರಗಳ ಹಿನ್ನೆಲೆಯಲ್ಲಿ ಇದನ್ನು ಪರಿಶೀಲಿಸುವುದಾದರೆ, ಈ ಬರಹವನ್ನು ಹೆಚ್ಚು ಜನ ವಿಷಯಾಧಾರಿತವಾಗಿ ಮಹಿಳೆಯ ಬರವಣಿಗೆ ಎಂದು ಗುರುತಿಸಿರುವುದು ಕಂಡುಬಂದಿದೆ. ತಾಯಿ ಮತ್ತು ಮಕ್ಕಳ ಸಂಬಂಧದ ಅನಾವರಣದ ಹಿನ್ನೆಲೆಯಲ್ಲಿ ಇದನ್ನು ಮಹಿಳಾ ಬರವಣಿಗೆ ಎಂದು ಗುರುತಿಸಲಾಗಿದೆ. ಈ ಬರಹವನ್ನು ಪುರುಷನ ಬರಹವೆಂದು ಗುರುತಿಸಿದವರು ನೀಡುತ್ತಿರುವ ಕಾರಣಗಳನ್ನು ಪರಿಶೀಲಿಸುವುದಾದರೆ, ನಾಟಕ ರಚನೆ, ರಂಗಭೂಮಿಯ ಪ್ರಯೋಗ, ಯಕ್ಷಗಾನಗಳಲ್ಲಿ ಪುರುಷರು ಹೆಚ್ಚು ಆಸಕ್ತಿ ತೋರುವುದರಿಂದ ಹಾಗೂ ನಾಟಕ, ಯಕ್ಷಗಾನ ಪುರುಷರ ವ್ಯಾಪ್ತಿಗೆ ಸೇರಿದವು ಎಂಬ

ಗ್ರಹಿಕೆಗಳು ಅವರನ್ನು ಈ ಬರಹ ಪುರುಷನದು ಎಂದು ಗುರುತಿಸಲು ಕಾರಣವಾಗಿವೆ. ಮತ್ತೊಬ್ಬರು ಇದರ ವಿವರಣಾತ್ಮಕ ಬರಹದ ಶೈಲಿಯ ಹಿನ್ನೆಲೆಯಲ್ಲಿ ಇದನ್ನು ಪುರುಷ ಬರವಣಿಗೆ ಎಂದು ಗುರುತಿಸುತ್ತಾರೆ. ಮತ್ತೊಬ್ಬರು ಬರವಣಿಗೆಯ ಶೈಲಿ, ಭಾವನೆಗಳು ಗಂಡಿನ ಧ್ವನಿಯಲ್ಲಿವೆ ಎಂದು ಗುರುತಿಸುತ್ತಾರೆ. ಇಬ್ಬರು ಯಾರ ಬರಹವೆಂದು ಗುರುತಿಸಲು ಸಾಧ್ಯವಾಗುತ್ತಿಲ್ಲ ಎಂದು ತಿಳಿಸಿದ್ದಾರೆ. ಒಟ್ಟಾರೆ ಈ ಬರಹವು ವಿಷಯಾಧಾರಿತ ನೆಲೆಯಲ್ಲಿ ಮಹಿಳೆಯ ಬರಹ ಅಥವಾ ಪುರುಷನ ಬರಹವೆಂದು ನಿರ್ಧರಿಸಲಾಗಿದೆ. ಭಾವನಾತ್ಮಕ ನೆಲೆಯಲ್ಲಿ ತೀರ್ಮಾನಿಸಿದವರು ತಾಯಿ ಮತ್ತು ಮಕ್ಕಳ ನಡುವಿನ ಬಾಂಧವ್ಯವನ್ನು ಕಾರಣವಾಗಿಸಿಕೊಂಡು ಮಹಿಳಾ ಬರಹವೆಂದು ಗುರುತಿಸಿದ್ದಾರೆ. ಮಹಿಳೆ ಮತ್ತು ಪುರುಷರ ಕಾರ್ಯಕ್ಷೇತ್ರಗಳ ವಿಂಗಡಣೆಯ ಪೂರ್ವಗ್ರಹ ಕಲ್ಪನೆಗಳ ಮುಖಾಂತರ ವಿಂಗಡಿಸಿರುವವರು ನಾಟಕ, ರಂಗಭೂಮಿ ಕ್ಷೇತ್ರ ಪುರುಷನದ್ದಾದ್ದರಿಂದ ಪುರುಷನ ಬರಹವೆಂದು ಗುರುತಿಸಿದ್ದಾರೆ.

**೭. ಬರಹ ಏಳು:** ಈ ಬರಹ ಅರ್ಚನ ಎಂ.ಎಸ್. ಅವರ ಪ್ರಾಚೀನ ಭಾರತದ ಇತಿಹಾಸ ಎಂಬ ಪುಸ್ತಕದ ಕೆಲವು ಆಯ್ದ ಭಾಗಗಳು. ಈ ಬರಹ ಚಂದ್ರಗುಪ್ತ ಮೌರ್ಯನ ಆಳ್ವಿಕೆಯ ಅವಧಿಯ ವಿವರಗಳನ್ನು ಒಳಗೊಂಡಿದೆ. ಮೌರ್ಯ ಸಾಮ್ರಾಜ್ಯ ಸ್ಥಾಪನೆ, ಅವನ ದಿಗ್ವಿಜಯಗಳು, ಸೆಲ್ಯೂಕಸ್‌ನೊಂದಿಗಿನ ವಿಜಯ, ಒಪ್ಪಂದಗಳು, ವೈವಾಹಿಕ ಸಂಬಂಧ, ರಾಯಭಾರಿಗಳ ಭೇಟಿ ಮುಂತಾದ ಅಂಶಗಳನ್ನು ಆಧಾರ ಸಹಿತವಾಗಿ ವಿವರಿಸುವ ಬರಹವಾಗಿದೆ. ಪ್ರಾಯೋಗಿಕ ಅಧ್ಯಯನದ ಸಂದರ್ಭದಲ್ಲಿ ೧೮ ಜನ ಇದನ್ನು ಪುರುಷನ ಬರಹವೆಂದು ಗುರುತಿಸಿದ್ದಾರೆ. ಇಬ್ಬರು ಯಾರ ಬರಹವೆಂದು ಗುರುತಿಸಲು ಸಾಧ್ಯವಾಗುತ್ತಿಲ್ಲ ಎಂದು ಗುರುತಿಸಿದ್ದಾರೆ. ಹೀಗೆ ಅವರು ಗುರುತಿಸಲು ನೀಡಿರುವ ಕಾರಣಗಳ ಕೆಲವು ಮಾದರಿಗಳು ಈ ಮುಂದಿನಂತಿವೆ.

**ಅ) ಪುರುಷನ ಬರಹವೆಂದು ಗುರುತಿಸಿದ ಕೆಲವು ಮಾದರಿಗಳು**

೧. ಈ ಬರವಣಿಗೆಯು ಇತಿಹಾಸ ವಸ್ತುವಾಗಿರುವುದರಿಂದ ಮತ್ತು ಪಠ್ಯಪುಸ್ತಕಕ್ಕೆ ಸಂಬಂಧಿಸಿದಂತೆ ಹೆಚ್ಚು ಪುರುಷರು ಬರೆದಿರುವುದರಿಂದ ಇದನ್ನು ಪುರುಷರ ಬರಹ ಎನ್ನಬಹುದು.

೨. ಭಾರತ ಮತ್ತು ಕರ್ನಾಟಕ ಚರಿತ್ರೆಗೆ ಸಂಬಂಧಿಸಿದಂತೆ ಹೆಚ್ಚು ಸಂಶೋಧನೆಗಳು ಮತ್ತು ಅಧ್ಯಯನಗಳನ್ನು ನಡೆಸಿದವರಲ್ಲಿ ಪುರುಷರೇ ಹೆಚ್ಚು. ಅದರಲ್ಲೂ ಪ್ರಾಚೀನ ಭಾರತದ ಪಠ್ಯ ಪುಸ್ತಕಗಳನ್ನು ಪುರುಷರೇ ಹೆಚ್ಚು ಬರೆದಿದ್ದಾರೆ.

೩. ಇತಿಹಾಸದ ಬಗ್ಗೆ ಸಾಮಾನ್ಯವಾಗಿ ಸ್ತ್ರೀ ಮತ್ತು ಪುರುಷರಿಬ್ಬರಿಗೂ ಜ್ಞಾನವಿದ್ದರೂ ಸಹ ಇಲ್ಲಿ ವ್ಯಕ್ತವಾಗಿರುವಂತೆ ಅಂದರೆ 'ಹೊಡೆದು ಆಳುವ ನೀತಿ' ಕುರಿತು ಪುರುಷರು ಮಾತ್ರ ಆಲೋಚಿಸಬಲ್ಲರು ಎಂದು ನನ್ನ ಗ್ರಹಿಕೆ.

೪. ಇತಿಹಾಸವನ್ನು ಓದಿದರೆ ನೂರಕ್ಕೆ ನೂರು ಇದು ಪುರುಷ ಬರಹವಾಗಿದೆ. ಕಾರಣ ಹೆಚ್ಚಾಗಿ ಪುರುಷರೇ ಇತಿಹಾಸವನ್ನು ಬಲ್ಲವರು. ಅನೇಕ ಪುರುಷರೇ ಇತಿಹಾಸ ತಜ್ಞರಾಗಿದ್ದಾರೆ.

೫. ಇಲ್ಲಿ ಬರುವ ನಿರೂಪಣಾ ವಿಧಾನ ಏಕರೀತಿಯಲ್ಲಿ ಇರುವುದರಿಂದ ಹಾಗೂ ಇಲ್ಲಿ ಬರುವ ಎಲ್ಲಾ ಹೆಸರುಗಳು ಪುರುಷ ವ್ಯಕ್ತಿನಾಮಗಳಾದ ಹಿನ್ನೆಲೆಯಲ್ಲಿ ಇದು ಪುರುಷನ ಬರವಣಿಗೆ.

೬. ಈ ಲೇಖನವು ಪ್ರಾಚೀನ ಇತಿಹಾಸಕ್ಕೆ ಸಂಬಂಧ ಪಟ್ಟಿದ್ದರಿಂದ ಮತ್ತು ಇಲ್ಲಿನ ವಿಷಯಗಳ ಅಭಿವ್ಯಕ್ತಿಯನ್ನು ಗಮನಿಸಿದರೆ ಇದು ಪುರುಷ ಬರವಣಿಗೆ ಎಂದು ತಿಳಿಯುತ್ತದೆ.

೭. ಇದು ಪುರುಷರ ಬರಹವಾಗಿದೆ. ಏಕೆಂದರೆ ಇದರ ನಿರೂಪಣೆ ಗಂಡಿನದಾಗಿದೆ.

೮. ಇತಿಹಾಸದಲ್ಲಿ ಅಧಿಕಾರ ಪುರುಷ ಕೇಂದ್ರಿತವಾದದ್ದು. ದಕ್ಷತೆ, ಶೌರ್ಯ, ಸಾಹಸ, ಚಾಣಾಕ್ಷತೆಗಳೆಲ್ಲವೂ ಪುರುಷನಿಗೆ ಸೀಮಿತವಾದುದು. ಈ ಹಿನ್ನೆಲೆಯಲ್ಲಿ ಇಲ್ಲಿ ಪುರುಷ ಪ್ರಾಧಾನ್ಯತೆ ಕಂಡುಬಂದಿದೆ.

೯. ಇತಿಹಾಸಕಾರರು ಹೆಚ್ಚಿನವರು ಪುರುಷರಾಗಿದ್ದಾರೆ. ಆದ್ದರಿಂದ ಇದು ಗಂಡಿನ ಬರಹ.

೧೦. ಈ ಒಂದು ಬರಹ ಗಂಡಿನದ್ದು. ಕಾರಣ ಇತಿಹಾಸದ ಅನೇಕ ಘಟನಾವಳಿಗಳ ಬಗ್ಗೆ ಇತಿಹಾಸಕಾರರು ಅಂದರೆ ಪುರುಷರು ರಚಿಸಿದ್ದಾರೆ.

೧೧. ಪ್ರಾಚೀನ ಭಾರತದ ಇತಿಹಾಸವನ್ನು ಪುರುಷರೇ ರಚಿಸಿದ್ದಾರೆ.

ಮೇಲಿನ ವಿವರಗಳ ಹಿನ್ನೆಲೆಯಲ್ಲಿ ಇದನ್ನು ಪರಿಶೀಲಿಸುವುದಾದರೆ, ಈ ಬರಹವನ್ನು ಹೆಚ್ಚು ಜನ ಇದರಲ್ಲಿನ ವಿಷಯವನ್ನಾಧರಿಸಿ ಪುರುಷನ ಬರವಣಿಗೆ ಎಂದು ಗುರುತಿಸಿರುವುದು ಕಂಡು ಬಂದಿದೆ. ಇತಿಹಾಸ ತಜ್ಞರು ಹೆಚ್ಚು ಜನ ಪುರುಷರು ಎಂಬ ಕಲ್ಪನೆ, ಆಡಳಿತಕ್ಕೆ ಸಂಬಂಧಿಸಿದಂತೆ ಬರೆಯುವವರು ಪುರುಷರು ಎಂಬ ಕಲ್ಪನೆಗಳು ಈ ಬರಹವನ್ನು ಪುರುಷನದು ಎಂದು ನಿರ್ಧರಿಸುವುದಕ್ಕೆ ಕಾರಣವಾಗಿವೆ. ಒಬ್ಬರು ಇಲ್ಲಿ ಬರುವ ನಿರೂಪಣಾ ವಿಧಾನ ಏಕರೀತಿಯಲ್ಲಿರುವುದರಿಂದ ಇದನ್ನು ಪುರುಷನ ಬರಹ ಎಂದು ನಿರ್ಧರಿಸಿರುವುದು ಕಂಡುಬಂದಿದೆ. ಇಬ್ಬರು ಈ ಬರಹವನ್ನು ಯಾರ ಬರಹವೆಂದು ಗುರುತಿಸಲು ಆಗುತ್ತಿಲ್ಲ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಒಟ್ಟಾರೆ ಈ ವಿವರಗಳನ್ನು ಗಮನಿಸಿದರೆ ಇತಿಹಾಸ ರಚಿಸುವ, ಆಡಳಿತ ನಡೆಸುವ ಕ್ಷೇತ್ರ ಪುರುಷನದ್ದು ಎಂಬ ಗ್ರಹಿಕೆ ಇವರು ಈ ರೀತಿ ನಿರ್ಧರಿಸುವುದಕ್ಕೆ ಕಾರಣವಾಗಿದೆ. ಇದು ಮಹಿಳಾ ಬರಹವಾದರೂ ವಿಷಯಾಧಾರಿತವಾಗಿ ಪುರುಷನ ಬರಹವೆಂದು ಗುರುತಿಸಿರುವುದು ಕಂಡುಬಂದಿದೆ.

ಒಟ್ಟಾರೆ ಈ ಅಧ್ಯಯನದ ಫಲಿತಗಳ ಪ್ರಕಾರ ಮುಖ್ಯವಾಗಿ ಮೂರು ಅಂಶಗಳ ಮುಖಾಂತರ ಇದು ಗಂಡಿನ ಬರಹ ಮತ್ತು ಹೆಣ್ಣಿನ ಬರಹ ಎಂದು ಗುರುತಿಸಿರುವುದನ್ನು ಕಾಣಬಹುದು. ಅವುಗಳೆಂದರೆ:

೧. ಈಗಾಗಲೇ ಸಮಾಜದಲ್ಲಿರುವ ಗಂಡು ಮತ್ತು ಹೆಣ್ಣಿನ ಬಗೆಗಿನ ಗ್ರಹಿಕೆಗಳು ಇದು ಪುರುಷನ ಬರಹ ಮತ್ತು ಮಹಿಳೆಯ ಬರಹವೆಂದು ಗುರುತಿಸುವಲ್ಲಿ ಪ್ರಭಾವಿಸುತ್ತಿವೆ.

೨. ನಿರೂಪಣ ವ್ಯಕ್ತಿ ಯಾವ ಲಿಂಗದವರೆಂಬ ಆಧಾರದ ಮೇಲೆ ಗುರುತಿಸಲಾಗಿದೆ.

೩. ಕೆಲವು ಬರವಣಿಗೆಯ ಶೈಲಿಗಳ ಆಧಾರದ ಮೇಲೆ ಗುರುತಿಸಲಾಗಿದೆ.

ಮೊದಲನೆ ಅಂಶವನ್ನು ಪರಿಶೀಲಿಸುವುದಾದರೆ, ಈಗಾಗಲೇ ಸಮಾಜದಲ್ಲಿರುವ ಪುರುಷ ಮತ್ತು ಮಹಿಳೆಯರ ಬಗೆಗಿನ ಕೆಲವು ಗ್ರಹಿಕೆಗಳು ಯಾರ ಬರಹವೆಂದು ನಿರ್ಧರಿಸುವಲ್ಲಿ ಪ್ರಭಾವಿಸುತ್ತಿವೆ. ಮೊದಲ ಬರಹ ವೇಶ್ಯೆಯ ಜೀವನವನ್ನು ಅನಾವರಣ ಮಾಡುತ್ತಿರುವುದರಿಂದ ಇದು ಮಹಿಳಾ ಅಭಿವ್ಯಕ್ತಿ. ಆದ್ದರಿಂದ ಇದನ್ನು ಮಹಿಳಾ ಬರಹವೆಂದು ಅಧ್ಯಯನಕ್ಕೆ ಒಳಪಟ್ಟ ೭೫%ರಷ್ಟು ಜನ ನಿರ್ಧರಿಸಿದ್ದಾರೆ. ಒಬ್ಬ ಗಂಡು ಹೆಣ್ಣಿನ ಭಾವನೆಗಳನ್ನು ಹೇಳಲಾರ ಎಂಬ ಕಾರಣಗಳನ್ನು ನೀಡಿದ್ದಾರೆ.

ಆದರೆ, ಈ ಬರಹ ಪುರುಷನದು. ಪುರುಷನು ಸಹ ಹೆಣ್ಣಿನ ಭಾವನೆಗಳನ್ನು ಅಭಿವ್ಯಕ್ತಿಸಿದರೂ ಸಮಾಜ ಅದನ್ನು ಮಹಿಳೆಯ ಅಭಿವ್ಯಕ್ತಿ ಎಂದು ಪರಿಗಣಿಸುತ್ತಿದೆ. ಎರಡನೇ ಬರಹ ದೇಶದ ಆರ್ಥಿಕತೆಗೆ ಸಂಬಂಧಿಸಿದೆ. ಆದ್ದರಿಂದ ಆ ಬರಹ ಮಹಿಳೆಯಿಂದ ರಚಿತವಾಗಿದ್ದರೂ ಪುರುಷನ ಬರವಣಿಗೆ ಎಂದು ಅಧ್ಯಯನಕ್ಕೆ ಒಳಪಟ್ಟ ೭೦%ರಷ್ಟು ಜನ ನಿರ್ಧರಿಸಿದ್ದಾರೆ. ಮಹಿಳೆಯರಿಗೆ ದೇಶದ ಆರ್ಥಿಕತೆಯ ಜ್ಞಾನವಿರುವುದಿಲ್ಲ ಎಂಬ ಅಂಶ ಇವರು ಈ ರೀತಿ ಗುರುತಿಸಲು ಕಾರಣವಾಗಿದೆ. ಮೂರನೇ ಬರಹ ಹೊಸ ಕೃಷಿಯಂತ್ರದ ಆವಿಷ್ಕಾರವನ್ನು ಕುರಿತ ಬರಹ. ಆದ್ದರಿಂದ ಆ ಬರಹವನ್ನು ಮಹಿಳೆ ಬರೆದಿದ್ದರೂ ಅಧ್ಯಯನಕ್ಕೆ ಒಳಪಟ್ಟ ೬೫%ರಷ್ಟು ಜನ ಪುರುಷನ ಬರವಣಿಗೆ ಎಂದು ಗುರುತಿಸಿದ್ದಾರೆ. ಹೊಸಯಂತ್ರದ ಆವಿಷ್ಕಾರ ಮತ್ತು ಕೃಷಿ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಹೆಣ್ಣಿಗೆ ಜ್ಞಾನವಿರುವುದಿಲ್ಲ ಎಂಬ ಅಂಶ ಅವರು ಈ ರೀತಿ ನಿರ್ಧರಿಸಲು ಪ್ರಭಾವ ಬೀರಿದೆ. ನಾಲ್ಕನೇ ಬರಹ ಒಬ್ಬ ಆಧುನಿಕ ಪುರುಷನ ಮಾನಸಿಕ ತುಮುಲಗಳನ್ನು ಅಭಿವ್ಯಕ್ತಿಸುವ ಬರಹ. ಇದನ್ನು ಮಹಿಳೆ ಬರೆದಿದ್ದರೂ ಪುರುಷನ ವಿಚಾರಗಳನ್ನು ಒಳಗೊಂಡಿರುವುದರಿಂದ, ಇದನ್ನು ಅಧ್ಯಯನಕ್ಕೆ ಒಳಪಟ್ಟ ೮೫%ರಷ್ಟು ಜನ ಪುರುಷನ ಬರಹವೆಂದು ನಿರ್ಧರಿಸಿದ್ದಾರೆ. ಸಾಂಪ್ರದಾಯಿಕ ಕಟ್ಟುಪಾಡುಗಳಿಂದ ಬಿಡಿಸಿಕೊಳ್ಳಲು ಮಾಂಸಹಾರ, ಮದ್ಯವನ್ನು ಸೇವಿಸುವ ಮನಃಸ್ಥಿತಿ ಹಾಗೂ ಈ ರೀತಿಯ ನಡವಳಿಕೆ ತಪ್ಪು ಎಂಬ ಭಾವನೆ ಅವನ ಆತ್ಮಸಾಕ್ಷಿಯನ್ನು ಕಾಡುತ್ತಿರುವ ಹಿನ್ನೆಲೆಯಲ್ಲಿ ಒಬ್ಬ ನವ್ಯ ಸಾಹಿತ್ಯದ ನಾಯಕನ ಪಾತ್ರದಂತಿರುವ ಈ ಚಿತ್ರಣ ಪುರುಷನ ಬರಹವೆಂದು ನಿರ್ಧರಿಸುವಲ್ಲಿ ಪ್ರಭಾವ ಬೀರಿದೆ. ಒಬ್ಬ ಮಹಿಳೆ ಪುರುಷನ ಈ ರೀತಿಯ ತುಮುಲಗಳನ್ನು ಸಮರ್ಥವಾಗಿ ಚಿತ್ರಿಸಿದ್ದರೂ ಅದು ಪುರುಷನ ಅಭಿವ್ಯಕ್ತಿಯೆಂದೇ ಗ್ರಹಿಸಿರುವುದು ಇಲ್ಲಿ ಕಂಡುಬಂದಿದೆ.

ಐದನೇ ಬರಹ ಸ್ತ್ರೀವಾದದ ಧೋರಣೆಗಳ ಹಿನ್ನೆಲೆಯಲ್ಲಿ ರಚಿತವಾಗಿರುವ ಬರಹ. ಈ ಬರಹವನ್ನು ಒಬ್ಬ ಪುರುಷ ರಚಿಸಿದ್ದರೂ ಸ್ತ್ರೀವಾದದ ಧೋರಣೆಗಳನ್ನು ಒಳಗೊಂಡಿರುವುದರಿಂದ, ಮಹಿಳಾ ಬರಹವೆಂದು ಅಧ್ಯಯನಕ್ಕೆ ಒಳಪಟ್ಟ ೮೫%ರಷ್ಟು ಜನ ನಿರ್ಧರಿಸಿದ್ದಾರೆ. ಹೆಣ್ಣಿನ ಕಟ್ಟುಪಾಡುಗಳು, ಲಿಂಗತಾರತಮ್ಯವನ್ನು ಕುರಿತು ಪುರುಷ ಸಮರ್ಥವಾಗಿ ಬರೆಯಲಾರ ಎಂಬ ನಿಲುವು ಇಲ್ಲಿ ಪ್ರಭಾವಿಸಿರುವುದು ಕಂಡುಬಂದಿದೆ.

ಆರನೇ ಬರಹವು ಮಕ್ಕಳ ನಾಟಕವನ್ನು ಕುರಿತ ಮಹಿಳೆಯ ಬರಹವಾಗಿದೆ. ಇದನ್ನು ಅಧ್ಯಯನಕ್ಕೆ ಒಳಪಟ್ಟ ೬೫%ರಷ್ಟು ಜನ ಮಹಿಳಾ ಬರಹವೆಂದು ಗುರುತಿಸಿದ್ದಾರೆ. ಇದಕ್ಕೆ ಇವರು ನೀಡಿರುವ ಕಾರಣ ಭಾವನಾತ್ಮಕ ನೆಲೆಯಲ್ಲಿ ತಾಯಿ ಮತ್ತು ಮಕ್ಕಳ ಸಂಬಂಧವನ್ನು ಗುರುತಿಸಿ ಈ ನಿಲುವು ತಾಳಿದ್ದಾರೆ. ೨೫%ರಷ್ಟು ಜನ ಇದನ್ನು ಪುರುಷನ ಬರಹವೆಂದು ಗುರುತಿಸಿದ್ದಾರೆ. ಅದಕ್ಕೆ ಅವರು ನೀಡಿರುವ ಕಾರಣವೆಂದರೆ ನಾಟಕ, ರಂಗಭೂಮಿ ಪುರುಷನ ಕ್ಷೇತ್ರವಾದ್ದರಿಂದ ಇದು ಪುರುಷನ ಬರಹವೆಂದಿದ್ದಾರೆ. ಇಲ್ಲಿ ಕೂಡ ಸಮಾಜದಲ್ಲಿರುವ ಮಹಿಳೆ ಮತ್ತು ಪುರುಷರ ಕಾರ್ಯಕ್ಷೇತ್ರಗಳ ವಿಂಗಡಣೆಯ ಅಂಶ ಪ್ರಭಾವಿಸಿದೆ.

ಏಳನೇ ಬರಹ ಪ್ರಾಚೀನ ಭಾರತದ ಇತಿಹಾಸವನ್ನು ತಿಳಿಸುವ ಮಹಿಳೆಯ ಬರಹವಾದರೂ ಅಧ್ಯಯನಕ್ಕೆ ಒಳಪಟ್ಟ ೯೦%ರಷ್ಟು ಜನ ಪುರುಷನ ಬರಹವೆಂದು ಗುರುತಿಸಿದ್ದಾರೆ. ಇತಿಹಾಸದ ತಿಳಿವಳಿಕೆ

ಹೆಚ್ಚಾಗಿ ಪುರುಷರಿಗೆ ಇರುತ್ತದೆ ಎಂಬ ಗ್ರಹಿಕೆ ಅವರು ಈ ರೀತಿ ಗುರುತಿಸಲು ಪ್ರಭಾವಿಸಿರುವುದನ್ನು ಕಾಣಬಹುದು.

ಎರಡನೇ ಅಂಶವನ್ನು ಪರಿಶೀಲಿಸುವುದಾದರೆ, ಬರಹದ ನಿರೂಪಣೆ ಯಾರಿಂದ ಆಗುತ್ತಿದೆ ಎಂಬುದರ ಆಧಾರದ ಮೇಲೆ ಪುರುಷ ಅಥವಾ ಮಹಿಳೆಯ ಬರಹವೆಂದು ನಿರ್ಧರಿಸುತ್ತಿದ್ದಾರೆ. ಬರಹ ಒಂದರಲ್ಲಿ ಮಹಿಳೆಯ ಪಾತ್ರಧಾರಿ ಕತೆಯನ್ನು ನಿರೂಪಿಸುತ್ತಿರುವುದರಿಂದ ಇದು ಮಹಿಳಾ ಬರಹವೆಂದು ನಿರ್ಧರಿಸಿದ್ದಾರೆ. ಒಬ್ಬ ಪುರುಷ ತನ್ನ ಬರವಣಿಗೆಯಲ್ಲಿ ಮಹಿಳಾ ನಿರೂಪಣೆಯ ವಿಧಾನವನ್ನು ಬಳಸಿದ್ದರೂ ಅದು ಮಹಿಳಾ ಬರಹವೆಂದು ನಿರ್ಧರಿಸಿದ್ದಾರೆ. ನಾಲ್ಕನೇ ಬರಹದಲ್ಲಿ ಒಬ್ಬ ಮಹಿಳಾ ಬರಹಗಾರ್ತಿ ಪುರುಷನ ನಿರೂಪಣಾ ವಿಧಾನವನ್ನು ಬಳಸಿದ್ದರೂ ಅದು ಪುರುಷನ ಅಭಿವ್ಯಕ್ತಿಯಾಗಿರುವುದರಿಂದ ಅದನ್ನು ಪುರುಷನ ಬರಹವೆಂದು ನಿರ್ಧರಿಸಿದ್ದಾರೆ.

ಮೂರನೇ ಅಂಶವನ್ನು ಪರಿಶೀಲಿಸುವುದಾದರೆ, ಅಧ್ಯಯನಕ್ಕೆ ಒಳಪಟ್ಟ ಅಭ್ಯರ್ಥಿಗಳು ಪುರುಷ ಮತ್ತು ಮಹಿಳಾ ಬರಹದ ಕೆಲವು ಶೈಲಿಯ ಆಧಾರದ ಮೇಲೆ ಪುರುಷನ ಬರಹ ಮತ್ತು ಮಹಿಳಾ ಬರಹವೆಂದು ಗುರುತಿಸಿದ್ದಾರೆ. ಎರಡನೇ ಬರಹವನ್ನು ಶೈಲಿಯ ಆಧಾರದ ಮೇಲೆ ಮಹಿಳಾ ಬರಹವೆಂದು ಒಬ್ಬ ಅಭ್ಯರ್ಥಿ ಗುರುತಿಸಿದ್ದಾರೆ. ಈ ಬರಹ ವರದಿ ರೀತಿಯಲ್ಲಿದೆ ಹಾಗೂ ಸರಳ ವಾಕ್ಯಗಳಿಂದ ಕೂಡಿದೆ ಎಂಬುದು ಅವರ ನಿಲುವು. ಈ ಬರಹ ಪತ್ರಿಕಾ ವರದಿಗೆ ಸಂಬಂಧಿಸಿದ ಬರಹವಾದ್ದರಿಂದ ವರದಿ ರೂಪದಲ್ಲಿದೆ ಹಾಗೂ ಇದು ಒಂದು ವಿಷಯವನ್ನು ವಸ್ತುನಿಷ್ಠವಾಗಿ ನಿರೂಪಿಸುತ್ತಿರುವುದರಿಂದ ಸರಳ ವಾಕ್ಯಗಳಿಂದ ರಚಿತವಾಗಿರಬಹುದು. ಒಂದು ವಿಷಯವನ್ನು ವಸ್ತುನಿಷ್ಠವಾಗಿ ವರದಿ ಮಾಡುವ ಪುರುಷ ಅಥವಾ ಮಹಿಳಾ ಬರಹ ಯಾರದ್ದೇ ಆದರೂ ಈ ರೀತಿ ರಚಿತವಾಗುತ್ತದೆ. ಇಲ್ಲಿ ಪುರುಷ ಬರಹಗಾರ ಅಥವಾ ಮಹಿಳಾ ಬರಹಗಾರ್ತಿ ಎಂಬುದಕ್ಕಿಂತ ಒಂದು ವಿಷಯವನ್ನು ವಸ್ತುನಿಷ್ಠವಾಗಿ ದಾಖಲಿಸುವಿಕೆ, ನಿರೂಪಿಸುವಿಕೆ ಮುಖ್ಯವಾಗುತ್ತದೆ.

ಬರಹ ನಾಲ್ಕರ ಬರಹದ ಶೈಲಿಯನ್ನು ವಿವರಿಸಿದ ಒಬ್ಬ ಅಭ್ಯರ್ಥಿ ನಿಧಾನಗತಿಯ ವಿವರಣೆ ಇರುವುದರಿಂದ ಇದನ್ನು ಮಹಿಳಾ ಬರಹವೆಂದು ಗುರುತಿಸಿದ್ದಾರೆ. ಇವರ ನಿಲುವಿನ ಪ್ರಕಾರ ಪುರುಷನ ಬರವಣಿಗೆ ವೇಗದ ಗತಿಯನ್ನು ಹೊಂದಿರುತ್ತದೆ ಎಂದಾಗುತ್ತದೆ. ಆದರೆ, ನಿಧಾನಗತಿಯಲ್ಲಿ ಸಾಗುವ ಎಲ್ಲ ಬರಹಗಳು ಮಹಿಳಾ ಬರಹಗಳೆಂದು, ವೇಗದ ಗತಿಯಲ್ಲಿ ಸಾಗುವ ಬರಹಗಳನ್ನು ಪುರುಷ ಬರಹಗಳೆಂದು ಪರಿಗಣಿಸಲು ಆಗುವುದಿಲ್ಲ. ನಿಧಾನಗತಿಯ ಬರಹವನ್ನು ಪುರುಷರು ಮಾಡಿರುವುದನ್ನು ಗುರುತಿಸಲು ಸಾಧ್ಯವಿದೆ. ಬರಹ ಆರರ ಬರವಣಿಗೆಯ ಶೈಲಿಯನ್ನು ಒಬ್ಬರು ಈ ರೀತಿ ಗುರುತಿಸಿದ್ದಾರೆ. ಈ ಬರಹ ತುಂಬ ವಿವರಣಾತ್ಮಕವಾಗಿ ಬರೆದ ಕಾರಣ ಇದು ಪುರುಷನ ಬರಹವೆಂದು ಮಹಿಳೆಯ ಬರಹವನ್ನು ಗುರುತಿಸಿದ್ದಾರೆ. ಇವರ ಗ್ರಹಿಕೆಯ ಪ್ರಕಾರ, ಒಂದು ವಿಷಯದ ಸಂಪೂರ್ಣ ವಿವರಗಳು ಗಂಡಿಗೆ ಮಾತ್ರ ತಿಳಿದಿರುವುದರಿಂದ, ಅವನು ವಿವರಣಾತ್ಮಕವಾಗಿ ಬರೆಯಲು ಸಾಧ್ಯ ಎಂಬುದಾಗಿದೆ.

ಆದರೆ, ಈ ಬರಹವು ಮಹಿಳೆಯದಾಗಿರುವುದರಿಂದ ಒಂದು ವಿಷಯವನ್ನು ವಿವರವಾಗಿ ವಿವರಿಸಲು ಅವಳಿಗೂ ಸಾಧ್ಯ ಎಂದಾಗುತ್ತದೆ. ಇವರ ನಿಲುವು ಇಲ್ಲಿ ಸಂಪೂರ್ಣ ವಿರುದ್ಧವಾಗಿಬಿಡುತ್ತದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಒಟ್ಟಾರೆ ಈ ಅಧ್ಯಯನವನ್ನು ಪರಿಶೀಲಿಸುವುದಾದರೆ, ಈಗಾಗಲೇ ಸಮಾಜದಲ್ಲಿರುವ ಪುರುಷ ಮತ್ತು ಮಹಿಳೆಯರ ಬಗೆಗಿನ ಕೆಲವು ಗ್ರಹಿಕೆಗಳು ಇದು ಮಹಿಳಾ ಬರಹ, ಇದು ಪುರುಷನ ಬರಹ ಎಂದು ನಿರ್ಧರಿಸುವಲ್ಲಿ ಪ್ರಭಾವಿಸಿರುವುದು ಕಂಡುಬಂದಿದೆ.

**ಉಲ್ಲೇಖ**

೧. ಶ್ರೀಮತಿ ಎಚ್.ಎಸ್., ೨೦೦೯, ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ, ಪು.ಸಂ.೧೮೦-೧೮೧.

## ಅಧ್ಯಾಯ-ಆರು

# ಸಮಾರೋಪ

### ಅಧ್ಯಯನದ ಫಲಿತಗಳು

'ಕನ್ನಡ ಭಾಷೆ: ಲಿಂಗಸಂಬಂಧಿ ಆಯಮಗಳು' ಎಂಬ ಶೀರ್ಷಿಕೆಯಡಿಯಲ್ಲಿ ಸಮಜೋಭಾಷಿಕ ಅಧ್ಯಯನ ವಿಧಾನದ ಮುಖಾಂತರ ಈ ಅಧ್ಯಯನವನ್ನು ಕೈಗೊಳ್ಳಲಾಯಿತು. ಈ ಅಧ್ಯಯನ ಭಾಷೆ ಮತ್ತು ಲಿಂಗಸಂಬಂಧ ಸ್ವರೂಪವನ್ನು ಎರಡು ನೆಲೆಗಳಲ್ಲಿ ಪರಿಶೀಲಿಸುವ ದೃಷ್ಟಿಕೋನವನ್ನು ಹೊಂದಲಾಗಿತ್ತು. ಅವುಗಳೆಂದರೆ:

೧. ಸಮುದಾಯಗಳಲ್ಲಿನ ಲಿಂಗಸಂಬಂಧಿ ಗ್ರಹಿಕೆಗಳು, ನಿಲುವುಗಳು, ಧೋರಣೆಗಳು ಹೇಗೆ ಭಾಷೆಯಲ್ಲಿ ಪ್ರತಿಬಿಂಬವಾಗುತ್ತವೆ ಎಂಬುದನ್ನು ಗುರುತಿಸುವುದು.

೨. ಸ್ತ್ರೀವಾದಿಗಳು ಭಾಷೆ ಮತ್ತು ಲಿಂಗತಾರಮ್ಯದ ಸ್ವರೂಪವನ್ನು ವಿವರಿಸುತ್ತಿರುವ ನೆಲೆಗಳು ಯಾವುವು ಎಂಬುದನ್ನು ಪರಿಶೀಲಿಸುವುದು.

ಈ ಅಧ್ಯಯನಕ್ಕೆ ಪೂರಕವಾಗಿ ಸ್ತ್ರೀವಾದಿಗಳ ಕೆಲವು ಚರ್ಚೆಗಳನ್ನು ಬಳಸಿಕೊಳ್ಳಲಾಯಿತು. ಸ್ತ್ರೀವಾದಿಗಳು ಲಿಂಗತಾರತಮ್ಯದ ನೆಲೆಗಳನ್ನು ಪರಿಶೀಲಿಸಲು ಭಾಷಿಕ ಆಕರಗಳನ್ನು ಯಾವ ಮಾನದಂಡಗಳ ಮುಖಾಂತರ ಬಳಸಿಕೊಳ್ಳುತ್ತಿದ್ದಾರೆ ಎಂಬುದನ್ನು ಪರಿಶೀಲಿಸುವ ಅಗತ್ಯ ಈ ಅಧ್ಯಯನಕ್ಕಿತ್ತು. ಸಮುದಾಯಗಳಲ್ಲಿನ ಲಿಂಗತಾರತಮ್ಯದ ಬಹುತ್ವದ ನೆಲೆಗಳನ್ನು ಪರಿಗಣಿಸಲಾಗುತ್ತಿದೆಯೇ? ಅಥವಾ ಏಕಮುಖವಾಗಿ ಅವರ ಅಧ್ಯಯನಗಳು ಸಾಗುತ್ತಿವೆಯೇ? ಎಂಬದನ್ನು ಪರಿಶೀಲಿಸುವ ಹಿನ್ನೆಲೆಯಲ್ಲಿ ಅಧ್ಯಯನವನ್ನು ಕೈಗೊಳ್ಳಲಾಗಿತ್ತು. ಈ ಅಧ್ಯಯನ ಕೆಲವು ಪ್ರಮುಖ ಉದ್ದೇಶಗಳನ್ನು ಒಳಗೊಂಡಿತ್ತು. ಆ ಉದ್ದೇಶಗಳ ಮುಖಾಂತರ ಅಧ್ಯಯನದಿಂದ ಕಂಡುಕೊಂಡ ಫಲಿತಗಳು ಈ ಮುಂದಿನಂತಿವೆ.

ಈ ಅಧ್ಯಯನದ ಮೊದಲ ಉದ್ದೇಶವು ಲಿಂಗ ಮತ್ತು ಭಾಷೆಯ ಅಂತರ್‌ಸಂಬಂಧಗಳನ್ನು ಸ್ತ್ರೀವಾದಿಗಳು ಗ್ರಹಿಸುತ್ತಿರುವ ಕ್ರಮಗಳು ಯಾವುವು? ಎಂಬುದನ್ನು ಪರಿಶೀಲಿಸುವುದಾಗಿತ್ತು. ಭಾಷೆಯು ತಾರತಮ್ಯವನ್ನು ಪೋಷಿಸುವ ಕೆಲಸವನ್ನು ಮುಂದುವರೆಸುತ್ತಿದೆ ಎಂದು ಸ್ತ್ರೀವಾದಿಗಳ ಎಲ್ಲ ಚರ್ಚೆಗಳು ಆರಂಭವಾಗುತ್ತವೆ. ಸಮುದಾಯಗಳಲ್ಲಿನ ಲಿಂಗತಾರತಮ್ಯದ ನಿಲುವು, ಧೋರಣೆಗಳು ಭಾಷಾಬಳಕೆಯ ಕೆಲವು ನೆಲೆಗಳಲ್ಲಿ ಪ್ರತಿಬಿಂಬಿತವಾಗುತ್ತಿರುತ್ತವೆ. ಹಾಗೂ ಭಾಷೆಯ ಬಳಕೆಯನ್ನು ಕೆಲವು ಸಂದರ್ಭಗಳಲ್ಲಿ ನಿಯಂತ್ರಿಸುತ್ತಿರುತ್ತವೆ ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಸ್ತ್ರೀವಾದಿಗಳು ಸಮಾಜದಲ್ಲಿರುವ ಲಿಂಗತಾರತಮ್ಯವನ್ನು ವ್ಯಕ್ತಪಡಿಸಲು ಭಾಷೆಯ ಬಳಕೆಯ ಕೆಲವು ಸಂದರ್ಭಗಳ ಕೆಲವು ಆಯ್ಕೆಗಳನ್ನು ಮಾತ್ರ ಆಯ್ದುಕೊಂಡು ಚರ್ಚಿಸುತ್ತಿದ್ದಾರೆ ಎಂಬುದನ್ನು ಅಧ್ಯಯನದಿಂದ ಗುರುತಿಸಿಕೊಳ್ಳಲಾಗಿದೆ. ಲಿಂಗಸಂಬಂಧಿ ನೆಲೆಯಲ್ಲಿ ಬಳಕೆಯಾಗುತ್ತಿರುವ ಭಾಷಾಬಳಕೆಯಲ್ಲಿರುವ ಬಹುತ್ವದ ನೆಲೆಗಳನ್ನು ಹಾಗೂ ಮಹಿಳೆಯರಲ್ಲೇ ವಿವಿಧ ಜಾತಿ, ವರ್ಗಕ್ಕನುಗುಣವಾಗಿ ಬಳಕೆಯಾಗುತ್ತಿರುವ ಬಹುಮಾದರಿಯ ಭಾಷಾಬಳಕೆಯನ್ನು ಪರಿಗಣಿಸುತ್ತಿಲ್ಲ ಎಂಬುದನ್ನು ಕಂಡುಕೊಳ್ಳಲಾಗಿದೆ.

ಸಮುದಾಯಗಳಲ್ಲಿ ವಿಭಜಿತ ಗ್ರಹಿಕೆಗಳು ಯಾವಾಗಲೂ ಎರಡು ನೆಲೆಗಳಲ್ಲಿರುತ್ತವೆ. ಒಂದು ಸಹಚರ್ಯದ ನೆಲೆ ಮತ್ತೊಂದು ವಿರೋಧದ ನೆಲೆ. ಸಹಚರ್ಯದ ನೆಲೆಯಲ್ಲಿ ಒಂದು ಮತ್ತೊಂದರ ಅಸ್ತಿತ್ವವನ್ನು ಅಲ್ಲಗಳೆಯುವ ಹಾಗಿಲ್ಲ. ಎರಡಕ್ಕೂ ತನ್ನದೇ ಅಸ್ತಿತ್ವವಿರುತ್ತದೆ. ಅಥವಾ ಪರಸ್ಪರ ಪೂರಕವಾಗಿರಬಹುದು. ಉದಾಹರಣೆ: ಭೂಮಿ–ಆಕಾಶ, ರಾತ್ರಿ–ಹಗಲು, ಗಂಡು–ಹೆಣ್ಣು, ಕಪ್ಪು–ಬಿಳಿ ಇತ್ಯಾದಿ. ದ್ವಿಮಾನದ ಪರಿಕಲ್ಪನೆಗಳು ಮೊದಲು ವೈರುಧ್ಯಗಳಿಂದ ಕೂಡಿರಲಿಲ್ಲ. ಸಹಚರ್ಯದ ನೆಲೆಗಳಲ್ಲಿ ಇರುವವುಗಳನ್ನು ಒಂದಕ್ಕೊಂದು ಹೋಲಿಕೆ ಮಾಡಲು ತೊಡಗಿದ ನಂತರ ವಿರೋಧದ ನೆಲೆಯ ಗ್ರಹಿಕೆಗಳು ಪ್ರಾರಂಭವಾಗುತ್ತವೆ. ಸ್ತ್ರೀವಾದಿಗಳ ದ್ವಿಮಾನ ಕಲ್ಪನೆಯು ಲಿಂಗ ವಿಭಜನೆಯನ್ನು ಸಹಚರ್ಯದ ನೆಲೆಗಿಂತ ವಿರೋಧದ ನೆಲೆಯಲ್ಲಿ ಗ್ರಹಿಸುತ್ತಿರುವುದನ್ನು ಅಧ್ಯಯನದ ಮುಖಾಂತರ ಕಂಡುಕೊಳ್ಳಲಾಗಿದೆ. ಯಾವುದು ಗಂಡು ಅಲ್ಲವೋ, ಅದು ಹೆಣ್ಣು ಎಂಬ ನಿಟ್ಟಿನಲ್ಲಿ ಇವರ ಅಧ್ಯಯನಗಳು ಸಾಗುತ್ತಿರುವುದನ್ನು ಗುರುತಿಸಿಕೊಳ್ಳಲಾಗಿದೆ.

ಭಾಷೆಗೂ ಮತ್ತು ಅಧಿಕಾರ ಕೇಂದ್ರಗಳಿಗೂ ಇರುವ ಸಂಬಂಧದ ಸ್ವರೂಪ ಯಾವ ನೆಲೆಯದು? ಅದನ್ನು ಸ್ತ್ರೀವಾದಿಗಳು ಗ್ರಹಿಸುತ್ತಿರುವ ನೆಲೆಗಳು ಯಾವುವು ಎಂಬುದನ್ನು ಪರಿಶೀಲಿಸುವ ಮತ್ತೊಂದು ಉದ್ದೇಶವನ್ನು ಈ ಅಧ್ಯಯನ ಹೊಂದಿತ್ತು. ಸಾಮಾಜಿಕ ಅಸಮಾನತೆಗೂ ಲಿಂಗತಾರತಮ್ಯಕ್ಕೂ ಆ ಸಮಾಜದಲ್ಲಿನ ಕೆಲವು ಅಧಿಕಾರ ಕೇಂದ್ರಗಳ ಪಾತ್ರ ಮುಖ್ಯವಾಗಿರುತ್ತದೆ ಎಂಬುದು ಸ್ತ್ರೀವಾದಿಗಳ ವಾದ. ಭಾಷೆಗೂ ಮತ್ತು ಅಧಿಕಾರಕ್ಕೂ ಇರುವ ಸಂಬಂಧವನ್ನು ಸ್ತ್ರೀವಾದಿಗಳು ಅಧಿಕಾರದ ಕೇಂದ್ರವಾಗಿ ಪುರುಷನನ್ನು, ಅಧೀನ ನೆಲೆಯಲ್ಲಿ ಸ್ತ್ರೀಯನ್ನು ತಂದು ಚರ್ಚಿಸುತ್ತಿರುವುದು ಕಂಡುಬಂದಿದೆ. ಇದರಿಂದಾಗಿ ಪುರುಷನ ಭಾಷೆ ಅಧಿಕಾರಯುತವಾಗಿ, ಮಹಿಳೆಯ ಭಾಷೆ ಅಧೀನ ನೆಲೆಯಲ್ಲಿದೆ ಎಂದು ತಮ್ಮ

ನಿಲುವನ್ನು ಮಂಡಿಸುತ್ತಾರೆ. ಸಾಮಾಜಿಕವಾಗಿ ಅಧಿಕಾರದ ಪರಿಕಲ್ಪನೆ ವರ್ಗ, ಜಾತಿ, ವಿದ್ಯಾಭ್ಯಾಸ, ಹೀಗೆ ವಿವಿಧ ಆಯಾಮಗಳಲ್ಲಿ ಏಕಮುಖವಾಗಿ ಚಲಿಸುವುದಿಲ್ಲ. ಅಧಿಕಾರ ವರ್ಗಗಳ ಮತ್ತು ಭಾಷೆಯ ನಡುವಿನ ಸಂಬಂಧ ವೈಯಕ್ತಿಕ ಸಂದರ್ಭ ಹಾಗೂ ಸಾಮಾಜಿಕ ಸಂದರ್ಭಗಳಲ್ಲಿ ಭಿನ್ನವಾಗುತ್ತಿರುತ್ತದೆ. ಉದಾಹರಣೆಗೆ ಗಂಡ ಹೆಂಡತಿಯರ ವೈಯಕ್ತಿಕ ಸಂದರ್ಭದಲ್ಲಿ ಹೆಂಡತಿ ಗಂಡನನ್ನು ಏಕವಚನದಲ್ಲಿ ಸಂಬೋಧಿಸುತ್ತಿರಬಹುದು. ಸಾಮಾಜಿಕ ಸಂದರ್ಭದಲ್ಲಿ ಬಹುವಚನಗಳನ್ನು ಬಳಸುತ್ತಿರುತ್ತಾಳೆ. ಒಬ್ಬ ಹೆಣ್ಣು ಕುಟುಂಬದಲ್ಲಿ ಪುರುಷನ ಅಧಿಕಾರದ ಹಿಡಿತಕ್ಕೆ ಒಳಪಟ್ಟಿರಬಹುದು. ಜೊತೆಗೆ ಆಕೆ ಸಾಮಾಜಿಕವಾಗಿ ಜಾತಿವಾದಿಯಾಗಿರಬಹುದು. ಇಂತಹ ಸಂದರ್ಭದಲ್ಲಿ ಅಧಿಕಾರದ ಅರ್ಥ ವ್ಯಾಪ್ತಿ ಬದಲಾಗುತ್ತದೆ. ಏಕಕಾಲದಲ್ಲಿ ಆಕೆ ಪುರುಷನ ಅಧೀನಕ್ಕೆ ಒಳಪಟ್ಟರೂ ಜಾತಿಯ ಕಾರಣದಿಂದ ಮತ್ತೊಂದು ಜಾತಿಯವರ ಮೇಲೆ ಅಧಿಕಾರ ಚಲಾಯಿಸುತ್ತಿರುತ್ತಾಳೆ. ಈ ರೀತಿಯ ದ್ವಿಸ್ತರತೆ ಭಾಷೆ ಮತ್ತು ಅಧಿಕಾರ ಶಕ್ತಿಗಳ ಸಂಬಂಧಗಳನ್ನು ಸಾಮಾಜಿಕವಾಗಿ ದ್ವಿಮುಖಗೊಳಿಸುತ್ತಿರುತ್ತದೆ ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಸಮಾಜದಲ್ಲಿ ಈಗಾಗಲೇ ಇರುವ ಸಿದ್ಧಾಂತಗಳನ್ನು ಭಾಷೆ ಮತ್ತು ಲಿಂಗತಾರತಮ್ಯದ ಚೌಕಟ್ಟಿಗೆ ಅನ್ವಯಿಸಿ ವಿವರಿಸುವಲ್ಲಿ ಎದುರಾಗುತ್ತಿರುವ ತೊಡಕುಗಳನ್ನು ಪರಿಶೀಲಿಸುವ ಮತ್ತೊಂದು ಉದ್ದೇಶವನ್ನು ಈ ಅಧ್ಯಯನವು ಒಳಗೊಂಡಿತ್ತು. ಮಾರ್ಕ್ಸ್‌ವಾದವು ಸಮಾಜವನ್ನು ಪರಸ್ಪರ ಶತೃತ್ವವುಳ್ಳ ಎರಡು ವರ್ಗಗಳ ರಚನೆ ಎಂದು ಗ್ರಹಿಸುತ್ತದೆ. ಒಂದು ಅಧಿಕಾರವರ್ಗ ಮತ್ತೊಂದು ದುಡಿಯುವ ವರ್ಗ. ಈ ಮಾರ್ಕ್ಸ್‌ವಾದವನ್ನು ಭಾಷೆ ಮತ್ತು ಲಿಂಗಸಂಬಂಧಗಳ ಚರ್ಚೆಗೆ ಸ್ತ್ರೀವಾದಿಗಳು ಬಳಸಿಕೊಳ್ಳುತ್ತಾರೆ. ಸ್ತ್ರೀವಾದಿಗಳು ಅಧಿಕಾರವರ್ಗದ ಪ್ರತಿನಿಧಿಯಾಗಿ ಗಂಡಸರನ್ನು ಪರಿಗಣಿಸುತ್ತಾರೆ. ಭಾಷೆಯು ಗಂಡಿನ ಹಿಡಿತದಲ್ಲಿದೆ, ಪುರುಷನ ಹಿತಾಸಕ್ತಿಗೆ ಅನುಗುಣವಾಗಿ ರಚನೆಯಾಗಿದೆ ಎಂದು ತಮ್ಮ ನಿಲುವನ್ನು ಮಂಡಿಸುತ್ತಾರೆ. ಗಂಡು ಮತ್ತು ಹೆಣ್ಣನ್ನು ಆಳುವ ವರ್ಗ ಮತ್ತು ಅಧೀನ ವರ್ಗಗಳ ವ್ಯಾಪ್ತಿಯಲ್ಲಿ ತಂದು ಚರ್ಚಿಸಲು ಸಾಧ್ಯವಾಗುವುದಿಲ್ಲ. ವರ್ಗದ ಕಲ್ಪನೆಗೂ ಲಿಂಗದ ಕಲ್ಪನೆಗೂ ವ್ಯತ್ಯಾಸವಿದೆ. ಆಳುವ ವರ್ಗದಲ್ಲಿ ಹೆಣ್ಣಿನ ಅಸ್ತಿತ್ವವಿದೆ. ಅಧೀನ ವರ್ಗದಲ್ಲೂ ಹೆಣ್ಣಿನ ಅಸ್ತಿತ್ವವಿರುತ್ತದೆ ಎಂಬುದನ್ನು ಸ್ತ್ರೀವಾದಿಗಳು ಗ್ರಹಿಸುತ್ತಿಲ್ಲ ಎಂಬ ಅಂಶವನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಸಫೀರ್ ಮತ್ತು ವೂರ್ಫ್ ಪ್ರಮೇಯವನ್ನು ಸ್ತ್ರೀವಾದಿಗಳು ಅಳವಡಿಸಿಕೊಳ್ಳುತ್ತಾರೆ. ಇವರ ನಿಲುವಿನ ಪ್ರಕಾರ ಎರಡು ಭಿನ್ನಭಾಷಿಕ ಸಮುದಾಯಗಳಲ್ಲಿನ ಭಿನ್ನ ಗ್ರಹಿಕೆಗಳನ್ನು ಕುರಿತದ್ದು. ಅಂದರೆ ಒಂದೇ ಸಂಗತಿಯನ್ನು ಭಿನ್ನ ಸಂಸ್ಕೃತಿಗಳು ಭಿನ್ನವಾಗಿ ಗ್ರಹಿಸುತ್ತವೆ ಎಂಬುದು. ಇದನ್ನು ಸ್ತ್ರೀವಾದಿಗಳು ಒಂದೇ ಭಾಷಿಕ ಸಮುದಾಯದಲ್ಲಿನ ಗಂಡು ಮತ್ತು ಹೆಣ್ಣಿನ ಗ್ರಹಿಕೆಗಳಿಗೆ ಅನ್ವಯಿಸಿ ಅವರ ಗ್ರಹಿಕೆಗಳು ಭಿನ್ನವಾಗಿರುತ್ತವೆ ಹಾಗೂ ಈ ಭಿನ್ನಗ್ರಹಿಕೆ ಭಾಷೆಯಿಂದ ಮಾತ್ರ ಸಾಧ್ಯ ಎನ್ನುತ್ತಾರೆ. ಭಿನ್ನ ಭಾಷಿಕ ವಲಯಗಳಲ್ಲಿನ ಭಿನ್ನತೆಗೂ, ಒಂದೇ ಭಾಷಿಕ ವಲಯದಲ್ಲಿನ ಗಂಡು-ಹೆಣ್ಣಿನ ಗ್ರಹಿಕೆಗೂ ನಂಟನ್ನು

ಕಲ್ಪಿಸುತ್ತಾ ತಮ್ಮ ವಾದವನ್ನು ಸ್ತ್ರೀವಾದಿಗಳು ಮಂಡಿಸುತ್ತಾರೆ. ಭಾಷಾವಿಜ್ಞಾನಿ ಸಸ್ಸೂರ್ ಅವರ ಕೆಲವು ವಿಚಾರಗಳನ್ನು, ಸ್ತ್ರೀವಾದಿಗಳು ತಮ್ಮ ವಾದವನ್ನು ಸಮರ್ಥಿಸಿಕೊಳ್ಳಲು ಬಳಸಿಕೊಳ್ಳುತ್ತಾರೆ. ಸಸ್ಸೂರ್‌ನ ವಾದ ಭಾಷೆಯಲ್ಲಿನ ಅರ್ಥಸ್ಪಷ್ಟನೆ ಭಿನ್ನತೆಗಳಿಂದ ಕೂಡಿರುತ್ತದೆ ಎನ್ನುವುದಾಗಿದೆ. ಅಂದರೆ, ಯಾವುದು ನದಿ ಅಲ್ಲವೋ ಅದು ಕೆರೆ. ಸಸ್ಸೂರ್‌ನ ಭಾಷಿಕ ಚಿಂತನೆಗಳಿಗೂ, ಸ್ತ್ರೀವಾದಿಗಳು ಈ ಚಿಂತನೆಯನ್ನು ಲಿಂಗ ತಾರತಮ್ಯಕ್ಕೆ ಅಳವಡಿಸಿಕೊಂಡು ಚರ್ಚಿಸುವ ಮಾದರಿಗೂ ಇರುವ ವ್ಯತ್ಯಾಸವೆಂದರೆ ಭಿನ್ನತೆ ಮತ್ತು ವಿರೋಧದ ಪರಿಕಲ್ಪನೆಗಳು. ಸಸ್ಸೂರ್‌ನ ಪ್ರಕಾರ ಭಾಷೆಯಲ್ಲಿ ಅರ್ಥಸ್ಪಷ್ಟನೆ ಭಿನ್ನತೆಗಳಿಂದ ಕೂಡಿರುತ್ತದೆ ಎನ್ನುವುದಾದರೆ. ಸ್ತ್ರೀವಾದಿಗಳು ಈ ಭಿನ್ನತೆಯ ಚೌಕಟ್ಟನ್ನು ವೈರುಧ್ಯದ ನೆಲೆಗೆ ಕೊಂಡೊಯ್ಯುತ್ತಾರೆ. ಪದಗಳ ಅರ್ಥ ಸ್ಪಷ್ಟವಾಗುವುದು ವೈರುಧ್ಯದ ನೆಲೆಗಳಲ್ಲಿ ಎಂದು ತಮ್ಮ ವಾದಗಳನ್ನು ಮುಂದುವರಿಸುತ್ತಾ ಪದಗಳ ಅರ್ಥಗಳು ಪುರುಷನಿಗೆ ಅನ್ವಯವಾದಾಗ ಸಕಾರಾತ್ಮಕ, ಮಹಿಳೆಯರಿಗೆ ಅನ್ವಯವಾದಾಗ ನಕಾರಾತ್ಮಕ ಅರ್ಥ ಛಾಯೆಯನ್ನು ಹೊಂದುತ್ತವೆ ಎಂದು ತಮ್ಮ ನಿಲುವನ್ನು ವ್ಯಕ್ತಪಡಿಸುತ್ತಾರೆ. ಹೀಗೆ ಸ್ತ್ರೀವಾದಿಗಳು ವಿವಿಧ ಸಿದ್ಧಾಂತಗಳನ್ನು ತಮ್ಮ ವಿಚಾರಗಳನ್ನು ವ್ಯಕ್ತಪಡಿಸಲು ಅನ್ವಯಿಸಿಕೊಳ್ಳುವಲ್ಲಿಯೇ ತೊಡಕುಗಳಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಿಕೊಳ್ಳಲಾಗಿದೆ.

ಗಂಡು ಮತ್ತು ಹೆಣ್ಣಿನ ಭಾಷೆ ಬೇರೆ ಬೇರೆ ಎಂದು ಹೇಳುವಲ್ಲಿ ಸ್ತ್ರೀವಾದಿಗಳು ಅನುಸರಿಸುತ್ತಿರುವ ಮಾನದಂಡಗಳು ಯಾವುವು ಎಂಬುದನ್ನು ಪರಿಶೀಲಿಸುವ ಮತ್ತೊಂದು ಉದ್ದೇಶ ಈ ಅಧ್ಯಯನದ್ದಾಗಿತ್ತು. ಭಾಷೆ ಮತ್ತು ಲಿಂಗಸಂಬಂಧವನ್ನು ಕುರಿತ ಪಾಶ್ಚಾತ್ಯರ ಸಂದರ್ಭಗಳಲ್ಲಿನ ಹಾಗೂ ಕನ್ನಡದ ಸಂದರ್ಭಗಳಲ್ಲಿನ ಎರಡೂ ಚರ್ಚೆಗಳನ್ನು ಪರಿಶೀಲಿಸಿದ ನಂತರ ಕಂಡುಕೊಂಡ ಅಂಶಗಳೆಂದರೆ, ಸ್ತ್ರೀವಾದಿಗಳು ಸಮಾಜದಲ್ಲಿರುವ ಲಿಂಗತಾರತಮ್ಯದ ಬಗೆಗಿರುವ ಪೂರ್ವಗ್ರಹಗಳಿಂದಲೇ ಚರ್ಚೆಗೆ ತೊಡಗುತ್ತಾರೆ. ಅಲ್ಲದೆ, ಅವುಗಳ ಸಮರ್ಥನೆಗಾಗಿ ಪೂರಕ ಉದಾಹರಣೆಗಳನ್ನು ಮಾತ್ರ ಚರ್ಚೆಗೆ ಬಳಸಿಕೊಳ್ಳುತ್ತಿರುವುದನ್ನು ಗುರುತಿಸಿಕೊಳ್ಳಲಾಗಿದೆ. ಭಾಷೆಯ ಬಹುಮುಖಿ ಆಯಾಮಗಳನ್ನು ಪರಿಗಣಿಸುತ್ತಿಲ್ಲ. ಯಾವುದೋ ಒಂದು ಸಂದರ್ಭದ, ಯಾವುದೋ ಒಂದು ವರ್ಗದ, ಯಾವುದೋ ಒಂದು ಮಾದರಿಯ ಭಾಷಾ ಬಳಕೆಯನ್ನು ಇಡೀ ಸ್ತ್ರೀ ಸಮುದಾಯಕ್ಕೆ ಅನ್ವಯವಾಗುವಂತಹ ನೆಲೆಯಲ್ಲಿ ಅವರ ಚರ್ಚೆಗಳಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಿಕೊಳ್ಳಲಾಗಿದೆ.

ಲಿಂಗತಾರತಮ್ಯ ಪದಗಳ ರಚನೆಯಲ್ಲಿದೆಯೇ? ಅಥವಾ ಅವುಗಳ ಅರ್ಥಗಳನ್ನು ಸೀಮಿತ ನೆಲೆಯಲ್ಲಿ ಗ್ರಹಿಸಿಕೊಳ್ಳುತ್ತಿರುವ ಸಮುದಾಯಗಳ ಗ್ರಹಿಕೆಯಲ್ಲಿದೆಯೇ? ಎಂಬುದನ್ನು ಪರಿಶೀಲಿಸುವುದು ಈ ಅಧ್ಯಯನದ ಮತ್ತೊಂದು ಉದ್ದೇಶವಾಗಿತ್ತು. ಪದಗಳನ್ನು ಸಮುದಾಯ ಸೂಚಕ ಪದಗಳು ಮತ್ತು ಲಿಂಗಸೂಚಕ ಪದಗಳು ಎಂದು ವಿಂಗಡಿಸಿಕೊಂಡು ಪರಿಶೀಲಿಸಲಾಗಿದೆ. ಪುರುಷ ಸೂಚಕ ಪದಗಳಿಂದ ಸ್ತ್ರೀಸೂಚಕ ಪದಗಳನ್ನು ಸಾಧಿಸಲಾಗಿದೆ ಎಂಬುದು ಸ್ತ್ರೀವಾದಿಗಳ ವಾದ. ಈ ವಾದ ಸಮರ್ಥನೆಗೆ ಅವರು ಕೊಡುವ ಕೆಲವು ಪದಗಳು ಮತ್ತು ಅವುಗಳನ್ನು ಕುರಿತು ನಡೆಸುವ ವಿಶ್ಲೇಷಣೆಗಳನ್ನು ಈ ಅಧ್ಯಯನದಲ್ಲಿ

ಪರಿಶೀಲಿಸಲಾಗಿದೆ. ಎಲ್ಲ ಸಂದರ್ಭಗಳಲ್ಲೂ ಪುರುಷವಾಚಕ ಪದಗಳಿಂದಲೇ ಸ್ತ್ರೀವಾಚಕಗಳನ್ನು ಸಾಧಿಸಲಾಗಿಲ್ಲ. ಸ್ತ್ರೀವಾಚಕ ಮತ್ತು ಪುರುಷವಾಚಕ ಪದಗಳಿಗೆ ಇರುವ ಸ್ವಾಯತ್ತ ಅಸ್ತಿತ್ವವನ್ನು ಈ ಅಧ್ಯಯನದಲ್ಲಿ ಗುರುತಿಸಿಕೊಳ್ಳಲಾಗಿದೆ. ಪದರಚನೆಗಳನ್ನು ವಿಶ್ಲೇಷಿಸುವಲ್ಲಿಯೇ ಇರುವ ತೊಡಕುಗಳನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಪದಗಳ ಅರ್ಥದ ನೆಲೆಯಲ್ಲಿ ಲಿಂಗಸಂಬಂಧವನ್ನು ಪರಿಶೀಲಿಸುವುದು ಈ ಅಧ್ಯಯನದ ಮತ್ತೊಂದು ಉದ್ದೇಶವಾಗಿತ್ತು. ಒಂದು ಪದದ ಅರ್ಥ ಪುರುಷನಿಗೆ ಅನ್ವಯವಾದಾಗ ವಿಶಾಲಾರ್ಥದಲ್ಲಿಯೂ, ಸ್ತ್ರೀಗೆ ಅನ್ವಯವಾದಾಗ ಸೀಮಿತಾರ್ಥದಲ್ಲಿಯೂ ಅನ್ವಯವಾಗುತ್ತದೆ ಎಂಬುದು ಸ್ತ್ರೀವಾದಿಗಳ ಮತ್ತೊಂದು ನಿಲುವು. ಇದನ್ನು ಕೆಲವು ಪದಗಳ ಅರ್ಥಗಳ ನೆಲೆಯನ್ನು ಪರಿಶೀಲಿಸುವುದರ ಮುಖಾಂತರ ಕಾರಣಗಳನ್ನು ಕಂಡುಕೊಳ್ಳಲಾಗಿದೆ. ಒಂದು ಸಮುದಾಯದಲ್ಲಿನ ಪುರುಷ ಮತ್ತು ಸ್ತ್ರೀ ನಿರ್ವಹಿಸುತ್ತಿರುವ ಪಾತ್ರವಿಶಾಲತೆ ಮತ್ತು ಪಾತ್ರ ಸೀಮಿತತೆಯು ಈ ಅರ್ಥಗಳ ಅರ್ಥಗ್ರಹಿಕೆಯನ್ನು ನಿಯಂತ್ರಿಸುತ್ತಿರುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಭಾಷಾ ಬಳಕೆಯ ಕೆಲವು ಮಾದರಿಗಳನ್ನು ಪ್ರಧಾನವೆಂದು ಅವು ಪುರುಷರು ಬಳಸುವ ಮಾದರಿಗಳೆಂದು, ಮತ್ತೆ ಕೆಲವು ಮಾದರಿಗಳನ್ನು ಅಧೀನವೆಂದು ಅವು ಸ್ತ್ರೀಯರು ಬಳಸುವ ಮಾದರಿಗಳೆಂದು ಹೇಳುವ ನಿಲುವುಗಳ ಹಿಂದೆ ಸಮಾಜದಲ್ಲಿರುವ ಲಿಂಗತಾರತಮ್ಯದ ಕೆಲವು ಮಾನದಂಡಗಳು ಪೂರಕವಾಗಿ ಕಾರ್ಯನಿರ್ವಹಿಸುತ್ತಿರುತ್ತವೆ. ಹೆಣ್ಣಿನ ಮಾತಿನ ಶೈಲಿಯನ್ನು ನಿರೂಪಿಸುವಲ್ಲಿ ಅದಕ್ಕೆ ವಿರುದ್ಧವಾಗಿ ಗಂಡಿನ ಮಾತಿನ ಶೈಲಿಯನ್ನಾಧರಿಸಿ ಅದನ್ನೇ ಮಾನದಂಡವಾಗಿರಿಸಿಕೊಂಡು ಚರ್ಚಿಸಲಾಗುತ್ತಿದೆ. ಗಂಡಿಗೊಂದು ಮಾತಿನ ಶೈಲಿ ಹೆಣ್ಣಿಗೊಂದು ಮಾತಿನ ಶೈಲಿಯನ್ನು ಹೇಳುವುದರ ಹಿಂದಿನ ಉದ್ದೇಶಗಳು ಲಿಂಗತಾರತಮ್ಯವನ್ನು ಪೋಷಿಸುವ ಕಡೆಗೆ ಸಾಗುತ್ತಿವೆ. ಸಾಮಾಜಿಕ ನೆಲೆಯ ತಾರತಮ್ಯವನ್ನು ಭಾಷಿಕ ಆಕರಗಳಿಗೆ ಅನ್ವಯಿಸಿ ಚರ್ಚಿಸುತ್ತಿರುವುದರಿಂದ ಈ ರೀತಿಯ ಗೊಂದಲಗಳು ಉಂಟಾಗುತ್ತಿರುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಗಂಡು ಮತ್ತು ಹೆಣ್ಣಿನ ಕೆಲವು ಜೈವಿಕ ಭಿನ್ನತೆಗಳು ಅವರ ಅಭಿವ್ಯಕ್ತಿ ನೆಲೆಗಳನ್ನು ನಿಯಂತ್ರಿಸುತ್ತಿವೆಯೇ? ಎಂಬುದನ್ನು ಪರಿಶೀಲಿಸುವುದು ಈ ಅಧ್ಯಯನದ ಮತ್ತೊಂದು ಉದ್ದೇಶವಾಗಿತ್ತು. ಸಾಮಾಜಿಕವಾಗಿ ಗಂಡು ಮತ್ತು ಹೆಣ್ಣಿನ ಅಭಿವ್ಯಕ್ತಿ ನೆಲೆಗಳನ್ನು ಈ ಮುಂದಿನಂತೆ ವಿಂಗಡಿಸಲಾಗಿದೆ. ಚಿಂತನೆ-ಭಾವನೆ, ಸಾದೃಶ್ಯಮೂಲ ಚಿಂತನೆ-ಸಂಬಂಧಮೂಲ ಚಿಂತನೆ, ನಿರ್ಧಾರಕ ನೆಲೆ-ಸಮ್ಮತಿ ಅಪೇಕ್ಷಿಸುವಿಕೆ, ಮುಂತಾದವುಗಳು. ಈ ರೀತಿ ಅವರ ಅಭಿವ್ಯಕ್ತಿ ನೆಲೆಗಳು ಭಿನ್ನವಾಗಲು ಕೆಲವು ವೈಜ್ಞಾನಿಕ ಕಾರಣಗಳನ್ನು ಈ ಅಧ್ಯಯನದಲ್ಲಿ ಪರಿಶೀಲಿಸಲಾಗಿದೆ. ಜೈವಿಕ ಭಿನ್ನತೆಗಳು ಹೇಗೆ ಸಾಮಾಜಿಕ ಭಿನ್ನತೆಗಳಾಗಿ ಬದಲಾಗುತ್ತವೆ ಎಂಬುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

ಲಿಂಗವಿಭಜನೆಯನ್ನು ವ್ಯಾಕರಣಾತ್ಮಕವಾಗಿ ವಿಂಗಡಿಸುವಲ್ಲಿ ವ್ಯಾಕರಣಕಾರರು ಅನುಸರಿಸುವ ನಿಯಮಗಳು, ಮಾನದಂಡಗಳನ್ನು ಈ ಅಧ್ಯಯನದಲ್ಲಿ ಪರಿಶೀಲಿಸಲಾಗಿದೆ. ವ್ಯಾಕರಣಾತ್ಮಕವಾಗಿ ಲಿಂಗವಿಭಜನೆಯನ್ನು ಮಾಡುವಲ್ಲಿಯೂ ಕೆಲವು ವ್ಯಾಕರಣಕಾರರು ಅನುಸರಿಸುವ ಪುರುಷ ಮೂಲೀಯ ದೃಷ್ಟಿಕೋನವನ್ನು ಕುರಿತು ಉದಾಹರಣೆಗಳ ಮೂಲಕ ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ವ್ಯಾಕರಣಕಾರರು ವಿವರಿಸುವ ಲಿಂಗವಿಭಜನೆಯನ್ನು ಆ ಸಮುದಾಯದಲ್ಲಿನ ಲಿಂಗಸಂಬಂಧಿ ಗ್ರಹಿಕೆಗಳು ನಿಯಂತ್ರಿಸುತ್ತಿರುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ನಿಘಂಟುಗಳಲ್ಲಿನ ಅರ್ಥರಚನಾ ನಿಯಮಗಳಲ್ಲಿರುವ ಲಿಂಗಸಂಬಂಧಿ ಗ್ರಹಿಕೆಗಳನ್ನು ಪರಿಶೀಲಿಸುವ ಮತ್ತೊಂದು ಉದ್ದೇಶವನ್ನು ಈ ಅಧ್ಯಯನ ಹೊಂದಿತ್ತು. ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಅನ್ವಯವಾಗುವ ಪದಗಳಿಗೆ ಅರ್ಥವನ್ನು ಸೂಚಿಸುವಲ್ಲಿ ಪುರುಷನನ್ನೇ ಕೇಂದ್ರವಾಗಿಸಿಕೊಂಡು ಅರ್ಥಗಳನ್ನು ನೀಡಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಿಕೊಳ್ಳಲಾಗಿದೆ. ಪದದ ಅರ್ಥವನ್ನು ನಾಮಪದದಲ್ಲಿ ಹೇಳುವಾಗ ಪುರುಷ ವಾಚಕಗಳನ್ನು ಬಳಸಿರುವುದು, ಅದೇ ಪದದ ಅರ್ಥವನ್ನು ಗುಣವಾಚಕದಲ್ಲಿ ಹೇಳುವಾಗ ತಟಸ್ಥ ಅರ್ಥದಲ್ಲಿ ಹೇಳಿರುವುದನ್ನು ಗುರುತಿಸಲಾಗಿದೆ. ಒಂದು ಪದವು ಪುರುಷವಾಚಕವಾದಾಗ ವಿಶಾಲಾರ್ಥಗಳನ್ನು ಸ್ತ್ರೀವಾಚಕವಾದಾಗ ಸೀಮಿತ ಅರ್ಥಗಳನ್ನು ನಿಘಂಟುಕಾರರು ನೀಡಿರುವುದನ್ನು ಕಂಡುಕೊಳ್ಳಲಾಗಿದೆ. ಬದಲಾದ ಕಾಲಘಟ್ಟದಲ್ಲಿ ಸಾಮಾಜಿಕವಾಗಿ ಹೆಣ್ಣಿನ ಪಾಲ್ಗೊಳ್ಳುವಿಕೆಯೂ ಇಂದು ಹೆಚ್ಚಾಗಿರುವುದರಿಂದ, ಅರ್ಥಗಳ ಸೀಮಿತ ವ್ಯಾಪ್ತಿಯೂ ವಿಸ್ತರಿಸಬೇಕಾದ ಅನಿವಾರ್ಯತೆಯನ್ನು ಕಂಡುಕೊಳ್ಳಲಾಗಿದೆ.

ಸಮೂಹ ಮಾಧ್ಯಮವಾದ ಪತ್ರಿಕೆಗಳಲ್ಲಿ ಬಳಕೆಯಾಗುತ್ತಿರುವ ಪುರುಷವಾಚಕಗಳು ಮತ್ತು ಸ್ತ್ರೀವಾಚಕಗಳ ರಚನೆ ಮತ್ತು ಬಳಕೆಯ ನೆಲೆಗಳನ್ನು ಪರಿಶೀಲಿಸುವುದು ಈ ಅಧ್ಯಯನದ ಮತ್ತೊಂದು ಉದ್ದೇಶವಾಗಿತ್ತು. ಪುರುಷನು ನಿರ್ವಹಿಸುತ್ತಿದ್ದ ಕಾರ್ಯಕ್ಷೇತ್ರಕ್ಕೆ ಮಹಿಳೆ ಬಂದಾಗ ಹಾಗೂ ಮಹಿಳೆಯ ಕಾರ್ಯಕ್ಷೇತ್ರಕ್ಕೆ ಪುರುಷ ಬಂದಾಗ ಪುರುಷವಾಚಕ ಮತ್ತು ಸ್ತ್ರೀವಾಚಕಗಳಲ್ಲಿ ಆದ ಬದಲಾವಣೆಯನ್ನು ಕುರಿತು ಪರಿಶೀಲಿಸಲಾಗಿದೆ. ಪದಗಳೆಲ್ಲವೂ ಪುರುಷವಾಚಕಗಳೆಂದು ತಿಳಿದು ಎಲ್ಲ ಪದಗಳಿಗೂ ಸ್ತ್ರೀವಾಚಕ ಪ್ರತ್ಯಯಗಳನ್ನು ಸೇರಿಸಿ ಸ್ತ್ರೀವಾಚಕ ಪ್ರತ್ಯಯಗಳನ್ನು ರಚಿಸುತ್ತಿರುವುದನ್ನು ಕಂಡುಕೊಳ್ಳಲಾಗಿದೆ. ಇಂದಿನ ಪತ್ರಿಕೆಗಳಲ್ಲಿ ಏಕವ್ಯಕ್ತಿ ನಿರೂಪಣೆಯಲ್ಲಿ ಸ್ತ್ರೀವಾಚಕ ಅಥವಾ ಪುರುಷವಾಚಕಗಳನ್ನು ಬಳಸದೆ ಪದಗಳ ಬಹುವಚನ ರೂಪಗಳನ್ನು ಮಾತ್ರ ಬಳಸುವ ಪರಿಪಾಠವಿದೆ. ಅಲ್ಲಿ ಬಳಕೆಯಾಗುತ್ತಿರುವ ಸರ್ವನಾಮಗಳ ಮುಖಾಂತರ ನಿರ್ದಿಷ್ಟ ಲಿಂಗಗಳನ್ನು ಕಂಡುಕೊಳ್ಳುವ ಮಾದರಿಯಲ್ಲಿ ಭಾಷೆ ಬಳಕೆಯಾಗುತ್ತಿರುವುದನ್ನು ಗುರುತಿಸಿಕೊಳ್ಳಲಾಗಿದೆ.

ವ್ಯಕ್ತಿನಾಮಗಳಲ್ಲಿ ಜಾತಿವಾಚಕಗಳು ಅಥವಾ ವೃತ್ತಿವಾಚಕಗಳು ಒಂದು ಕಾಲದವರೆಗೂ ಸ್ತ್ರೀವ್ಯಕ್ತಿನಾಮಗಳಲ್ಲಿ ಬಳಕೆಯಾಗುತ್ತಿರಲಿಲ್ಲ. ಇಂದು ಹೆಣ್ಣುಮಕ್ಕಳಿಗೂ ಜಾತಿವಾಚಕಗಳು ಅಥವಾ ವೃತ್ತಿವಾಚಕಗಳನ್ನು ಅವರ ಹೆಸರುಗಳಲ್ಲಿ ಸೇರಿಸಲಾಗುತ್ತಿದೆ. ತಂದೆಯ ಹೆಸರನ್ನು ಮಾತ್ರ ವ್ಯಕ್ತಿನಾಮಗಳಲ್ಲಿ

ಸೇರಿಸಿಕೊಳ್ಳಲಾಗುತ್ತಿತ್ತು. ಆಧುನಿಕ ಸಂದರ್ಭಗಳಲ್ಲಿ ತಾಯಿಯ ಹೆಸರನ್ನು ವ್ಯಕ್ತಿನಾಮಗಳಲ್ಲಿ ಸೇರಿಸಿಕೊಳ್ಳುವಿಕೆಯನ್ನು ಗುರುತಿಸಿಕೊಳ್ಳಲಾಗಿದೆ. ಆಧುನಿಕ ಸಂದರ್ಭದಲ್ಲಿನ ಏಕಘಟಕ ವ್ಯಕ್ತಿನಾಮಗಳಲ್ಲಿ ನಿರ್ದಿಷ್ಟ ಲಿಂಗವನ್ನು ಸೂಚಿಸಲು ಸಾಧ್ಯವಾಗದ ನೆಲೆಯಲ್ಲಿ ವ್ಯಕ್ತಿನಾಮಗಳು ಬಳಕೆಯಾಗುತ್ತಿರುವುದನ್ನು ಗುರುತಿಸಿಕೊಳ್ಳಲಾಗಿದೆ. ಸಂಬೋಧನಾ ರೂಪಗಳಲ್ಲಿ, ಸಂಬಂಧವಾಚಕಗಳಲ್ಲಿ, ಬೈಗುಳಗಳಲ್ಲಿರುವ ಲಿಂಗಸಂಬಂಧಿ ಗ್ರಹಿಕೆ ಮತ್ತು ನಿಲುವುಗಳನ್ನು ಪರಿಶೀಲಿಸಲಾಗಿದೆ. ಭಾಷಿಕವಾಗಿ ಹೆಣ್ಣಿಗೆ ಮುಕ್ತ ಅಭಿವ್ಯಕ್ತಿ ಸಾಧ್ಯವಾಗುತ್ತಿಲ್ಲ ಎಂಬ ಹಿನ್ನೆಲೆಯಲ್ಲಿ ಒಡಪುಗಳಲ್ಲಿ ಸಾಧ್ಯವಾಗಿರುವ ಅವಳ ಮುಕ್ತ ಅಭಿವ್ಯಕ್ತಿ ಕ್ರಮಗಳನ್ನು ಈ ಅಧ್ಯಯನದಲ್ಲಿ ಗುರುತಿಸಿಕೊಳ್ಳಲಾಗಿದೆ.

ಭಾಷೆಯಲ್ಲಿನ ಲಿಂಗಸಂಬಂಧಿ ಗ್ರಹಿಕೆಗಳನ್ನು ಯುವ ಸಂಶೋಧನಾ ವಿದ್ಯಾರ್ಥಿಗಳು ಹೇಗೆ ಗ್ರಹಿಸಿಕೊಳ್ಳುತ್ತಿದ್ದಾರೆ ಎಂಬುದನ್ನು ಪರಿಶೀಲಿಸಲು ಮೂರು ಹಂತಗಳಲ್ಲಿ ಪ್ರಾಯೋಗಿಕ ಅಧ್ಯಯನಗಳನ್ನು ಕೈಗೊಳ್ಳಲಾಗಿತ್ತು. ಪುರುಷ ಮತ್ತು ಸ್ತ್ರೀ ಇಬ್ಬರಿಗೂ ಸಮಾನವಾಗಿ ಅನ್ವಯವಾಗುವ ಪದಗಳನ್ನು ವಿದ್ಯಾವಂತ ವರ್ಗ ಹೇಗೆ ಗ್ರಹಿಸಿ ಬಳಸುತ್ತಿದ್ದಾರೆ ಎಂಬುದನ್ನು ಗುರುತಿಸುವುದು, ತಟಸ್ಥ ಅರ್ಥವಿದ್ದರೂ ಸ್ತ್ರೀವಾಚಕವಾಗಿ ಗ್ರಹಿಕೆಯಲ್ಲಿರುವ ಪದಗಳು, ತಟಸ್ಥ ಅರ್ಥವಿದ್ದರೂ ಪುರುಷವಾಚಕವಾಗಿ ಗ್ರಹಿಕೆಯಲ್ಲಿನ ಪದಗಳನ್ನು ಹೇಗೆ ಗ್ರಹಿಸುತ್ತಿದ್ದಾರೆ ಎಂಬುದನ್ನು ಗುರುತಿಸುವುದು, ಪುರುಷನ ಬರಹದ ಶೈಲಿ ಹಾಗೂ ಮಹಿಳೆಯ ಬರಹದ ಶೈಲಿಗಳನ್ನು ಗುರುತಿಸುವಲ್ಲಿ ಸಾಮಾಜಿಕವಾಗಿ ಇರುವ ಲಿಂಗಸಂಬಂಧಿ ಗ್ರಹಿಕೆಗಳು ಇವರನ್ನು ನಿಯಂತ್ರಿಸುತ್ತಿವೆಯೇ ಎಂಬುದನ್ನು ಗುರುತಿಸುವುದು ಈ ಪ್ರಾಯೋಗಿಕ ಅಧ್ಯಯನಗಳ ಮುಖ್ಯ ಉದ್ದೇಶವಾಗಿತ್ತು. ಹೆಚ್ಚು ತಟಸ್ಥ ಪದಗಳು ಪುರುಷವಾಚಕಗಳಾಗಿ ಬಳಕೆಗೊಂಡರೂ ಕೆಲವು ತಟಸ್ಥ ಪದಗಳು ತಟಸ್ಥ ಅರ್ಥಗಳಲ್ಲಿಯೇ ಈ ವರ್ಗವು ಬಳಕೆ ಮಾಡಿರುವುದನ್ನು ಗುರುತಿಸಿಕೊಳ್ಳಲಾಗಿದೆ. ಸಮುದಾಯದ ಅನೇಕ ನಂಬಿಕೆಗಳು, ಗ್ರಹಿಕೆಗಳು ಕೆಲವು ಪದಗಳನ್ನು ಪುರುಷವಾಚಕವಾಗಿ ಮಾತ್ರ ಬಳಕೆ ಮಾಡುವಂತೆ, ಕೆಲವು ಪದಗಳನ್ನು ಸ್ತ್ರೀವಾಚಕಗಳಾಗಿ ಮಾತ್ರ ಬಳಕೆಮಾಡುವಂತೆ ನಿಯಂತ್ರಿಸುತ್ತಿರುತ್ತವೆ. ಕಾಲಬದಲಾದಂತೆ ಸಮುದಾಯದ ಈ ರೀತಿಯ ಕೆಲವು ಗ್ರಹಿಕೆಗಳು ಬದಲಾಗುತ್ತಿರುತ್ತವೆ ಎಂಬುದನ್ನು ಈ ಅಧ್ಯಯನದ ಮುಖಾಂತರ ಕಂಡುಕೊಳ್ಳಲಾಗಿದೆ.

ಸಾಮಾಜಿಕ ಸಂದರ್ಭಗಳಲ್ಲಿ ಬಳಕೆಯಾಗುವ ಗಂಡು ಮತ್ತು ಹೆಣ್ಣಿನ ಮಾತುಕತೆಯಲ್ಲಿನ ಭಿನ್ನತೆಗಳನ್ನು ಗುರುತಿಸುವುದು ಒಂದು ಮಾದರಿಯಾದರೆ. ಗಂಡಿನ ಬರಹ ಮತ್ತು ಹೆಣ್ಣಿನ ಬರಹದಲ್ಲಿನ ಭಾಷಾ ಶೈಲಿಯಲ್ಲಿಯ ಭಿನ್ನತೆಗಳನ್ನು ಗುರುತಿಸುವುದು ಮತ್ತೊಂದು ಮಾದರಿಯಾಗಿದೆ. ಸಾಮಾಜಿಕವಾಗಿ ಗಂಡು ಹೆಣ್ಣಿನ ಭಾಷಾ ಬಳಕೆಯ ಶೈಲಿಯಲ್ಲಿ ಇದೆ ಎನ್ನಲಾಗುತ್ತಿರುವ ಭಿನ್ನತೆಗಳನ್ನು ಬರಹದ ಭಾಷೆಗೂ ಅನ್ವಯಿಸಿ ಹೇಳಲಾಗುತ್ತಿದೆಯೇ? ಎಂಬುದನ್ನು ಪರಿಶೀಲಿಸುವುದು ಮೂರನೇ ಹಂತದ ಪ್ರಾಯೋಗಿಕ ಅಧ್ಯಯನದ ಉದ್ದೇಶವಾಗಿತ್ತು. ಕೆಲವು ಅನಾಮಧೇಯ ಬರಹಗಳನ್ನು ನೀಡಲಾಗಿತ್ತು. ಇಲ್ಲಿ ಬರಹದ ಶೈಲಿಗಳಲ್ಲಿನ ಭಿನ್ನತೆಯನ್ನು ಈ ವರ್ಗ ಗುರುತಿಸಿದ ರೀತಿ ವಿಷಯಾಧಾರಿತವಾಗಿ, ಅಂದರೆ ಒಂದು

ವಿಷಯ ಮಹಿಳೆಗೆ ಸಂಬಂಧಿಸಿದ್ದಾದರೆ ಅದನ್ನು ಬರೆದವರು ಪುರುಷರಾದರೂ ಮಹಿಳಾ ಬರಹವೆಂದು ಗುರುತಿಸಲಾಗಿದೆ. ವಿಷಯ ಪುರುಷನಿಗೆ ಸಂಬಂಧಿಸಿದ್ದಾದರೆ ಅದನ್ನು ಮಹಿಳೆ ಬರೆದಿದ್ದರೂ ಪುರುಷನ ಬರಹವೆಂದು ಗುರುತಿಸಲಾಗಿದೆ. ಹಾಗಾದರೆ ಪುರುಷನ ಬರಹದ ಶೈಲಿ, ಮಹಿಳೆಯ ಬರಹದ ಶೈಲಿ ಎಂದು ಬರಹದ ಶೈಲಿಯನ್ನು ಭಾಷಿಕವಾಗಿ ವಿಂಗಡಿಸಲು ಸಾಧ್ಯವಾಗುವುದಿಲ್ಲ ಎಂಬುದನ್ನು ಈ ಅಧ್ಯಯನದಲ್ಲಿ ಗುರುತಿಸಿಕೊಳ್ಳಲಾಗಿದೆ.

**ಮುಂದಿನ ಅಧ್ಯಯನದ ಸಾಧ್ಯತೆಗಳು**

ಭಾಷೆ ಮತ್ತು ಲಿಂಗಸಂಬಂಧಗಳನ್ನು ಕುರಿತು ನಡೆಯುತ್ತಿರುವ ಚರ್ಚೆಗಳೆಲ್ಲವೂ ಗಂಡು ಮತ್ತು ಹೆಣ್ಣಿನ ಮುಖಾಂತರ ಮಾತ್ರ ನಡೆಯುತ್ತಿವೆ. ನಮ್ಮ ಸಮುದಾಯಗಳಲ್ಲಿ ತೃತೀಯ ಲಿಂಗದ ಮತ್ತೊಂದು ವರ್ಗವಿದೆ. ಉದಾ: ಹಿಜಡಾ, ಲೆಸ್ಬಿಯನ್ ಮುಂತಾದವರು. ಭಾಷೆಯಲ್ಲಿ ಮಹಿಳಾ ಅಸ್ಮಿತೆಯನ್ನು ಕುರಿತು ಚರ್ಚಿಸುತ್ತಿರುವ ಸಂದರ್ಭದಲ್ಲಿ ತೃತೀಯ ಲಿಂಗಿಗಳನ್ನು ಕುರಿತು ಚರ್ಚಿಸುವ ಅನಿವಾರ್ಯತೆಯಿದೆ. ಸ್ತ್ರೀ, ಪುರುಷರಿಗೆ ಇರುವಂತೆ ಇವರಿಗೆ ನಿರ್ದಿಷ್ಟ ಲಿಂಗಸೂಚಕ ಪದಗಳಿಲ್ಲ. ನಪುಂಸಕ ವಾಚಕಗಳನ್ನು ಬಳಸಲಾಗುತ್ತಿದೆ. ಗಂಡು ಆಗಿದ್ದವ ಹೆಣ್ಣಾದಾಗ, ಅಥವಾ ಹೆಣ್ಣಾಗಿದ್ದವಳು ಗಂಡಾದಾಗ ಅವರ ಭಾಷೆಯಲ್ಲಿ ಉಂಟಾಗುವ ಬದಲಾವಣೆಗಳು ಯಾವ ನೆಲೆಯಲ್ಲಿರುತ್ತವೆ ಎಂಬುದನ್ನು ಪರಿಶೀಲಿಸುವ ಅಗತ್ಯವಿದೆ ಹಾಗೂ ಅವರ ಸಮುದಾಯದ ಒಳಗೆ ಭಾಷಾ ಬೆಳವಣಿಗೆ ಯಾವ ರೀತಿಯಲ್ಲಿದೆ ಎಂಬುದನ್ನು ಕುರಿತು ಅಧ್ಯಯನ ಮಾಡಬಹುದು. ಈ ಅಧ್ಯಯನದಲ್ಲಿ ಕೆಲವು ಭಾಗಗಳಲ್ಲಿ ತೃತೀಯ ಲಿಂಗಿಗಳ ಚರ್ಚೆಯನ್ನು ತಂದಿದ್ದರೂ ಪೂರ್ಣಪ್ರಮಾಣದಲ್ಲಿ ಅವರನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಂಡಿಲ್ಲ.

# ಅನುಬಂಧ

೧. ಪ್ರಾಯೋಗಿಕ ಅಧ್ಯಯನದ ಮಾದರಿಗಳು
೨. ಪ್ರಶ್ನಾವಳಿ
೩. ವಕ್ತೃ ವಿವರ
೪. ಪರಾಮರ್ಶನ ಗ್ರಂಥಗಳು

## ೧. ಪ್ರಾಯೋಗಿಕ ಅಧ್ಯಯನದ ಮಾದರಿಗಳು

**ಮಾದರಿ ೧. ಪದಗಳ ಅರ್ಥಗಳನ್ನು ಬರೆಯಿರಿ:**

**ಹೆಸರು: ವಯಸ್ಸು: ಲಿಂಗ: ವಿದ್ಯಾಭ್ಯಾಸ: ಊರು:**

೧. ಅನುಭವಿ:
೨. ಸಹಭಾಗಿ:
೩. ಅನನ್ಯ:
೪. ಅನಾಮಧೇಯ:
೫. ಮೌನಿ:
೬. ಅನಿಕೇತನ:
೭. ಗಿರಾಕಿ:
೮. ಅಭಿಮಾನಿ:
೯. ವ್ಯಭಿಚಾರಿ:
೧೦. ಗಾಯಾಳು:
೧೧. ಆರೋಪಿ:
೧೨. ವಿಜ್ಞಾನಿ:
೧೩. ಉಗ್ರಗಾಮಿ:
೧೪. ತ್ಯಾಗಿ:
೧೫. ಕುರೂಪಿ:
೧೬. ಪ್ರತಿಗಾಮಿ:
೧೭. ಬುದ್ಧಿಗೇಡಿ:
೧೮. ವ್ಯಾಪಾರಿ:
೧೯. ದಾನಿ:
೨೦. ವಿಶ್ವಾಸಿ:

**ಪ್ರಾಯೋಗಿಕ ಮಾದರಿ–೧**

ಹೆಸರು: ಶಿವನಗೌಡ ಪಾಟೀಲ ವಯಸ್ಸು: ೩೨ ಲಿಂಗ: ಪುರುಷ ವಿದ್ಯಾಭ್ಯಾಸ: (ಪಿಎಚ್.ಡಿ.,)
ಊರು: ಹಾವೇರಿ

೧. ಅನುಭವಿ: ಕೆಲಸದ ಬಗ್ಗೆ ಇರುವ ತಜ್ಞತೆ, ಶ್ರದ್ಧೆ.

೨. ಸಹಭಾಗಿ: ಕೆಲಸದಲ್ಲಿ ತೊಡಗಿಕೊಂಡಾಗ ಸಹಾಯ ಮಾಡುವವನು.

೩. ಅನನ್ಯ: ಮಹತ್ವವಾದದ್ದು, ಶ್ರೇಷ್ಠವಾದದ್ದು.

೪. ಅನಾಮಧೇಯ: ಗೊತ್ತಿಲ್ಲದಿರುವುದು.

೫. ಮೌನಿ: ತಾಳ್ಮೆಯಿಂದ ಇರುವುಂತಹದ್ದು, ಮೌನವಾಗಿರುವುದು.

೬. ಅನಿಕೇತನ: ನೆಲೆಯಿಲ್ಲದ, ಕುವೆಂಪು ಅವರ ಪದ್ಯ.

೭. ಗಿರಾಕಿ: ಅಂಗಡಿಗೆ ಯಾವುದೋ ವಸ್ತುಕೊಳ್ಳಲು ಬಂದವನು.

೮. ಅಭಿಮಾನಿ: ತನ್ನ ನೆಚ್ಚಿನ ನಾಯಕನಿಗೆ ತನ್ನ ಇಚ್ಛೆಯನ್ನು ತಿಳಿಸುವವನು.

೯. ವ್ಯಭಿಚಾರಿ: ವೇಶ್ಯೆ.

೧೦. ಗಾಯಾಳು: ರೋಗಿ, ದೇಹದಲ್ಲಿ ರಕ್ತಸ್ರಾವವಾಗುವ ವ್ಯಕ್ತಿ.

೧೧. ಆರೋಪಿ: ಸರಿ ತಪ್ಪು ಎಂಬ ತೀರ್ಮಾನಕ್ಕೆ ಒಳಪಡದೆ ಇರುವ ವ್ಯಕ್ತಿ.

೧೨. ವಿಜ್ಞಾನಿ: ಸಂಶೋಧಕ, ಬುದ್ಧಿ ಜೀವಿ.

೧೩. ಉಗ್ರಗಾಮಿ: ಕಾನೂನು ಚೌಕಟ್ಟು ಮೀರಿದವನು.

೧೪. ತ್ಯಾಗಿ: ತನ್ನನ್ನು ತಾನು ಸಮರ್ಪಿಸಿಕೊಂಡವನು.

೧೫. ಕುರೂಪಿ: ಚಂದವಿಲ್ಲದಿರುವುದು, ಅಶ್ಲೀಲ.

೧೬. ಪ್ರತಿಗಾಮಿ: ಉಗ್ರವಾಗಿ ಪ್ರತಿಭಟಿಸುವವರು.

೧೭. ಬುದ್ಧಿಗೇಡಿ: ದಡ್ಡ.

೧೮. ವ್ಯಾಪಾರಿ: ವ್ಯವಹಾರಸ್ಥ.

೧೯. ದಾನಿ: ತನ್ನಲ್ಲಿರುವುದನ್ನು ಮುಕ್ತ ಮನಸ್ಸಿನಿಂದ ಕೊಡುವುದು.

೨೦. ವಿಶ್ವಾಸಿ: ನಂಬಿಕಸ್ತ.

**ಪ್ರಾಯೋಗಿಕ ಮಾದರಿ–೨**

ಹೆಸರು: ಶರೀಫ್ ಹಸಮಕಲ್ ವಯಸ್ಸು: ೩೦

ಲಿಂಗ: ಪುರುಷ

ವಿದ್ಯಾಭ್ಯಾಸ: (ಪಿಎಚ್.ಡಿ.,) ಊರು: ಹಸಮಕಲ್

೧. ಅನುಭವಿ: ಪಂಡಿತ, ಜ್ಞಾನಿ, ಅನುಭವಿ

೨. ಸಹಭಾಗಿ: ಜೊತೆಗಾರ, ಪಾಲ್ಗೊಳ್ಳುವುದು

೩. ಅನನ್ಯ: ವಿಶಿಷ್ಟತೆ, ವಿಶೇಷತೆ

೪. ಅನಾಮಧೇಯ: ಹೆಸರಿಲ್ಲದ್ದು

೫. ಮೌನಿ: ತಪಸ್ವಿ, ಮಾತಿಲ್ಲದಿರುವುದು, ನಿಶ್ಶಬ್ದ

೬. ಅನಿಕೇತನ: ಸ್ಥಿರವಲ್ಲದ್ದು, ಜಂಗಮತೆ

೭. ಗಿರಾಕಿ: ವಸ್ತುಗಳನ್ನು ಕೊಳ್ಳುವವ

೮. ಅಭಿಮಾನಿ: ನೆಚ್ಚಿನ ಪರಿ

೯. ವ್ಯಭಿಚಾರಿ: ಬದ್ಧತೆ ಇಲ್ಲದಿರುವುದು

೧೦. ಗಾಯಾಳು: ನೋವಿನಿಂದ ಕೂಡಿರುವುದು

೧೧. ಆರೋಪಿ: ನಿಂದನೆಗೆ ಗುರಿಯಾದವನು

೧೨. ವಿಜ್ಞಾನಿ: ಶಾಸ್ತ್ರಬದ್ಧವಾದ ಜ್ಞಾನಿ

೧೩. ಉಗ್ರಗಾಮಿ: ಭಯಾನಕ

೧೪. ತ್ಯಾಗಿ: ದಾನ ಮಾಡುವವನು, ಬಿಟ್ಟುಕೊಡುವುದು

೧೫. ಕುರೂಪಿ: ಕೆಟ್ಟರೂಪ

೧೬. ಪ್ರತಿಗಾಮಿ: ವಿರೋಧಿಸುವನು

೧೭. ಬುದ್ಧಿಗೇಡಿ: ಬುದ್ಧಿ ಇಲ್ಲದವ

೧೮. ವ್ಯಾಪಾರಿ: ಕೊಡುಕೊಳ್ಳುವುದು

೧೯. ದಾನಿ: ಉಚಿತವಾಗಿ ನಿಡುವುದು

೨೦. ವಿಶ್ವಾಸಿ: ನಂಬಿಕೆಗೆ ಅರ್ಹವಾದವನು

**ಪ್ರಾಯೋಗಿಕ ಮಾದರಿ–೩**

ಹೆಸರು: ಲೋಹಿತೇಶ್ವರಿ ಎಸ್.ಪಿ ವಯಸ್ಸು: ೨೩
ಲಿಂಗ: ಹೆಣ್ಣು
ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,) ಊರು: ಚಳ್ಳಕೆರೆ

೧. ಅನುಭವಿ: ಅನುಭವ ಉಳ್ಳವರು.

೨. ಸಹಭಾಗಿ: ಪಾಲುದಾರ.

೩. ಅನನ್ಯ: ಬೇರೆಯಾಗದವ, ನಶಿಸಲಾರದ್ದು.

೪. ಅನಾಮಧೇಯ: ಹೆಸರಿಲ್ಲದವನು.

೫. ಮೌನಿ: ಮಾತನಾಡದಿರುವವರು.

೬. ಅನಿಕೇತನ: ಮೋಹವಿಲ್ಲದವ, ಮಹತ್.

೭. ಗಿರಾಕಿ: ಕೊಂಡುಕೊಳ್ಳುವವರು.

೮. ಅಭಿಮಾನಿ: ಅಭಿಮಾನ ಹೊಂದಿರುವವ.

೯. ವ್ಯಭಿಚಾರಿ: ಸಾಮಾಜಿಕ ಕಟ್ಟುಪಾಡು ಮೀರಿರುವವರು.

೧೦. ಗಾಯಾಳು: ಗಾಯಗೊಂಡವರು.

೧೧. ಆರೋಪಿ: ಅಪರಾಧಿ.

೧೨. ವಿಜ್ಞಾನಿ: ವಿಜ್ಞಾನ ಬಲ್ಲವನು.

೧೩. ಉಗ್ರಗಾಮಿ: ಭಯೋತ್ಪಾದಕ ವ್ಯಕ್ತಿ.

೧೪. ತ್ಯಾಗಿ: ತ್ಯಾಗ ಮಾಡುವವರು.

೧೫. ಕುರೂಪಿ: ವಿರೂಪ.

೧೬. ಪ್ರತಿಗಾಮಿ: ವಿರೋಧಿ.

೧೭. ಬುದ್ಧಿಗೇಡಿ: ಅರಿವುಗೆಟ್ಟವ.

೧೮. ವ್ಯಾಪಾರಿ: ವ್ಯಾಪಾರ ಮಾಡುವವರು.

೧೯. ದಾನಿ: ದಾನ ಮಾಡುವವರು.

೨೦. ವಿಶ್ವಾಸಿ: ನಂಬಿಕೆಯುಳ್ಳವರು.

**ಪ್ರಾಯೋಗಿಕ ಮಾದರಿ–೪**

ಹೆಸರು: ಉಷಾ ವಯಸ್ಸು: ೨೧ ಲಿಂಗ: ಹೆಣ್ಣು

ವಿದ್ಯಾಭ್ಯಾಸ: ಬಿ ಮ್ಯೂಸಿಕ್ ಮೂರನೇ ವರ್ಷ

ಊರು: ಸಂಗನಕಲ್ಲು

೧. ಅನುಭವಿ: ಎಲ್ಲಬಲ್ಲವರು.

೨. ಸಹಭಾಗಿ: ಜೊತೆಗಾರರು.

೩. ಅನನ್ಯ: ತುಂಬ ಹತ್ತಿರ.

೪. ಅನಾಮಧೇಯ: ಹೆಸರಿಲ್ಲದವರು.

೫. ಮೌನಿ: ನಿಶ್ಶಬ್ದತೆಯ ವ್ಯಕ್ತಿ.

೬. ಅನಿಕೇತನ: ನೆಲೆ ಇಲ್ಲದ ಹಾದಿ.

೭. ಗಿರಾಕಿ: ಗ್ರಾಹಕ.

೮. ಅಭಿಮಾನಿ: ಕಲೆಯನ್ನು ಪ್ರೀತಿಸುವವರು.

೯. ವ್ಯಭಿಚಾರಿ: ವೇಶ್ಯಾವಾಟಿಕೆ.

೧೦. ಗಾಯಾಳು: ಪೆಟ್ಟುತಿಂದವರು.

೧೧. ಆರೋಪಿ: ಅಪರಾಧಿ.

೧೨. ವಿಜ್ಞಾನಿ: ಸಂಶೋಧನಾ ತಜ್ಞರು.

೧೩. ಉಗ್ರಗಾಮಿ: ಭಯೋತ್ಪಾದಕರು.

೧೪. ತ್ಯಾಗಿ: ಬಿಟ್ಟುಕೊಡುವುದು.

೧೫. ಕುರೂಪಿ: ಅಸುಂದರತೆ.

೧೬. ಪ್ರತಿಗಾಮಿ: ಹತ್ತಿಕ್ಕು.

೧೭. ಬುದ್ಧಿಗೇಡಿ: ಮಂದಮತಿ.

೧೮. ವ್ಯಾಪಾರಿ: ಮಾರಾಟಗಾರರು.

೧೯. ದಾನಿ: ನೀಡುವವರು.

೨೦. ವಿಶ್ವಾಸಿ: ನಂಬಿಕೆ ನಂಬಿಕಸ್ಥ.

ಮಾದರಿ ೨. ಎರಡು ಮೂರು ವಾಕ್ಯಗಳಲ್ಲಿ ಬರೆಯಿರಿ(ಮೊದಲ ವಾಕ್ಯದಲ್ಲಿ ಪದದ ಅರ್ಥ ಬರೆಯಿರಿ. ಎರಡನೇ ವಾಕ್ಯದಲ್ಲಿ ಸ್ವಂತ ವಾಕ್ಯರಚನೆ ಮಾಡಿ. ನಿಮಗೆ ಅನ್ವಯಿಸಿಕೊಂಡು ಬರೆಯುವಂತಿಲ್ಲ)

**ಹೆಸರು:** **ವಯಸ್ಸು:** **ಲಿಂಗ:**

**ವಿದ್ಯಾಭ್ಯಾಸ:** **ಊರು:**

೧. ಪೌರಕಾರ್ಮಿಕರು

೨. ಅರ್ಜಿದಾರರು

೩. ರೂಪದರ್ಶಿ

೪. ಗಗನಯಾತ್ರಿ

೫. ಕುಲಪತಿ

೬. ನರ್ಸ್

೭. ಗಣ್ಯಮಾನ್ಯ

೮. ಅಭಿಮಾನಿ

೯. ಗ್ರಾಮವಾಸಿ

೧೦. ಟೀಚರ್

೧೧. ಉದ್ಯಮಿ

೧೨. ಸಾಹಿತಿ

೧೩. ಚೇರ್‌ಮನ್

೧೪ ಕನ್ನಡಕಧಾರಿ

೧೫. ಬಾಯಾಳಿ

೧೬. ಸಿದ್ಧಾಂತಿ

೧೭. ಸೋಮಾರಿ

೧೮. ಸೈನಿಕರು

೧೯. ಹಠಮಾರಿ

೨೦. ಹುಡುಗುತನ

೨೧. ರೈತ

೨೨. ಮಾನವ

**ಪ್ರಾಯೋಗಿಕ ಅಧ್ಯಯನದ ಮಾದರಿ -೧**

ಹೆಸರು: ವಿರೂಪಾಕ್ಷಪ್ಪ.ಜಿ ವಯಸ್ಸು: ೩೧ ಲಿಂಗ: ಪುರುಷ

ವಿದ್ಯಾಭ್ಯಾಸ: (ಪಿಎಚ್.ಡಿ.,)

ಊರು: ಜನ್ನೇನಹಳ್ಳಿ ಗೊಲ್ಲರಹಟ್ಟಿ

೧. ಪೌರಕಾರ್ಮಿಕರು: ಈ ದೇಶದ ನಾಗರಿಕ ಜನರು.

೨. ಅರ್ಜಿದಾರರು: ತಮ್ಮ ಅಹವಾಲುಗಳನ್ನು ಸಂಬಂಧ ಪಟ್ಟ ಇಲಾಖೆಗೆ ಸಲ್ಲಿಸುವವರು.

೩. ರೂಪದರ್ಶಿ: ವೈಯಾರದಿಂದ ತಮ್ಮ ಅಂಗಾಂಗಗಳನ್ನು ಪ್ರದರ್ಶಿಸುವ ಮಹಿಳೆ.

೪. ಗಗನಯಾತ್ರಿ: ಆಕಾಶದಲ್ಲಿ ಹಾರಾಡುವ ವಿಮಾನದಲ್ಲಿ ಕೆಲಸ ಮಾಡುವ ಮಹಿಳೆಯರು. ಇವರು ಪ್ರಯಾಣಿಕರ ಸಂತೋಷವನ್ನು ಹೆಚ್ಚಿಸುತ್ತಾರೆ.

೫. ಕುಲಪತಿ: ವಿಶ್ವವಿದ್ಯಾಲಯದ ಉಸ್ತುವಾರಿ ನೋಡಿಕೊಳ್ಳಲು ನೇಮಕವಾದವರು.

೬. ನರ್ಸ್: ಆಸ್ಪತ್ರೆಗಳಲ್ಲಿ ರೋಗಿಗಳ ಯೋಗಕ್ಷೇಮ ನೋಡಿಕೊಳ್ಳುವ ಕಾಯಕ ಮಾಡುತ್ತಾರೆ.

೭. ಗಣ್ಯಮಾನ್ಯ: ರಾಜಕಾರಣಿಗಳು, ಉನ್ನತ ಉದ್ದೆಯಲ್ಲಿ ಇರುವವರನ್ನು ಗುರುತಿಸುವ ಪದ.

೮. ಅಭಿಮಾನಿ: ಇದು ವಿಶಾಲವಾದ ಅರ್ಥಉಳ್ಳ ಪದ. ದೇಶಾಭಿಮಾನಿ ಜನರ ಅಭಿಮಾನಿ.

೯. ಗ್ರಾಮವಾಸಿ: ಯಾವುದಾದರೂ ಒಂದು ಗ್ರಾಮದಲ್ಲಿ ವಾಸಿಸುವವನು.

೧೦. ಟೀಚರ್: ಮಕ್ಕಳಿಗೆ ಅಕ್ಷರ ಕಲಿಸುವ ಗುರು.

೧೧. ಉದ್ಯಮಿ: ಯಾವುದಾದರೂ ಕೆಲಸ ಮಾಡುವವನು.

೧೨. ಸಾಹಿತಿ: ಬರಹದಲ್ಲಿ ಪರಿಣಿತಿ ಪಡೆದವನು.

೧೩. ಚೇರ್‌ಮನ್: ಜವಾಬ್ದಾರಿಯುತ ಕೆಲಸ ಕಾರ್ಯಗಳನ್ನು ನಿರ್ವಹಿಸುವವನು.

೧೪ ಕನ್ನಡಕಧಾರಿ: ದೃಷ್ಟಿದೋಷ ಸರಿಪಡಿಸಲು ಕನ್ನಡಕ ಧರಿಸುವವನು.

೧೫. ಬಾಯಾಳಿ: ಇನ್ನೊಬ್ಬರೊಂದಿಗೆ ಕಾರಣವಲ್ಲದ ಜಗಳ ಮಾಡುವವನು.

೧೬. ಸಿದ್ಧಾಂತಿ: ಯಾವುದಾದರೂ ಸಮಸ್ಯೆಗಳನ್ನು ಬಿಡಿಸಲು ಸಿದ್ಧಾಂತ ರೂಪಿಸುವವನು.

೧೭. ಸೋಮಾರಿ: ಕೆಲಸವಿದ್ದರೂ ಮಾಡದೆ ಸುಮ್ಮನಿರುವವನು.

೧೮. ಸೈನಿಕರು: ದೇಶವನ್ನು ಕಾಯುವವರು.

೧೯. ಹಠಮಾರಿ: ಯಾರ ಮಾತನ್ನು ಕೇಳದವನು.

೨೦. ಹುಡುಗುತನ: ಪಕ್ವತೆ ಇಲ್ಲದವನು.

೨೧. ರೈತ: ದೇಶದ ಜನರಿಗೆ ಅನ್ನ ನೀಡುವವನು

೨೨. ಮಾನವ: ಪ್ರಾಣಿಗಳಿಗಿಂತ ವಿಶೇಷವಾದ ಬುದ್ಧಿಯನ್ನು ಹೊಂದಿದವನು.

**ಪ್ರಾಯೋಗಿಕ ಅಧ್ಯಯನದ ಮಾದರಿ –೨**

ಹೆಸರು: ಕುಶಾಲ.ಎಂ ವಯಸ್ಸು: ೨೧ ಲಿಂಗ: ಹೆಣ್ಣು

ವಿದ್ಯಾಭ್ಯಾಸ: ಎಂ.ಎ.,ಪಿಎಚ್.ಡಿ ಊರು: ಬಸಾಪುರ.ಕೆ

| | |
|---|---|
| **೧. ಪೌರಕಾರ್ಮಿಕರು:** | ೧೮ ವರ್ಷ ಮೇಲ್ಪಟ್ಟವರು. ಪ್ರಾಥಮಿಕ ಶಿಕ್ಷಣವನ್ನು ಓದಿದ ನಂತರ ವಿದ್ಯಾರ್ಥಿಗಳಿಗೆ ಓದಲು ಬಿಡದೆ ಕಾರ್ಖಾನೆಗಳಲ್ಲಿ ಅನೇಕ ಮಕ್ಕಳನ್ನು ಕೆಲಸಕ್ಕೆ ಕಳುಹಿಸುತ್ತಾರೆ. |
| **೨. ಅರ್ಜಿದಾರರು:** | ಮನವಿ ಸಲ್ಲಿಸುವವರು, ಮನವಿಕೋರುವವರು. ಹಿಂದುಳಿದ ಗ್ರಾಮಗಳಲ್ಲಿ ಶೌಚಾಲಯದ ಕೊರತೆ ಇರುತ್ತದೆ. ಶೌಚಾಲಯ ನಿರ್ಮಿಸಿ ಎಂದು ಕೋರಿ ಅಲ್ಲಿನ ಜನರು ಮೇಲಧಿಕಾರಿಗಳಿಗೆ ಮನವಿ ಮಾಡಿಕೊಳ್ಳುತ್ತಾರೆ. |
| **೩. ರೂಪದರ್ಶಿ:** | ರೂಪವನ್ನು ಹೊಂದಿದವರು. ನನ್ನ ಗೆಳತಿ ರೇಣುಕ ನೋಡಲು ತುಂಬಾ ಚೆನ್ನಾಗಿ, ತುಂಬಾ ರೂಪದರ್ಶಿಯಾಗಿದ್ದಳು. |
| **೪. ಗಗನಯಾತ್ರಿ:** | ಆಕಾಶದಲ್ಲಿ ಹಾರಾಡುವ. ವಿಮಾನದಲ್ಲಿ ಹೋಗುವವರು. ಕಲ್ಪನ ಚಾವ್ಲ ಗಗನಸಖಿಯಾಗಿದಾಳೆ. |
| **೫. ಕುಲಪತಿ:** | ವಿ.ಸಿ. ಕನ್ನಡ ವಿಶ್ವವಿದ್ಯಾಲಯ ಹಂಪಿಯ ಕುಲಪತಿಗಳು ಮಲ್ಲಿಕಾಘಂಟಿಯವರು. |
| **೬. ನರ್ಸ್** | ದಾಯಮ್ಮ. ಸಾರ್ವಜನಿಕ ಆಸ್ಪತ್ರೆಯಲ್ಲಿ ನರ್ಸ್ ರೋಗಿಗಳ ಯೋಗಕ್ಷೇಮವನ್ನು ತುಂಬಾ ಚೆನ್ನಾಗಿ ನೋಡಿಕೊಳ್ಳುತ್ತಾರೆ. |
| **೭. ಗಣ್ಯಮಾನ್ಯ:** | ಗೌರವಹೊಂದಿದವರು. ನಮ್ಮ ಊರಿನಲ್ಲಿ ದಳಪತಿಗಳು ಬಹಳ ಗಣ್ಯಮಾನ್ಯ ವ್ಯಕ್ತಿ ಆಗಿದ್ದಾರೆ. |
| **೮. ಅಭಿಮಾನಿ:** | ಪ್ರೇಕ್ಷಕ. ಕರ್ನಾಟಕದಲ್ಲಿ ನಟಸಾರ್ವಭೌಮ ಡಾ.ರಾಜಕುಮಾರರ ಅಭಿಮಾನಿಗಳು ಬಹಳ ಜನ ಇದ್ದಾರೆ. |
| **೯. ಗ್ರಾಮವಾಸಿ:** | ಗ್ರಾಮದಲ್ಲಿ ವಾಸಿಸುವರು. ನಮ್ಮ ಊರಿನಲ್ಲಿ ೫೦೦ಕ್ಕೂ ಹೆಚ್ಚು ಜನ ಗ್ರಾಮದಲ್ಲಿ ವಾಸಿಸುತ್ತಾರೆ. ಆದ್ದರಿಂದ ಅವರು ಗ್ರಾಮವಾಸಿಗಳು. |
| **೧೦. ಟೀಚರ್:** | ಮೇಡಂ, ಶಿಕ್ಷಕಿ. ಮಕ್ಕಳಿಗೆ ವಿದ್ಯೆಯನ್ನು ಕಲಿಸಿ ಮಕ್ಕಳಲ್ಲಿ ಒಳ್ಳೆತನ ಒಳ್ಳೆಗುಣ ಮೂಡಿಸುವ ಶಕ್ತಿ ಶಿಕ್ಷಕಿಗೆ ಇದೆ. |
| **೧೧. ಉದ್ಯಮಿ:** | ವ್ಯಾಪಾರಿ, ನೌಕರಿದಾರರು. ನನ್ನ ಸ್ನೇಹಿತರು ಓದು ಮುಗಿದಕೂಡಲೇ ಸ್ವಂತ ಉದ್ಯಮವನ್ನು ಹೊಂದಿರುತ್ತಾರೆ. |

೧೨. ಸಾಹಿತಿ: ಸಾಹಿತ್ಯವನ್ನು ತಿಳಿದವರು. ಸಾಹಿತ್ಯವನ್ನು ಬಲ್ಲವರು. ಅಣ್ಣ ಒಬ್ಬ ಸಾಹಿತಿಯಾಗಿದ್ದಾನೆ.

೧೩. ಚೇರ್‌ಮನ್: ಊರಿನ ಮುಖ್ಯಸ್ಥ. ನಮ್ಮ ಊರಿನ ಚೇರ್‌ಮೆನ್‌ಗಳು ಊರಿನ ಸಮಸ್ಯೆಗಳನ್ನು ಪರಿಹರಿಸುತ್ತಾರೆ.

೧೪ ಕನ್ನಡಕಧಾರಿ: ಕನ್ನಡಕ ಧರಿಸುವವರು. ನಮ್ಮ ರೂಮಿನಲ್ಲಿ ಗೌರಿ ಅಕ್ಕ ಕನ್ನಡಕವನ್ನು ಧರಿಸಿದ್ದಾಳೆ. ಕನ್ನಡಕವನ್ನು ಧರಿಸಿರುವುದರಿಂದ ಅವಳು ನೋಡಲು ಚೆನ್ನಾಗಿ ಕಾಣುತ್ತಾಳೆ.

೧೫. ಬಾಯಾಳಿ:

೧೬. ಸಿದ್ಧಾಂತಿ: ಸಿದ್ಧಾಂತವನ್ನು ಹೇಳುವವರು. ವೇದಾಂತ ಹೇಳುವವರು. ಅಜ್ಜಿಯವರು ಮನೆಯಲ್ಲಿ ಮೊಮ್ಮಕ್ಕಳಿಗೆ ಅನೇಕ ರೀತಿಯ ಸಿದ್ಧಾಂತವನ್ನು ಹೇಳುತ್ತಾರೆ.

೧೭. ಸೋಮಾರಿ: ಆಲಸ್ಯ. ಯಾವ ಕೆಲಸವನ್ನು ಅಥವಾ ಕಾಯಕವನ್ನು ಸರಿಯಾಗಿ ಮಾಡದವನನ್ನು ಸೋಮಾರಿ ಆಲಸ್ಯದವನು ಎಂದು ಕರೆಯುತ್ತಾರೆ.

೧೮. ಸೈನಿಕರು: ದೇಶವನ್ನು ಕಾಯುವವರು. ನಮ್ಮ ದೇಶದ ರಕ್ಷಣೆಮಾಡಲು ಎಷ್ಟೋ ಜನ ಸೈನಿಕರು ಪಣತೊಟ್ಟುನಿಂತಿದ್ದಾರೆ.

೧೯. ಹಠಮಾರಿ: ಹಠವಾದಿ, ಮೊಂಡ. ಚೈತ್ರಾ ತಮ್ಮ ಮನೆಯಲ್ಲಿ ತನಗೆ ಹಣ್ಣನ್ನು ಕೊಡದೆ ಇದ್ದರೇ ತುಂಬಾ ಹಠಮಾಡಿ ಅಳುತ್ತಾಳೆ.

೨೦. ಹುಡುಗುತನ: ಹುಡುಗುತನ ಮಾಡುವವ. ನಮ್ಮ ಅಣ್ಣನ ಮಗನಿಗೆ ಏನು ಮಾತನಾಡಬೇಕೆಂದು ಗೊತ್ತಾಗುವುದಿಲ್ಲ. ಅವನಿಗೆ ಹುಡುಗುತನದ ಬುದ್ಧಿ ಬಹಳ ಇದೆ.

೨೧. ರೈತ: ಕೃಷಿ ಮಾಡುವವ, ವ್ಯವಸಾಯ ಮಾಡುವವ. ನಮ್ಮ ತಂದೆ ಒಬ್ಬ ಒಳ್ಳೆಯ ಉತ್ತಮ ಬೆಳೆಯನ್ನು ಬೆಳೆದು ಒಳ್ಳೆ ರೈತನಾಗಿದ್ದಾನೆ.

೨೨. ಮಾನವ: ಮನುಷ್ಯ ಮಾನವ ಸಂಘಜೀವಿ. ಅವನು ಏಕಾಂಗಿಯಾಗಿ ಬದುಕಲಾರ. ಒಂದು ವೇಳೆ ಅವನು ಏಕಾಂಗಿಯಾಗಿ ಬದುಕಿದರೆ ಅವನು ದೇವರಾಗಿರಬೇಕು, ಇಲ್ಲ

ದೆವ್ವವಾಗಿರಬೇಕು. ಮಾನವ ಆದ ಮಾತ್ರಕ್ಕೆ ಅವನು ಎಲ್ಲರ ಜೊತೆಯಲ್ಲಿ ಬದುಕುತ್ತಾನೆಂದು ಅರಿಸ್ಟಾಟಲ್‌ರವರು ಹೇಳುತ್ತಾರೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೩**

ಹೆಸರು: ನಾಗರಾಜ ಮಲ್ಲಪ್ಪ ಕುದಿರಿಯಾಲ ವಯಸ್ಸು: ೨೨ ಲಿಂಗ: ಗಂಡು

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,) ಊರು:ಹಾವೇರಿ

| | |
|---|---|
| ೧. **ಪೌರಕಾರ್ಮಿಕರು:** | ಪ್ರಬುದ್ಧ ಕೆಲಸಗಾರರು. |
| ೨. **ಅರ್ಜಿದಾರರು:** | ಮನವಿ ಮಾಡುವವರು(ನೀಡುವವರು). |
| ೩. **ರೂಪದರ್ಶಿ:** | ರೂಪವುಳ್ಳವಳು |
| ೪. **ಗಗನಯಾತ್ರಿ:** | ಬಾಹ್ಯಾಕಾಶ ಸಂಚಾರ ಮಾಡುವವರು. |
| ೫. **ಕುಲಪತಿ:** | ವಿಶ್ವವಿದ್ಯಾಲಯದ ಮುಖ್ಯಸ್ಥರು. |
| ೬. **ನರ್ಸ್:** | ವೈದ್ಯ ಸಹಾಯಕರು. |
| ೭. **ಗಣ್ಯಮಾನ್ಯ:** | ಗೌರವಕ್ಕೆ ಪಾತ್ರರಾದವರು. |
| ೮. **ಅಭಿಮಾನಿ:** | ಅಭಿಮಾನವುಳ್ಳವರು. |
| ೯. **ಗ್ರಾಮವಾಸಿ:** | ಗ್ರಾಮದಲ್ಲಿ ವಾಸಿಸುವ. |
| ೧೦. **ಟೀಚರ್:** | ಶಿಕ್ಷಕ ಪದದ ಇಂಗ್ಲಿಷ್ ಪದ. |
| ೧೧. **ಉದ್ಯಮಿ:** | ಉದ್ಯಮದಲ್ಲಿ ತೊಡಗಿರುವವರು. |
| ೧೨. **ಸಾಹಿತಿ:** | ಸಾಹಿತ್ಯದಲ್ಲಿ ತೊಡಗಿಕೊಂಡಿರುವವರು. |
| ೧೩. **ಚೇರ್‌ಮನ್:** | ಅಧ್ಯಕ್ಷರು. |
| ೧೪ **ಕನ್ನಡಕಧಾರಿ:** | ಕನ್ನಡಕ ಧರಿಸುವವರು. |
| ೧೫. **ಬಾಯಾಳಿ:** | ಯಾವಾಗಲೂ ಮಾತನಾಡುವವರು. |
| ೧೬. **ಸಿದ್ಧಾಂತಿ:** | ಸಿದ್ಧಾಂತ ಮಂಡಿಸಿದವರು. |
| ೧೭. **ಸೋಮಾರಿ:** | ಆಲಸ್ಯತನ ಉಳ್ಳವರು. |
| ೧೮. **ಸೈನಿಕರು:** | ರಕ್ಷಣೆಗೆ ನಿಯುಕ್ತರಾದವರು. |
| ೧೯. **ಹಠಮಾರಿ:** | ರಚ್ಚೆಯುಳ್ಳ. |
| ೨೦. **ಹುಡುಗುತನ:** | ಚಂಚಲ ಮನಸ್ಸುಳ್ಳ. |
| ೨೧. **ರೈತ:** | ಹೊಲ ಉಳುಮೆ ಮಾಡುವವರು. |
| ೨೨. **ಮಾನವ:** | ಪ್ರಾಣಿಗಿಂತ ಹೆಚ್ಚು ಬುದ್ಧಿಯುಳ್ಳ ಪ್ರಾಣಿ |

**ಪ್ರಾಯೋಗಿಕ ಅಧ್ಯಯನದ ಮಾದರಿ -೪**

ಹೆಸರು: ಸಂಗಮೇಶ್ ಬಿ ವಯಸ್ಸು: ೨೨ ಲಿಂಗ: ಗಂಡು

ವಿದ್ಯಾಭ್ಯಾಸ: (ಎಂ.ಎ.,ಪಿಎಚ್.ಡಿ.,) ಊರು: ಕೊಪ್ಪಳ

೧. **ಪೌರಕಾರ್ಮಿಕರು:** ಸಾಮಾನ್ಯವಾಗಿ ನಗರಸಭೆ ಅಥವಾ ಮಹಾನಗರಪಾಲಿಕೆಗಳಲ್ಲಿ ಕೆಲಸ ಮಾಡುವವರು, ಕಡಿಮೆ ವೇತನ ಪಡೆಯುವವರು. ಪೌರಕಾರ್ಮಿಕರು ನಿನ್ನೆ ಪ್ರತಿಭಟನೆ ಮಾಡುತ್ತಿದ್ದರು.

೨. **ಅರ್ಜಿದಾರರು:** ಪಡಿತರ ಚೀಟಿ ನೀಡುವವರಿಗಾಗಿ ಅರ್ಜಿದಾರರು ಕಾಯುತ್ತ ಕುಳಿತರು.

೩. **ರೂಪದರ್ಶಿ:** ರೂಪ ಉಳ್ಳವರು. ಇತ್ತೀಚಿನ ದಿನಗಳಲ್ಲಿ ಪ್ರತಿಯೊಬ್ಬರು ರೂಪದರ್ಶಿಗಳಾಗಲು ಬಯಸುತ್ತಿದ್ದಾರೆ.

೪. **ಗಗನಯಾತ್ರಿ:** ಖಗೋಳ ಯಾತ್ರಿಗಳು. ರಷ್ಯಾದಲ್ಲಿ ಹೆಚ್ಚೆಚ್ಚು ಗಗನಯಾತ್ರೆ ಕೈಗೊಳ್ಳುತಿದ್ದಾರೆ.

೫. **ಕುಲಪತಿ:** ವಿಶ್ವವಿದ್ಯಾಲಯಗಳ ಆಡಳಿತದ ಮುಖ್ಯಸ್ಥರು. ಕುಲಪತಿಗಳು ಈ ಕಾರ್ಯಕ್ರಮಕ್ಕೆ ಬರುತ್ತಾರೆ.

೬. **ನರ್ಸ್:** ಶುಶ್ರೂಷಕರು. ದವಾಖಾನೆಯಲ್ಲಿ ನರ್ಸ್‌ಗಳು ಇರುತ್ತಾರೆ.

೭. **ಗಣ್ಯಮಾನ್ಯ:** ಉನ್ನತರು. ಈ ಸಭೆಗೆ ಗಣ್ಯಮಾನ್ಯರೆಲ್ಲರೂ ಆಗಮಿಸುತ್ತಾರೆ.

೮. **ಅಭಿಮಾನಿ:** ಆರಾಧಕರು. ಅವರು ಆ ನಟನ ಅಭಿಮಾನಿಗಳು.

೯. **ಗ್ರಾಮವಾಸಿ:** ಹಳ್ಳಿಯಲ್ಲಿರುವವರು. ಬಹುಪಾಲು ಗ್ರಾಮವಾಸಿಗಳು ರೈತರು.

೧೦. **ಟೀಚರ್:** ಗುರುಗಳು. ಶಾಲೆಗಳಲ್ಲಿ ಟೀಚರ್ ಬೋಧಿಸುತ್ತಾರೆ.

೧೧. **ಉದ್ಯಮಿ:** ಬೃಹತ್ ಪ್ರಮಾಣದಲ್ಲಿ ವ್ಯಾಪಾರ ಉಳ್ಳವನು. ಭಾರತದಲ್ಲಿ ಉದ್ಯಮಿಗಳು ಸಿರಿವಂತರಾಗುತ್ತಾರೆ, ಕಾರ್ಮಿಕರಲ್ಲ.

೧೨. **ಸಾಹಿತಿ:** ಸಹಿತವಾಗಿ ಬರೆಯುವರು. ಇತ್ತೀಚಿನ ದಿನಗಳಲ್ಲಿ ಸಾಹಿತಿಗಳ ಸಂಖ್ಯೆ ಬೆಳೆಯುತ್ತಿದೆ.

೧೩. **ಚೇರ್‌ಮನ್:** ಮುಖ್ಯಸ್ಥರು. ಕಂಪನಿಯ ಚೇರ್‌ಮನ್‌ಗಳು ಪ್ರತಿಯೊಂದು ವ್ಯವಹಾರದಲ್ಲಿ ಭಾಗಿಯಾಗುತ್ತಾರೆ.

೧೪ **ಕನ್ನಡಕಧಾರಿ:** ಚಾಳೀಸ್ ಹಾಕಿರುವವನು. ಸಿಟಿಯಲ್ಲಿ ವಯಸ್ಸಾದವರು ಬಹುಪಾಲು ಕನ್ನಡಕಧಾರಿಗಳಾಗಿರುತ್ತಾರೆ.

೧೫. **ಬಾಯಾಳಿ:** ಸುಮ್ನೆ ಸುಮ್ನೆ ಪ್ರತಿ ವಿಷಯದಲ್ಲೂ ಮಾತನಾಡುವವನು. ಅವನು ತುಂಬಾ ಬಾಯಾಳಿ.

೧೬. ಸಿದ್ಧಾಂತಿ: ಒಂದು ತರ್ಕಕ್ಕೆ ಕಟ್ಟುಬಿದ್ದವ ಅಥವಾ ಹೊಸ ತರ್ಕ ಆಲೋಚಿಸುವವ. ಸಿದ್ಧಾಂತಿಗಳು ಸಾಯುತ್ತಾರೆ. ಆದರೂ ಅವರು ಕಟ್ಟಿಕೊಟ್ಟ ಸಿದ್ಧಾಂತಗಳು ಸಾಯಲಾರವು.

೧೭. ಸೋಮಾರಿ: ಪ್ರತಿಯೊಂದು ಕೆಲಸಕ್ಕೂ ಬೇಸರ ಪಟ್ಟುಕೊಳ್ಳುವವ. ಸೋಮಾರಿಗಳಿಗೆ ಎಲ್ಲರೂ ಬೈಯುತ್ತಾರೆ.

೧೮. ಸೈನಿಕರು: ಯೋಧರು ರಾಜ್ಯ ಅಥವಾ ದೇಶದ ರಕ್ಷೆಗಾಗಿ ಹೋರಾಡುವವರು. ಸೈನಿಕರು ದೇಶಸೇವೆಗಾಗಿ ತಮ್ಮ ಪ್ರಾಣ ಮುಡಿಪಾಗಿಟ್ಟಿದ್ದಾರೆ.

೧೯. ಹಠಮಾರಿ : ಹಿಡಿದ ಕೆಲಸ ಎಷ್ಟೇ ಕಷ್ಟವಿದ್ದರೂ ಚಲಬಿಡದಿರುವವ. ಹಲವು ಬಾರಿ ಹಠಮಾರಿತನದಿಂದ ಅಪಾಯ ಉಂಟು.

೨೦. ಹುಡುಗುತನ: ಬುದ್ಧಿಯಲ್ಲಿ ವಿಕಸಿತವಾಗದಿರುವುದು. ಕೆಲವರಿಗೆ ವಯಸ್ಸಾದರೂ ಹುಡುಗತನದ ಬುದ್ಧಿ ಇರುತ್ತದೆ.

೨೧. ರೈತ: ಕೃಷಿ ಕಾಯಕ ಹೊಂದಿರುವವ. ಇಂದು ರೈತರಾದವರಿಗೆ ಬಹುಪಾಲು ಸಾವೇಗತಿ.

೨೨. ಮಾನವ: ಜೀವಂತ ಪ್ರಾಣಿಗಳಲ್ಲಿ ಬುದ್ಧಿ ಶಕ್ತಿಯನ್ನು ಹೊಂದಿರುವ ಒಂದು ಪ್ರಾಣಿ. ಪ್ರಾಣಿಗಳಲ್ಲಿ ಮಾನವ ತನ್ನ ಬುದ್ಧಿವಂತಿಕೆಯಿಂದ ಶ್ರೇಷ್ಠನಾಗಿದ್ದಾನೆ.

**ಪ್ರಾಯೋಗಿಕ ಅಧ್ಯಯನದ ಮಾದರಿ . ೫**

ಹೆಸರು: ರಾಮಚಂದ್ರ ಶಿ.ಪಡೆಸೂರ ವಯಸ್ಸು: ೨೭ ಲಿಂಗ: ಗಂಡು

ವಿದ್ಯಾಭ್ಯಾಸ: (ಎಂ.ಫಿಲ್.,) ಊರು: ಭಂಡಿವಾಡ, ಹುಬ್ಬಳಿ.

೧. ಪೌರಕಾರ್ಮಿಕರು: ಹಿರಿಯ ಕೆಲಸಗಾರರು. ಕಾಯಕವೇ ಪರಮಾನ್ನವೆಂದವರು ಪೌರಕಾರ್ಮಿಕರು.

೨. ಅರ್ಜಿದಾರರು: ಅವಶ್ಯವಿದ್ದ ಸಂಸ್ಥೆಗೆ ಬೇಡಿಕೆ ಅವಶ್ಯವಿದ್ದಲ್ಲಿ ಹೊರಟವರು ಅರ್ಜಿದಾರರು.

೩. ರೂಪದರ್ಶಿ: ರೂಪವನ್ನು ತೋರುವವಳು. ಸೌದರ್ಯವನ್ನು ಪ್ರದರ್ಶಿಸುವಳು ರೂಪದರ್ಶಿ.

೪. ಗಗನಯಾತ್ರಿ: ವಿಮಾನದಲ್ಲಿ ಉಪಚಾರಿಣಿ. ಪ್ರಯಾಣಿಕರ ಕುಶಲೋಪಚಾರಿಣಿ ಗಗನಯಾತ್ರಿ.

೫. ಕುಲಪತಿ: ಒಂದು ಸಂಸ್ಥೆಯ ಮುಖ್ಯಸ್ಥರು. ವಿವಿಯ ಮುಖ್ಯಸ್ಥನೇ ಕುಲಪತಿ.

೬. ನರ್ಸ್: ಆಸ್ಪತ್ರೆಯ ಸೇವಕರು. ರೋಗಿಗಳಿಗೆ ಸೇವೆ ಮಾಡುವವರು ನರ್ಸ್.

೭. ಗಣ್ಯಮಾನ್ಯ: ಮೇಲ್ದರ್ಜೆಯವರು. ಸಾಧನೆಯ ಉತ್ತುಂಗದಲ್ಲಿದ್ದವರು ಗಣ್ಯರು.

೮. ಅಭಿಮಾನಿ: ಪ್ರೇಕ್ಷಕ. ಸಾಧನೆಯ ಉತ್ತುಂಗದಲ್ಲಿದ್ದವರು ಗಣ್ಯರು.

೯. ಗ್ರಾಮವಾಸಿ: ರಹವಾಸಿ. ಹಲವಾರು ವರ್ಷಗಳಿಂದ ಗ್ರಾಮದಲ್ಲಿರುವವನು ಗ್ರಾಮವಾಸಿ.

೧೦. ಟೀಚರ್: ಶಿಕ್ಷಕ. ಪ್ರಾಥಮಿಕ ಶಿಕ್ಷಣದ ಹಂತವೇ ಟೀಚರ್.

೧೧. ಉದ್ಯಮಿ: ವ್ಯಾಪಾರಿ. ವಾಣಿಜ್ಯ ಕ್ಷೇತ್ರದಲ್ಲಿರುವವನೇ ಉದ್ಯಮಿ.

೧೨. ಸಾಹಿತಿ: ಬರಹಗಾರ. ಸಾಹಿತ್ಯದಲ್ಲಿ ಅಪಾರ ಕೃಷಿ ಮಾಡಿದವನೇ ಸಾಹಿತಿ.

೧೩. ಚೇರ್‌ಮನ್: ಕಮಿಟಿಯ ಮುಖ್ಯಸ್ಥ. ಕಮಿಟಿಯನ್ನು ಉತ್ತಮವಾಗಿ ಮುನ್ನಡೆಸಿಕೊಂಡು ಹೋಗುವಲ್ಲಿ ಚೇರ್‌ಮನ್ ಮುಖ್ಯ.

೧೪ ಕನ್ನಡಕಧಾರಿ: ಕನ್ನಡ ಮಾರ್ಗದರ್ಶಿ. ಹಿರಿಯ ಸಾಹಿತಿಗಳ ಉಪದೇಶವೇ ಕನ್ನಡಕಧಾರಿ.

೧೫. ಬಾಯಾಳಿ: ಮಾತುಗಾರ. ಮಾತನ್ನೇ ಬಂಡವಾಳವಾಗಿರಿಸಿದವನು ಬಾಯಾಳಿ.

೧೬. ಸಿದ್ಧಾಂತಿ: ಕಟ್ಟುನಿಟ್ಟಿನ. ಅಂದುಕೊಂಡಂತೆ ಇರುವವನು ಸಿದ್ಧಾಂತಿಕಗಾರ.

೧೭. ಸೋಮಾರಿ: ಉದಾಸೀನಗಾರ. ಕೆಲಸದಲ್ಲಿ ಹಿಂದೇಟು ಹಾಕುವವನು ಸೋಮಾರಿ.

೧೮. ಸೈನಿಕರು: ದೇಶ ರಕ್ಷಕರು. ದೇಶ ಸೇವೆಗಾಗಿ ದುಡಿಯುವವರೇ ಸೈನಿಕರು.

೧೯. ಹಠಮಾರಿ: ಛಲವುಳ್ಳವನು. ಬಿಡದೆ ಸಾಧಿಸುವವನು ಹಠಮಾರಿ.

೨೦. ಹುಡುಗುತನ: ಮುಗ್ಧ. ಎಲ್ಲದರಲ್ಲೂ ಮುಗ್ಧತೆಯನ್ನು ಕಾಣುವವ.

೨೧. ರೈತ: ಕೃಷಿಕ. ದೇಶದ ಬೆನ್ನೆಲುಬು ಈ ರೈತ.

೨೨. ಮಾನವ: ಮನುಷ್ಯ. ಮೂಳೆ ಮಾಂಸದಿಂದ ಬಂದ ಶರೀರವೇ ಮಾನವ.

**ಪ್ರಾಯೋಗಿಕ ಅಧ್ಯಯನದ ಮಾದರಿ . ೬**

ಹೆಸರು: ಶರೀಫ್ ಹಸಮಕಲ್ ವಯಸ್ಸು: ೩೦ ಲಿಂಗ: ಗಂಡು

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,) ಊರು: ಹಸಮಕಲ್

೧. **ಪೌರಕಾರ್ಮಿಕರು:** ಇಂದಿನ ದಿನಮಾನಗಳಲ್ಲಿ ಪೌರಕಾರ್ಮಿಕರ ಬದುಕು ಚಿಂತಾಜನಕವಾಗಿದೆ.

೨. **ಅರ್ಜಿದಾರರು:** ವಿಚಾರಣೆಗೆ ಆಹ್ವಾನಿಸುವುದು. ಇಂದಿನ ಯುವ ಪೀಳಿಗೆ ಉದ್ಯೋಗಕ್ಕಾಗಿ ಅರ್ಜಿ ಸಲ್ಲಿಸುವುದು ಒಂದು ಬಗೆಯಲ್ಲಿ ವಿಶಿಷ್ಟವಾಗಿದೆ. ಉದಾಹರಣೆಗೆ ಆನ್‌ಲೈನ್‌ನಲ್ಲಿ ಅರ್ಜಿಸಲ್ಲಿಸುವುದು.

೩. **ರೂಪದರ್ಶಿ:** ಸೌಂದರ್ಯ ಪ್ರದರ್ಶನ. ಇಂದಿನ ಅನೇಕ ಯುವತಿಯರು ಈ ರೂಪದರ್ಶಿಯ ನೆಪದಲ್ಲಿ ಹುಚ್ಚುತನದಲ್ಲಿ ಭವಿಷ್ಯವನ್ನು ಹಾಳುಮಾಡಿಕೊಳ್ಳುತ್ತಿದ್ದಾರೆ.

೪. **ಗಗನಯಾತ್ರಿ:** ಆಕಾಶಕ್ಕೆ ಪ್ರಯಾಣ ಬೆಳೆಸುವುದು. ವಿಜ್ಞಾನದ ಬೆಳವಣಿಗೆಯಿಂದ ನಮ್ಮ ಅನ್ವೇಷಣೆಗಳು ಆಕಾಶದಲ್ಲಿ ಗಗನಯಾತ್ರಿಗಳ ಮೂಲಕ ನಡೆಯುತ್ತಿವೆ.

೫. **ಕುಲಪತಿ:** ವಿಶ್ವವಿದ್ಯಾಲಯದ ಮುಖ್ಯಸ್ಥರು. ಒಂದು ವಿಶ್ವವಿದ್ಯಾಲಯದ ಘನತೆ ಗೌರವವನ್ನು ಕಾಪಾಡುವ, ರೂಪಿಸುವಲ್ಲಿ ಕುಲಪತಿಯವರಿಗೆ ಹೆಚ್ಚಿನ ಜವಾಬ್ದಾರಿ ಇರುತ್ತದೆ. ಇದೊಂದು ಶ್ರೇಷ್ಠ ಹುದ್ದೆಯಾಗಿದೆ. ಜೀವಪರವಾದ ಬರಹಗಳನ್ನು, ಚಿಂತನೆಗಳನ್ನು ಹೊರಡಿಸುವಲ್ಲಿ ಹೆಚ್ಚಿನ ಅಧಿಕಾರವಿದೆ.

೬. **ನರ್ಸ್:** ಆಸ್ಪತ್ರೆಯಲ್ಲಿ ರೋಗಿಗಳಿಗೆ ಶುಶ್ರೂಷೆ ಮಾಡುವ ಮಹಿಳೆ. ನರ್ಸ್ ಒಂದು ರೀತಿಯಲ್ಲಿ ಒಡಹುಟ್ಟಿದವಳಾಗಿರುತ್ತಾಳೆ.

೭. **ಗಣ್ಯಮಾನ್ಯ:** ಗೌರವಾನ್ವಿತ ವ್ಯಕ್ತಿ. ಹಳ್ಳಿಗಳಲ್ಲಿ ಗಣ್ಯಮಾನ್ಯರೆನಿಸಿ ಕೊಂಡವರು ಸಹ ಮನೆ ಮುರಿಯುವ ಕೆಲಸದಲ್ಲಿ ತೊಡಗಿರುತ್ತಾರೆ.

೮. **ಅಭಿಮಾನಿ:** ತನ್ನ ಇಚ್ಛೆಯ ಸ್ವರೂಪ. ನಮ್ಮ ಭಾಷೆ ಬದುಕು ನಾಡು ನುಡಿಯ ಬಗ್ಗೆ ಅಭಿಮಾನಿಯಾಗಿರಬೇಕು.

೯. **ಗ್ರಾಮವಾಸಿ:** ಹಳ್ಳಿಗಳಲ್ಲಿ ಗ್ರಾಮಗಳಲ್ಲಿ ವಾಸಿಯಾಗಿರುವುದು. ಇಂದಿನ ಆಧುನಿಕ ಜ್ಞಾನ ಗ್ರಾಮವಾಸಿಗೂ ಒಳಹೊಕ್ಕಿದೆ

ಗ್ರಾಮವಾಸಿಯು ಆರೋಗ್ಯದಿಂದ ಹೆಚ್ಚಿನ ವರ್ಷಗಳ ಕಾಲ ಬದುಕಲು ಯೋಗ್ಯವಾದ ಪದ್ಧತಿ.

೧೦. ಟೀಚರ್: ಶಿಕ್ಷಕ. ಅಕ್ಷರ ಕಲಿಸಿ ಜ್ಞಾನದರ್ಶನ ನೀಡುವುದು ಮಹತ್ತರ ಕೆಲಸ.

೧೧. ಉದ್ಯಮಿ: ಕೆಲಸ ಮಾಡುವವ.

೧೨. ಸಾಹಿತಿ: ಬರಹಗಾರ. ಸಾಹಿತಿ ಸಮುದಾಯದ ಧ್ವನಿಯಾಗಿ, ಕವಿಯಾಗಿ ಇರಬೇಕು.

೧೩. ಚೇರ್‌ಮನ್: ಮುಖ್ಯಸ್ಥ. ನಮ್ಮೂರಿನ ಪಂಚಾಯಿತಿ ಚೇರ್‌ಮನ್ ಅನುದಾನವನ್ನೆಲ್ಲಾ ನುಂಗಿ ನೀರು ಕುಡಿದ ಮಹಾನ್ ಪುರುಷ.

೧೪ ಕನ್ನಡಕಧಾರಿ: ಕನ್ನಡಕ ಧರಿಸಿರುವನು. ಕಣ್ಣಿಗಷ್ಟೆ ಕನ್ನಡಕ ಬೇಕಿಲ್ಲ. ಇಂದಿನ ದಿನಗಳಲ್ಲಿ ಮನಸ್ಸಿಗೂ ಕನ್ನಡಕಧಾರಿಯಾಗುವ ಅಗತ್ಯವಿದೆ.

೧೫. ಬಾಯಾಳಿ: ಹೆಚ್ಚು ಮಾತನಾಡುವವರು. ನನ್ನ ಗೆಳತಿ ದೊಡ್ಡ ಬಾಯಾಳಿ.

೧೬. ಸಿದ್ಧಾಂತಿ: ತತ್ವಕ್ಕೆ ಬದ್ಧನಾದವನು. ನಮ್ಮೂರಿನ ಒಬ್ಬ ರೈತನೂ ಸಹ ಸಿದ್ಧಾಂತಿ.

೧೭. ಸೋಮಾರಿ: ಕೆಲಸ ಮಾಡದೇ ಸಮಯ ವ್ಯರ್ಥಮಾಡುವವನು. ಇತ್ತೀಚೆಗೆ ನಾನು ಬಹುದೊಡ್ಡ ಸೋಮಾರಿ ಆಗಿದ್ದೇನೆ.

೧೮. ಸೈನಿಕರು: ದೇಶ ಕಾಯುವವ. ಗಡಿಗಳಲ್ಲಿ ಪ್ರಕೃತಿಯ ವಿಕೋಪವನ್ನು ಸಹಿಸಿಕೊಂಡು ಹೊಟ್ಟೆಪಾಡಿಗಾಗಿ ದೇಶದ ನೆಪವೊಡ್ಡಿ ಬಡಜನರು ಸೈನಿಕರಾಗಿ ಕೆಲಸಕ್ಕೆ ಸೇರಿಕೊಂಡು ಹುತಾತ್ಮರಾಗುತ್ತಿದ್ದಾರೆ.

೧೯. ಹಠಮಾರಿ: ಯಾವುದನ್ನೂ ಒಪ್ಪಿಕೊಳ್ಳದೇ, ತನ್ನತನ ಬಿಡಲಾರದೇ ಇರುವುದು. ಹಠಮಾರಿ ತನ್ನ ತಾನೆ ನಾಶಮಾಡಿಕೊಳ್ಳುವ ಗುಣ.

೨೦. ಹುಡುಗುತನ: ತುಂಟತನ. ಪ್ರತಿಯೊಬ್ಬರಿಗೂ ಹುಡುಗುತನ ಇರಲೇಬೇಕು.

೨೧. ರೈತ: ವ್ಯವಸಾಯ. ರಾಜಕೀಯ ಹುನ್ನಾರಿಗೆ ರೈತನ ಕೊರಳಿಗೆ ಉರುಳೇ ಗತಿಯಾಗಿದೆ.

೨೨. ಮಾನವ: ಮನುಷ್ಯ. ನಾವೆಲ್ಲರು ಮನುಷ್ಯರಾಗೋಣ, ಮನುಷ್ಯತ್ವ ರೂಢಿಸಿಕೊಳ್ಳೋಣ.

**ಮಾದರಿ ೩. ಈ ಕೆಳಗಿನ ಬರಗಳು ಗಂಡಿನ ಅಥವಾ ಹೆಣ್ಣಿನ ಬರಹವೆಂದು ಗುರುತಿಸಿ. ಹಾಗೆ ಗುರುತಿಸಲು ತಮಗೆ ಅನಿಸಿದ ಕಾರಣಗಳನ್ನು ದಾಖಲಿಸಿ. ಗುರುತಿಸಲು ಸಾಧ್ಯವಾಗದಿದ್ದಲ್ಲಿ ಸಾಧ್ಯವಾಗಿಲ್ಲ ಎಂದು ಗುರುತಿಸಿ.**

**ಬರಹ–೧ ಲೇಖಕರು: ಹನುಮಂತ ಹಾಲಿಗೇರಿ, ಕಾದಂಬರಿ: ಕೆಂಗುಲಾಬಿ, ಪ್ರಕಟಣೆ–೨೦೧೧.**

ಅವತ್ತು ಗಿರಾಕಿಯೊಂದಿಗೆ ಮಲಗಿದ್ದಾಗ ಜೋರಾಗಿ ಬಾಗಿಲು ಬಡಿದ ಶಬ್ದವಾಯಿತು. ಗಿರಾಕಿಯೊಂದಿಗೆ ಒಳಗಿದ್ದಾಗ ಯಾರೂ ಕೂಡ ಇದುವರೆಗೆ ಬಾಗಿಲು ಬಡಿದಿರಲಿಲ್ಲ. ಅವಸರವಾಗಿ ಸೀರೆ ಸುತ್ತಿಕೊಂಡು ಜಂಪರ್ ಬುಡ್ಡಿ ಹಾಕಿಕೊಳ್ಳುತ್ತಾ ಬಾಗಿಲು ತೆಗೆದರೆ ಎದುರಿಗೆ ಮಹಿಳಾ ಪೋಲಿಸರು ಮತ್ತು ಕ್ಯಾಮರಾ ಹಿಡಿದುಕೊಂಡ ಪಡ್ಡೆ ಪತ್ರಕರ್ತರು ಕಂಡರು. ಹೆದರಿದ ನಾನು ಹಿಂದಕ್ಕೆ ಗಿರಾಕಿ ಕಡೆ ನೋಡಿದರೆ ಆತ ಅಲ್ಲಿಲ್ಲ. ಗಿರಾಕಿ ಪಲ್ಲಂಗದ ಕೆಳಗೆ ಅವಿತುಕೊಂಡು ಬಿಟ್ಟಿದ್ದ. ನನ್ನ ಮುಖವನ್ನು ಅನುಮಾನದಿಂದ ನೋಡುತ್ತ ಒಳಬಂದ ಪೋಲಿಸರು ಪಲ್ಲಂಗದ ಕೆಳಗಡೆ ಕೈಯಾಡಿಸಿ ಬತ್ತಲೆ ಮೈಯಲ್ಲಿದ್ದ ಗಿರಾಕಿಯನ್ನು ಮೇಲೆತ್ತಿ ಎಳೆದುಕೊಂಡರು. ನನ್ನ ರಟ್ಟೆ ಹಿಡಿದುಕೊಂಡು ವಠಾರ ಮೆಟ್ಟಿಲಿಳಿಯುತ್ತಾ ಕರೆದುಕೊಂಡು ಹೋಗುತ್ತಿದ್ದ ಮಹಿಳಾ ಪೊಲೀಸ್ ಪೇದೆ ಒಮ್ಮೆಲೆ ನನ್ನ ಜಂಪರಿನೊಳಕ್ಕೆ ಕೈ ಇಳಿ ಬಿಟ್ಟು ಅಲ್ಲಿದ್ದ ಪರ್ಸ್ ತೆಗೆದುಕೊಂಡು ತನ್ನ ಜಂಪರಿನೊಳಕ್ಕೆ ತುರುಕಿಕೊಂಡಳು. ನಾನು ಪ್ರತಿಭಟಿಸಲು ಬಾಯಿ ತೆರೆಯುವುದರೊಳಗಾಗಿ ಬಾಯಿ ಮೇಲೆ ಜೋರಾಗಿ ಒಂದು ಗುದ್ದು ಬಿತ್ತು. ರತ್ನಮ್ಮ ಅವತ್ತು ಎಲ್ಲಿದ್ದಳೋ ಗೊತ್ತಿಲ್ಲ.

ಗಿರಾಕಿಗಳನ್ನೇನೋ ಅವರ ಸಂಬಂಧಿಕರು ಮತ್ತು ಗೆಳೆಯರು ಪೋಲಿಸರಿಗೆ ಲಂಚಕೊಟ್ಟೋ, ಅವರ ಮುಖಕ್ಕೆ ಉಗಿಯುತ್ತ ಕರೆದುಕೊಂಡು ಹೋದರು. ಕೆಲವು ಗಿರಾಕಿಗಳು ಅಲ್ಲಿಂದ ಪಾರಾಗಲು ತಮ್ಮಲ್ಲಿದ್ದ ಹಣವನ್ನೆಲ್ಲ ಸುರಿಯಬೇಕಾಯಿತು. ಆದರೆ ನಮ್ಮನ್ಯಾರು ಬಿಡಿಸಿಕೊಂಡು ಕರೆದುಕೊಂಡು ಹೋಗಬೇಕು. ನನಗೆ ನನ್ನ ಮಗುವಿನದೇ ಚಿಂತೆಯಾಗಿತ್ತು. ಇನ್ನೂ ನನ್ನ ಎದೆ ಹಾಲು ಕುಡಿಯುತ್ತಿದ್ದ ಹಸುಗೂಸು ಅದು. ಆದ್ರೆ ಇತ್ತೀಚೆಗಷ್ಟೇ ನಾನು ಗಿರಾಕಿಯೊಂದಿಗೆ ಇದ್ದಾಗ ಹೊಟ್ಟೆ ಹಸಿದು ಕಿರುಚಿಕೊಳ್ಳುವುದನ್ನು ನೋಡಲಾರದೆ ಮುದುಕಿ ಆಕೆಗೆ ಬಾಟಲಿ ಹಾಲು ಉಣಿಸುತ್ತಿದ್ದಳು. ಇದಕ್ಕೆ ಇನ್ನೊಂದು ಕಾರಣವಿತ್ತು. ರತ್ನಮ್ಮ ನನ್ನ ಮಗುವಿಗೆ ಹಾಲು ಕುಡಿಸುವುದನ್ನು ನೋಡಿದರೆ ಕೆಂಡ ಕಾರುತ್ತಿದ್ದಳು. 'ಹಾಲು ಕುಡಿಸಿ ಎದೆ ಹಾಳು ಮಾಡ್ಕೋಬೇಡ. ನಿನ್ನ ಎದೆ ಚಂದ ಇದ್ರ ಮಾತ್ರ ನಿನಗೆ ಇಲ್ಲಿ ಬಾಳು ಮಾಡಾಕ ಅಕ್ಕೈತಿ' ಅಂತ ರತ್ನಮ್ಮ ಯಾವಾಗಲು ಹೇಳುತ್ತಲೆ ಇರುತ್ತಿದ್ದಳು.

ನಾನು ಹೇಗಾದರೂ ಮಾಡಿ ಸ್ಟೇಷನ್ನಿಂದ ಪಾರಾಗಲು ಹವಣಿಸುತ್ತಿದ್ದೆನಾದರೂ ದಾರಿ ಗೊತ್ತಾಗದೆ ಚಡಪಡಿಸುತ್ತಿದೆ. ಉಳಿದ ನನ್ನ ಸಹುದ್ಯೋಗಿಗಳು ಜೈಲಿನಲ್ಲಿಯೂ ತಮಾಷೆ ಮಾಡಿಕೊಂಡು ಮಜವಾಗಿಯೆ ಇದ್ದರು. ಇದು ಅವರಿಗೆ ರೂಢಿಯಾಗಿ ಬಿಟ್ಟಂತೆ ಕಂಡಿತು. ಹೀಗೆ ಒಬ್ಬೊಬ್ಬರೇ ಸ್ಟೇಷನ್ನಿನಲ್ಲಿ ಇರಬೇಕಾಗಿ ಬಂದಾಗ ಪೋಲಿಸರು ಸಾಮೂಹಿಕವಾಗಿ ಉಪಯೋಗಿಸಿಕೊಂಡದ್ದು ಉಂಟು. ಆದರೆ ಈಗ ನಮ್ಮದೆ

ಏಳೆಂಟು ಹೆಂಗಸರ ಗುಂಪಿದ್ದುದರಿಂದ ನಮ್ಮ ಹತ್ತಿರಕ್ಕೆ ಬರುವ ಧೈರ್ಯವನ್ನು ಪೋಲಿಸರು ಮಾಡಲಿಲ್ಲ. ಅಂದು ರಾತ್ರಿ ಹೇಗೋ ಕಷ್ಟಪಟ್ಟು ಸ್ಟೇಷನ್ನಿನಲ್ಲಿಯೆ ಕಳೆದೆವು.

ಮರುದಿನ ನಮ್ಮನ್ನು ಹುಡುಕಿಕೊಂಡು ರತ್ನಮ್ಮನ ಪ್ರಿಯಕರನೆನಿಸಿಕೊಂಡಿದ್ದ ರತ್ನಮ್ಮ ಇಲ್ಲದಿದ್ದಾಗ ಗಲ್ಲೆ ಮೇಲೆ ಕೂಡ್ರುತ್ತಿದ್ದ ಧರ್ಮಣ್ಣ ಒಳ ಬಂದಿದ್ದ. ಆತನನ್ನು ಅದ್ಹೇಗೋ ಪೋಲಿಸರು ಒಳಗೆ ಬಿಟ್ಟಿದ್ದರು. ಇಲ್ಲಿಂದ ಬಿಡಿಸಿಕೊಂಡು ಹೋಗಲು ಸಾವಿರಾರು ರೂಪಾಯಿ ಖರ್ಚಾಗುತ್ತವೆ. ರತ್ನಮ್ಮ ೧೦ ಸಾವಿರ ರೂ.ಗಳನ್ನು ಹೊಂದಿಸಿ ನಿಮ್ಮನ್ನು ಬಿಡಿಸಿಕೊಳ್ಳಾಕ ತಯಾರದಾಳ. ನೀವು ಮೇಲಿನ ಖರ್ಚುಗಳಿಗಾಗಿ ಪ್ರತಿಯೊಬ್ಬರೂ ೫೦೦ ರೂ.ಗಳನ್ನು ಕೊಡಬೇಕು ಎಂದು ಕರಾರು ಮಾಡಿದ. ಆದರೆ ನಮ್ಮಲ್ಲಿ ಯಾರೊಬ್ಬರಲ್ಲಿಯೂ ಹಣವಿರಲಿಲ್ಲ. ಅದು ಅವನಿಗೂ ಗೊತ್ತಿತ್ತು. 'ಈಗ ನೀವು ಹಣ ಕೊಡ್ರಾ. ನಮ್ಮನ್ನು ಇಲ್ಲಿಂದ ಬಿಡಿಸಿಕೊಂಡು ಹೋದ ಮೇಲೆ ಬೇಕಾದರೆ ದುಡಿದು ನಿಮ್ಮ ಹಣವನ್ನು ಮುಟ್ಟಿಸುತ್ತಿವಿ' ಎಂದು ನಾನು ಪರಿಪರಿಯಿಂದ ಬೇಡಿಕೊಂಡೆ. ಆದರೆ ಅದಕ್ಕೆ ಧರ್ಮಣ್ಣ ಮಣಿಯಲಿಲ್ಲ. ಆಗ ರೂಪಕ್ಕ ಧರ್ಮಣ್ಣನಿಂದಲೆ ಮೊಬೈಲ್ ಇಸಿದುಕೊಂಡು ಫೋನ್‌ಮಾಡಿದಳು. ಅತ್ತಕಡೆಯಿಂದ ಬಾಬು ಮಾತಾಡುತ್ತಿದ್ದ. ರೂಪಕ್ಕ ಅವನಿಗೆ ೫ ಸಾವಿರ ಹಣ ರಡಿ ಮಾಡಲು ಕೇಳಿಕೊಂಡಳು. ಬಾಬು 'ಕಷ್ಟಕಣೆ' ಎನ್ನುವುದು ಕೇಳುತ್ತಿತ್ತು. ಆದರೆ ರೂಪಕ್ಕ ಪಟ್ಟು ಬಿಡದೆ ವಾರದ ಮಟ್ಟಿಗೆ ಹೆಂಗಾದರೂ ಮಾಡಿ ಹಣ ಹೊಂದಿಸಬೇಕೆಂದು ದೈನ್ಯತೆಯಿಂದ ಕೇಳಿಕೊಳ್ಳುತ್ತಿದ್ದಳು. ಸರಿ ಹಂಗಾರ, ನೂರು ರೂಪಾಯಿಗೆ ೧೦ ರೂ. ಬಡ್ಡಿಯಾಕ್ಕತಿ. ವಾರದೊಳಗ ಕೊಡಲಿಲ್ಲ ಅಂದ್ರ ಡಬಲ್ ಬಡ್ಡಿ ಕೊಡಬೇಕು ಎಂದು ಕೆಲವು ಕಂಡಿಷನ್ನುಗಳನ್ನು ಹಾಕಿದ. ಅದಕ್ಕೆಲ್ಲಾ ರೂಪಕ್ಕ ಕಣ್ಣ ಸನ್ನೆಯಿಂದಲೆ ನಮ್ಮೆಲ್ಲರಿಂದ ಸಮ್ಮತಿ ಪಡೆದುಕೊಂಡು ಅವನಿಗೆ ಒಪ್ಪಿಗೆ ಸೂಚಿಸಿದಳು.

**ಪ್ರಾಯೋಗಿಕ ಅಧ್ಯಯನದ ಮಾದರಿ – ೧**

| | |
|---|---|
| ಹೆಸರು: | ಶರೀಫ್ ಹಸಮಕಲ್ |
| ವಯಸ್ಸು: | ೩೦ |
| ಲಿಂಗ: | ಗಂಡು |
| ಊರು: | ಹಸಮಕಲ್ |
| ವಿದ್ಯಾಭ್ಯಾಸ: | (ಪಿಎಚ್.ಡಿ.,) |

ಈ ಗದ್ಯದಲ್ಲಿರುವ ಭಾಷೆ ಮಹಿಳೆ ಬರೆದ ಬರಹವಾಗಿದೆ. ಕಾರಣ ಇಲ್ಲಿ ಗಿರಾಕಿಯೊಂದಿಗೆ ಮಲಗುವುದು, ಮತ್ತು ಸೀರೆ ಕುಪ್ಪಸ ಸರಿಮಾಡಿಕೊಳ್ಳುವ ಸಂಭಾಷಣೆ ಮಹಿಳೆಯದ್ದಾಗಿದೆ. ಆದ್ದರಿಂದ ಈ ಬರಹ ಮಹಿಳೆಯದ್ದಾಗಿದೆ. ಇಲ್ಲಿರುವ ಸಂಭಾಷಣೆಯ ವಸ್ತು ಮತ್ತೆ ಸಾರಾಂಶದ ಆಧಾರದ ಮೇಲೆಯಾಗಿದೆ. ಭಾಷೆ ನಿರ್ಧರಿಸಲಾಗಿದೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೨**

ಹೆಸರು: ಮಂಜಣ್ಣ. ಪಿ

ವಯಸ್ಸು: ೩೨

ಲಿಂಗ: ಗಂಡು

ಊರು: ಹಾವನೂರು

ವಿದ್ಯಾಭ್ಯಾಸ: ಎಂ.ಎ.,

ಈ ಸಾರಾಂಶ ಬರೆದವರು ಮಹಿಳೆ. ಕಾರಣ, ಈ ಸಾರಾಂಶದ ಪ್ರತಿ ವಾಕ್ಯದಲ್ಲೂ ಲೇಖಕಿ ಸ್ತ್ರೀ ಸಂಬಂಧ ಸೂಚಕವಾಗಿಯೇ ತನನ್ನು ಕರೆದುಕೊಂಡಿದ್ದಾಳೆ. ಹಾಗೂ ತನ್ನ ವೈಯಕ್ತಿಕ ಬದುಕನ್ನು, ತನ್ನ ಅಸಹಾಯಕತೆಯನ್ನು ಈ ಸಾರಾಂಶದಲ್ಲಿ ಹೇಳಿದ್ದಾಳೆ. ಉದಾ: ಅವಸರವಾಗಿ ಸೀರೆಸುತ್ತಿಕೊಂಡು, ನನ್ನ ಎದೆಹಾಲು–ಕುಡಿಯುತ್ತಿದ್ದ ಹಸುಗೂಸು ಮುಂತಾದ ವಾಕ್ಯಗಳು ಸ್ತ್ರೀ ಸೂಚಕ ಪದಗಳಾಗಿವೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೩**

ಹೆಸರು: ಅರ್ಪಿತ. ವಿ.

ವಯಸ್ಸು: ೨೩

ಲಿಂಗ: ಹೆಣ್ಣು

ಊರು: ಸೂರನಹಳ್ಳಿ

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಈ ಬರವಣಿಗೆಯು ಪುರುಷ ಬರೆದಿರುವುದು ಎಂದು ಅನಿಸುತ್ತದೆ. ಕಾರಣ: ಈ ಬರಣಿಗೆಯಲ್ಲಿ ಮಹಿಳಾ ಸಂಬಂಧಿಯಾಗಿದ್ದರೂ ಇದನ್ನು ಬರೆದಿರುವುದು ಒಬ್ಬ ಪುರುಷ ಎಂದು ಗುರುತಿಸಬಹುದು. ಇದಕ್ಕೆ ಕಾರಣವೆಂದರೆ ವೇಶ್ಯೆಯರ ಬಗ್ಗೆ ಮಹಿಳಾ ಬರವಣಿಗೆ ತುಂಬ ಕಡಿಮೆ. ಮತ್ತು ಮೈಮನಗಳ ಸುಳಿಯಲ್ಲಿ ಮತ್ತು ಮಸಣದ ಹೂ ಕಾದಂಬರಿಯ ಓದಿನ ಪ್ರಭಾವವು ನಾನು ಈ ಬರವಣಿಗೆಯನ್ನು ಪುರುಷ ಬರೆದಿರುವುದಾಗಿ ಗುರುತಿಸಲು ಕಾರಣವಾಗಿರಬಹುದು.

**ಪ್ರಾಯೋಗಿಕ ಅಧ್ಯಯನದ ಮಾದರಿ – ೪**

ಹೆಸರು: ಸೈಯದ್ ಬಿ ಕಬ್ಬಿಗೆರೆ

ವಯಸ್ಸು: ೨೪

ಲಿಂಗ: ಪುರುಷ

ಊರು: ಕಬ್ಬಿಗೆರೆ

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಈ ಲೇಖನವನ್ನು ಪುರುಷ ಬರೆದಿದ್ದಾನೆ ಎಂಬುದು ನನ್ನ ಅನಿಸಿಕೆ. ಏಕೆಂದರೆ ಈ ಲೇಖನದಲ್ಲಿ ಕೇವಲ ಒಬ್ಬ ವೈಶ್ಯೆಯ ಬಗ್ಗೆ ಹೇಳುತ್ತಾ ಸಾಗುವ ಕಥೆಯು ಒಂದು ರೀತಿಯಲ್ಲಿ ಒಂದು ಹೆಣ್ಣಿನ ನೋವನ್ನು ಕಂಡು ಗಂಡು ತನ್ನ ಬರವಣಿಗೆಯ ಮೂಲಕ ಲೇಖನ(ಕಥೆ)ದಲ್ಲಿ ಬರೆದಿದ್ದಾನೆಂದು ನನಗೆ ಅನಿಸುತ್ತಿದೆ. ಇಲ್ಲಿನ ಪಾತ್ರಗಳು ಪೂರ್ಣ ಪ್ರಮಾಣದಲ್ಲಿ ಹೆಣ್ಣಿನ (ವೇಶ್ಯೆಯ ಅಥವಾ ಇತರೆ ಹೆಣ್ಣುಗಳ)

ನೋವನ್ನು ಅಥವಾ ಸಮಸ್ಯೆಯನ್ನು ಕಟ್ಟಿಕೊಡುವಲ್ಲಿ ತುಂಬಾ ವಿಫಲವಾಗಿದೆ. ಆದ್ದರಿಂದ ಇದು ಒಬ್ಬ ಪುರುಷ ಬರೆದಂತಹ ಕಥೆಯಾಗಿದೆಯೆಂಬುದು ನನ್ನ ಅಭಿಪ್ರಾಯ.

ಹೆಣ್ಣು ಈ ಕಥೆಯನ್ನು ಬರೆದಿದ್ದಲ್ಲಿ, ಇನ್ನೂ ಹೆಚ್ಚಿನ ರೀತಿಯಲ್ಲಿ ಕಥೆಯನ್ನು ತಾನು ಅನುಭವಿಸಿದಂತಹ ನೋವನ್ನು ಪ್ರತಿಬಿಂಬಿಸುತ್ತಿದ್ದಳು. ಆದರೆ ಇದರಲ್ಲಿ ಆ ರೀತಿಯಾಗಿ ಕಂಡುಬರುವುದಿಲ್ಲ. ಆದ್ದರಿಂದ ಇದು ಪುರುಷ ಬರೆದದ್ದು.

**ಬರಹ–೨ ಲೇಖಕರು: ಸಿ.ಜಿ ಮಂಜುಳಾ, ಪ್ರಜಾವಾಣಿ ಪತ್ರಿಕೆಯಲ್ಲಿ ಪ್ರಕಟಣೆ, ಜೂನ್ ೧೪, ೨೦೧೬.**

ಶತಮಾನಗಳಷ್ಟು ಹಳೆಯದಾದ ಭಾರತ ಹಾಗೂ ಘಾನಾ ಬಾಂಧವ್ಯ ಬಲಪಡಿಸುವ ನಿಟ್ಟಿನ ಅನೇಕ ಕಾರ್ಯಕ್ರಮಗಳಲ್ಲಿ ರಾಷ್ಟ್ರಪತಿ ಪ್ರಣವ್ ಮುಖರ್ಜಿ ಅವರು ಇಂದು ಪಾಲ್ಗೊಂಡರು. ಘಾನಾದಲ್ಲಿ ವಿವಿಧ ವಲಯಗಳಲ್ಲಿ ಭಾರತವು ೨೦,೧೪೧ ಕೋಟಿ ಹಣ ಹೂಡಿಕೆ ಮಾಡಿದೆ. ಇದನ್ನು ಮುಂದಿನ ಮೂರು ವರ್ಷಗಳಲ್ಲಿ ೩೩,೫೦೦ ಕೋಟಿಗೆ ಏರಿಸುವ ಆಶಾವಾದವನ್ನು ರಾಷ್ಟ್ರಪತಿ ವ್ಯಕ್ತಪಡಿಸಿದ್ದಾರೆ. ಈವರೆಗೆ ಹೆಚ್ಚಿನ ಹಣ ಹೂಡಿಕೆ ಸರ್ಕಾರದ ಮಟ್ಟದಲ್ಲಿ ಆಗುತ್ತಿತ್ತು. ಈಗ ಖಾಸಗಿ ಹಣ ಹೂಡಿಕೆಯತ್ತ ಗಮನ ಹರಿಸುವ ಕಾಲ ಬಂದಿದೆ ಎಂಬಂಥ ಭಾವನೆ ಈಗ ಚಾಲ್ತಿ ಪಡೆದುಕೊಂಡಿದೆ. ಇಂದು ನಡೆದ ಭಾರತ ಕೈಗಾರಿಕೋದ್ಯಮಿಗಳ ಒಕ್ಕೂಟ(ಸಿಐಐ) ಹಾಗೂ ಅಸೋಸಿಯೇಷನ್ ಆಫ್ ಘಾನಾ ಇಂಡಸ್ಟ್ರೀಸ್(ಎಜಿಐ) ವತಿಯಿಂದ ಏರ್ಪಡಿಸಲಾಗಿದ್ದ ಭಾರತ–ಘಾನಾ ಉದ್ಯಮ ವೇದಿಕೆ ಸಭೆಯಲ್ಲೂ ಈ ಭಾವನೆ ವ್ಯಕ್ತವಾಗಿದೆ. ಫ್ಲ್ಯಾಗ್ ಸ್ಟಾಫ್ ಹೌಸ್ ಎಂದು ಕರೆಯಲಾಗುವ ಅಧ್ಯಕ್ಷೀಯ ಸದನದಲ್ಲಿ ನಿಯೋಗ ಮಟ್ಟದ ಮಾತುಕತೆಗಳು ನಡೆದವು. ರಾಷ್ಟ್ರಪತಿ ಪ್ರಣವ್ ಮುಖರ್ಜಿ ಹಾಗೂ ಘಾನಾ ಅಧ್ಯಕ್ಷ ಜಾನ್ ಡ್ರಮಾನಿ ಮಹಾಮ ಸಮ್ಮುಖದಲ್ಲಿ ಮೂರು ಒಡಂಬಡಿಕೆಗಳಿಗೆ (ಎಂಓಯು) ಸಹಿ ಹಾಕಲಾಗಿದೆ. ಇದರಲ್ಲಿ ಮುಖ್ಯವಾದದ್ದು ಜಂಟಿ ಆಯೋಗದ ಸ್ಥಾಪನೆ. ಉಭಯ ದೇಶಗಳ ಬಾಂಧವ್ಯದ ಪುನರ್ ವಿಮರ್ಶೆ ನಡೆಸುವಂತಹ ಸಚಿವ ಮಟ್ಟದ ಆಯೋಗವಾಗಿರುತ್ತದೆ ಇದು. ವೀಸಾ ನಿರ್ಬಂಧಗಳನ್ನು ಸಡಿಲಿಸುವ ಕುರಿತ ಒಡಂಬಡಿಕೆ ಹಾಗೂ ಘಾನಾ ಹಾಗೂ ಭಾರತದ ವಿದೇಶಾಂಗ ಸೇವೆ ಸಂಸ್ಥೆಗಳ ನಡುವೆ ನಿಯಮಿತ ವಿನಿಮಯ ಕುರಿತಾದ ಒಡಂಬಡಿಕೆಗಳಿಗೆ ಸಹಿ ಹಾಕಲಾಗಿದೆ.

ಬ್ರಾಂಡ್ ಇಂಡಿಯಾ ಎಂಬುದು ಅಭಿವೃದ್ಧಿ ಶೀಲ ಹಾಗೂ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಭಾರಿ ವಿಶ್ವಾಸಾರ್ಹತೆ ಗಳಿಸಿಕೊಂಡಿದೆ ಎಂದು ಪ್ರಣವ್ ಮುಖರ್ಜಿ ಅವರು ಅಭಿಪ್ರಾಯಪಟ್ಟರು. ಘಾನಾದ ಬಂದರು ನಗರ ಟೆಮಾದಿಂದ ಅಕಾಸೋಂಬೊವರೆಗೆ ೮೫ ಕಿ.ಮೀ. ರೈಲು ಹಾದಿಯನ್ನು ನಿರ್ಮಿಸುವ ಪ್ರಸ್ತಾವವನ್ನು ಭಾರತ ಮುಂದಿಟ್ಟಿದೆ. ಘಾನಾದಲ್ಲಿ ಈಗಾಗಲೇ ಮೀನು ಸಂಸ್ಕರಣ ಯೋಜನೆ ಹಾಗೂ ಸಕ್ಕರೆ ಕಾರ್ಖಾನೆ ನಿರ್ಮಾಣಕ್ಕೂ ಸಾಲ ಸೌಲಭ್ಯವನ್ನು ಭಾರತ ಒದಗಿಸಿದೆ. ಸ್ವಚ್ಛ ಇಂಧನ, ಕಡಿಮೆ ವೆಚ್ಚದ ವಸತಿ, ಸಣ್ಣ ಕೈಗಾರಿಕೆ ಇತ್ಯಾದಿ ಹಲವು ಕ್ಷೇತ್ರಗಳಲ್ಲಿ ಘಾನಾಗೆ ಹಣಕಾಸು ಹಾಗೂ ತಂತ್ರಜ್ಞಾನ ನೆರವನ್ನು ಭಾರತ ನೀಡಲು ಅವಕಾಶ ಇದೆ ಎಂಬಂತಹ ಚರ್ಚೆಗಳು ನಡೆದಿವೆ. ಘಾನಾದಲ್ಲಿ ಮಾನವ ಸಂಪನ್ಮೂಲ ಸಾಮರ್ಥ್ಯ ನಿರ್ಮಾಣ ಕ್ಷೇತ್ರದಲ್ಲಿ ಭಾರತದ ಪಾತ್ರ ಮಹತ್ವದ್ದು. ಹಲವು ವಿದ್ಯಾರ್ಥಿಗಳು ಭಾರತ ನೀಡುವಂತಹ ವಿದ್ಯಾರ್ಥಿ ವೇತನ ಹಾಗೂ ತರಬೇತಿಗಳ ಲಾಭ ಪಡೆದುಕೊಂಡಿದ್ದಾರೆ.

ಘಾನಾ ವಿದ್ಯಾರ್ಥಿಗಳಿಗೆ ನೀಡುವಂತಹ ಅಂತರರಾಷ್ಟ್ರೀಯ ತಾಂತ್ರಿಕ ಶಿಕ್ಷಣ ವಿದ್ಯಾರ್ಥಿ ವೇತನದ ಪ್ರಮಾಣ ೨೫೦ರಿಂದ ೩೦೦ಕ್ಕೆ ಏರಿಸಲಾಗಿದೆ ಎಂದು ವಿದೇಶಾಂಗ ವ್ಯವಹಾರಗಳ ಸಚಿವಾಲಯದ ಕಾರ್ಯದರ್ಶಿ(ಆರ್ಥಿಕ ಸಂಬಂಧ) ಅಮರ ಸಿನ್ಹಾ ತಿಳಿಸಿದರು. ರಾಷ್ಟ್ರಪತಿಗಳ ಜೊತೆಗಿನ ಉನ್ನತ ನಿಯೋಗದಲ್ಲಿ ಪ್ರಧಾನಿ ಕಚೇರಿ ರಾಜ್ಯ ಸಚಿವ ಡಾ.ಜಿತೇಂದ್ರ ಸಿಂಗ್, ಸಂಸತ್ ಸದಸ್ಯರಾದ ಮನಸುಖ್ ಎಲ್ ಮಾಂಡವೀಯ, ಎಸ್.ಎಸ್. ಅಹ್ಲುವಾಲಿಯ ಸೇರಿದಂತೆ ಉನ್ನತ ಅಧಿಕಾರಿಗಳು ಇದ್ದಾರೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೧**

| | |
|---|---|
| ಹೆಸರು: | ಸಾಗರ್ ಜಿ.ಸಿ. |
| ವಯಸ್ಸು: | ೨೧ |
| ಲಿಂಗ: | ಪುರುಷ |
| ಊರು: | ಚಿತ್ರದುರ್ಗ |
| ವಿದ್ಯಾಭ್ಯಾಸ: | (ಎಂ.ಎ., ಪಿಎಚ್.ಡಿ.,) |

ಈ ಲೇಖನವು ಪುರುಷ ಬರವಣಿಗೆಯಾಗಿದೆ. ಏಕೆಂದರೆ, ಈ ಲೇಖನದಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ, ವಿದೇಶಾಂಗ, ವಿಷಯಗಳನ್ನು ಕುರಿತು ತಿಳಿಸಲಾಗಿದೆ. ಮತ್ತು ಈ ಲೇಖನದಲ್ಲಿ ಪುರುಷ ಮನೋಭಾವನೆ ಮತ್ತು ಪ್ರಸ್ತುತ ಸಮಾಜಕ್ಕೆ ಸಂಬಂಧಿಸಿದ ವಿಷಯಗಳು ಪ್ರಸ್ತಾಪಿಸಲಾಗಿದೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೨**

| | |
|---|---|
| ಹೆಸರು: | ಅನಿತಾ ಹೆಚ್.ಬಿ. |
| ವಯಸ್ಸು: | ೨೧ |
| ಲಿಂಗ: | ಮಹಿಳೆ |
| ಊರು: | ಬೂದಗುಂವಾ |
| ವಿದ್ಯಾಭ್ಯಾಸ: | (ಎಂ.ಎ., ಪಿಎಚ್.ಡಿ.,) |

ಈ ಬರಹವನ್ನು ನೋಡಿದರೆ ಪುರುಷರದ್ದೇ ಆಗಿರಬಹುದು. ಕಾರಣ: ಆರ್ಥಿಕವಾಗಿ ಹೆಚ್ಚು ಜ್ಞಾನ ಪುರುಷರಿಗೆ ಇರುತ್ತದೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೩**

| | |
|---|---|
| ಹೆಸರು: | ಅರ್ಪಿತ ವಿ. |
| ವಯಸ್ಸು: | ೨೩ |
| ಲಿಂಗ: | ಮಹಿಳೆ |
| ಊರು: | ಸೂರನಹಳ್ಳಿ |
| ವಿದ್ಯಾಭ್ಯಾಸ: | (ಎಂ.ಎ., ಪಿಎಚ್.ಡಿ.,) |

ಈ ಬರವಣಿಗೆಯನ್ನು ಒಬ್ಬ ಮಹಿಳೆ ಬರೆದಿರುವುದಾಗಿ ಗುರುತಿಸಬಹುದು. ಕಾರಣ: ಈ ಬರವಣಿಗೆಯು ವರದಿಯ ರೀತಿಯಲ್ಲಿದೆ ಮತ್ತು ಸರಳ ವಾಕ್ಯಗಳಿಂದ ಕೂಡಿದೆ. ಆದ್ದರಿಂದ ಈ ಬರವಣಿಗೆಯನ್ನು ಮಹಿಳೆ ಬರೆದಿದ್ದಾಳೆ ಎಂದು ಗುರುತಿಸುತ್ತೇನೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೪**

ಹೆಸರು: ———

ವಯಸ್ಸು: ೨೩

ಲಿಂಗ: ಪುರುಷ

ಊರು: ಕೊಪ್ಪಳ

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಇದನ್ನು ಯಾರು ಬರೆದವರು ಅಂತ ಗುರುತಿಸುವುದು ಕಷ್ಟ. ಕಾರಣ ಇದು ಪತ್ರಿಕೆಯಲ್ಲಿ ಪ್ರಕಟವಾದ ಸ್ಟೇಟ್‌ಮೆಂಟ್ ಆಗಿದೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೫**

ಹೆಸರು: ಕಲ್ಲಪ್ಪ ಎಂ.ಬಿ.

ವಯಸ್ಸು: ೨೪

ಲಿಂಗ: ಪುರುಷ

ಊರು: ಕಡೂರು

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಈ ಲೇಖನವನ್ನು ಓದಿದ ನಂತರ ನನ್ನ ಗಮನಕ್ಕೆ ಬಂದ ಅಂಶವನ್ನು ಹೇಳುತ್ತೇನೆ. ಈ ಲೇಖನದ ವಾಕ್ಯಗಳನ್ನು ಗಮನಿಸಿದರೆ ಒಂದು ಕಾರ್ಯಕ್ರಮ ನಡೆದಿರುವುದನ್ನು ವರದಿ ಮಾಡಿರುವಂತೆ ಕಂಡುಬರುತ್ತದೆ. ಆದ್ದರಿಂದ ಇಲ್ಲಿಯ ನಿರೂಪಣೆ ಕ್ರಮ ಸಾಮಾನ್ಯ ಪತ್ರಿಕೆ ವರದಿಯಂತೆ ಇರುವುದರಿಂದ ಹೆಣ್ಣು ಅಥವಾ ಗಂಡು ಹೇಳಿದ್ದಾರೆ ಎಂದು ಖಚಿತವಾಗಿ ಹೇಳುವುದು ಕಷ್ಟ.

**ಬರಹ–೩ ಲೇಖಕರು: ಕವಿತ ಆರ್., ಪ್ರಜಾವಾಣಿ, ಆವಿಷ್ಕಾರ ಕಾಲಂ**

ಬೇಸಿಗೆ ಮುಗಿದು ಮಳೆಗಾಲ ಆರಂಭವಾಗುತ್ತಿದ್ದಂತೆ ರೈತರ ಮೊಗದಲ್ಲಿ ಸಂಭ್ರಮ ಮನೆ ಮಾಡಿರುತ್ತದೆ. ಈ ಸಂತಸದ ಜೊತೆಯಲ್ಲೇ ಬೇಸಿಗೆ ಫಸಲಿನ ಸಂರಕ್ಷಣೆ ಬಗ್ಗೆಯೂ ರೈತರಲ್ಲಿ ಆತಂಕ ಎದುರಾಗಿರುತ್ತದೆ. ಸಾಮಾನ್ಯವಾಗಿ ಮಳೆಗಾಲದಲ್ಲಿ ಭತ್ತ ಅಥವಾ ಅಕ್ಕಿಯನ್ನು ಒಣಗಿಸಲು ರೈತರು ಪರದಾಡುತ್ತಿರುತ್ತಾರೆ. ರೈತರ ಈ ಸಮಸ್ಯೆಗೆ ಪರಿಹಾರವೆಂಬಂತೆ ಬೆಂಗಳೂರಿನಲ್ಲಿರುವ ಎಂ.ಎಸ್. ರಾಮಯ್ಯ ತಾಂತ್ರಿಕ ವಿದ್ಯಾಲಯದ ಕೆಮಿಕಲ್ ಎಂಜಿನಿಯರಿಂಗ್ ವಿಭಾಗದ ವಿದ್ಯಾರ್ಥಿಗಳು ಅಕ್ಕಿ ಒಣಗಿಸುವ ಯಂತ್ರವನ್ನು ಕಂಡುಹಿಡಿದಿದ್ದಾರೆ. ಪ್ರಾಧ್ಯಾಪಕರಾದ ಕೆ.ಎ. ಜೈದೀಪ್ ಸಿಂಗ್, ಚೇತನ್, ರಿಯಾ, ಅಭಿಷೇಕ್ ಮೂರು ತಿಂಗಳು ಶ್ರಮವಹಿಸಿ ಅಕ್ಕಿ ಒಣಗಿಸುವ ಯಂತ್ರವನ್ನು ಆವಿಷ್ಕರಿಸಿದ್ದಾರೆ. ಅಕ್ಕಿ ಉತ್ಪಾದನೆಯಲ್ಲಿ ಚೀನಾದ ನಂತರದ ಸ್ಥಾನ ಭಾರತದ್ದೇ. ಪ್ರತಿ ವರ್ಷ ಸುಮಾರು ೧೫೦ ದಶಲಕ್ಷ ಟನ್ನಿನಷ್ಟು ಅಕ್ಕಿಯನ್ನು ಉತ್ಪಾದನೆ ಮಾಡಲಾಗುತ್ತಿದ್ದರೂ, ಅವೈಜ್ಞಾನಿಕ ಪದ್ಧತಿಯಲ್ಲಿ ಒಣಗಿಸುವುದರಿಂದ ಶೇ. ೧೭ರಷ್ಟು ಉತ್ಪನ್ನ ಹಾಳಾಗುತ್ತಿದೆ. ಸರಿಯಾದ ವಿಧಾನವನ್ನು ಅನುಸರಿಸಿದ್ದೇ ಆದರೆ ಅನವಶ್ಯಕವಾಗಿ ಅಕ್ಕಿ

ಹಾಳಾಗುವುದನ್ನು ತಪ್ಪಿಸಬಹುದು. ಆಗ ಅದು ಜನರನ್ನು ತಲುಪಿ ರೈತನ ದುಡಿಮೆಯೂ ಸಾರ್ಥಕವಾಗುತ್ತದೆ. ಅಕ್ಕಿಯನ್ನು ಒಣಗಿಸಲೆಂದೇ ಇದೀಗ ಸಮತಟ್ಟಾದ ಒಣಗಿಸುವಿಕೆ ಯಂತ್ರವನ್ನು ವಿಶೇಷವಾಗಿ ಅಭಿವೃದ್ಧಿಪಡಿಸಲಾಗಿದೆ. ಇದು ಅಕ್ಕಿಯಲ್ಲಿರುವ ಶೇ. ೧೫ರಷ್ಟು ತೇವಾಂಶವನ್ನು ಆರರಿಂದ ಎಂಟು ಗಂಟೆಗಳಲ್ಲಿ ಹೀರಿಕೊಂಡು ಅನವಶ್ಯಕವಾಗಿ ಅಕ್ಕಿ ಹಾಳಾಗುವುದನ್ನು ತಡೆಯುತ್ತದೆ. ರೈತರಿಗೆ ಸುಲಭವಾಗಿ ದೊರೆಯುವ ಸೌದೆ ಮತ್ತು ಭತ್ತದ ಹೊಟ್ಟಿನಿಂದ ಈ ಯಂತ್ರವನ್ನು ಚಾಲನೆ ಮಾಡಬಹುದಾಗಿದೆ. ಪರಿಸರ ಸ್ನೇಹಿಯಾಗಿರುವ ಈ ಯಂತ್ರವನ್ನು ವಿದ್ಯುತ್‌ನಿಂದಲೂ ಚಲಾಯಿಸಬಹುದೆಂದು ಜೈದೀಪ್ ಸಿಂಗ್ ಹೇಳುತ್ತಾರೆ. ಒಂದು ಟನ್ ಅಕ್ಕಿಯನ್ನು ಎಂಟು ಗಂಟೆ ಅವಧಿಯಲ್ಲಿ ಒಂದೇ ಬಾರಿಗೆ ಒಣಗಿಸಬಹುದು. ಇದಕ್ಕೆ ರೈತನಿಗೆ ತಗಲುವ ಖರ್ಚು ಕೂಡ ಕಡಿಮೆ ಇರುತ್ತದೆ. ಇದನ್ನು ಸುಲಭವಾಗಿ ನಿರ್ವಹಣೆ ಮಾಡಬಹುದು ಎನ್ನುತ್ತಾರೆ. ಯಂತ್ರವನ್ನು ಕಂಡುಹಿಡಿದ ವಿದ್ಯಾರ್ಥಿಗಳು. ಈ ಯಂತ್ರದ ತೂಕ ೫೦೦ ಕೆ.ಜಿ. ಇದನ್ನು ರೈತರು ತಮ್ಮ ಜಮೀನಿಗೆ ಒಂದು ಮೂಲೆಯಲ್ಲಿ ಸ್ಥಿರವಾಗಿ ಜೋಡಿಸಬಹುದು.

**ಪ್ರಾಯೋಗಿಕ ಅಧ್ಯಯನದ ಮಾದರಿ – ೧**

ಹೆಸರು: ಲೋಹಿತೇಶ್ವರಿ ಎಸ್.ಪಿ.

ವಯಸ್ಸು: ೨೩

ಲಿಂಗ: ಮಹಿಳೆ

ಊರು: ಚಳ್ಳಕೆರೆ

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಈ ಲೇಖನವನ್ನು ಪುರುಷ ಬರೆದಿದ್ದಾನೆ. ಇಲ್ಲಿ ಮಾತಾಡಿದಾತ ವಿದ್ಯಾವಂತನಾಗಿದ್ದು, ಒಬ್ಬ ಬಡರೈತರ ಮಗನಾಗಿ ತಾನು ಅನುಭವಿಸಿದ ಜೀವನದ ಬಗ್ಗೆ ತನಗಿರುವಂತಹ ಅಭಿಪ್ರಾಯದೊಂದಿಗೆ ರೈತರಿಗಾಗುತ್ತಿರುವ ಅನ್ಯಾಯ ಅವರ ಅಸಹಾಯಕತೆಯನ್ನು ನೋಡಿಕೊಂಡು ಅನುಕೂಲಕರವಾದ ರೀತಿಯಲ್ಲಿ ತಿಳಿಸಿಕೊಟ್ಟಿದ್ದಾರೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೨**

ಹೆಸರು: ಶರೀಫ್ ಹಸಮಕಲ್

ವಯಸ್ಸು: ೩೦

ಲಿಂಗ: ಪುರುಷ

ಊರು: ಹಸಮಕಲ್

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಈ ಬರಹದ ಭಾಷೆ ಮಹಿಳೆ ಬರೆದ ಭಾಷೆಯಾಗಿದೆ. ಕಾರಣ ರೈತರ ನೋವು, ಸಂಕಟವನ್ನು ಇನ್ನೂ ವಿವರಿಸುವ ಸಾಧ್ಯತೆ ಇತ್ತು. ಹೀಗಾಗಿ ಅವರು ವಸ್ತುನಿಷ್ಟವಾಗಿ ಹೇಳಿದ್ದಾರೆ. 'ರೈತನಿಗೆ' ಎಂಬ ಶಬ್ದವನ್ನ ಬಳಸಿದ್ದಾರೆ. ಒಂದು ವೇಳೆ ಪುರುಷ ಬರೆದಿದ್ದರೆ 'ರೈತರು" ಎಂದು ಬಳಸುತ್ತಿದ್ದ ಎಂಬ

ಭಾವನೆ ನನ್ನದು. ಈ ಆಧಾರದ ಮೇಲೆ ಈ ಬರಹ ಮಹಿಳೆ ಬರೆದ ಬರಹವಾಗಿದೆ ಎಂದು ತೀರ್ಮಾನಿಸಬಹುದು.

**ಪ್ರಾಯೋಗಿಕ ಅಧ್ಯಯನದ ಮಾದರಿ – ೩**

ಹೆಸರು: ನಿರ್ಮಲ. ಎಂ.

ವಯಸ್ಸು: ೩೦

ಲಿಂಗ: ಮಹಿಳೆ

ಊರು: ಜಗಳೂರು

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಈ ಸಾರಾಂಶ ಬರೆದವರು ಪುರುಷ. ಕಾರಣ: ಕೃಷಿ ಮತ್ತು ಕೃಷಿ ಸಂಬಂಧಿ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವವರು ಪುರುಷರು. ವಿಶೇಷವಾಗಿ ಉಪಕರಣಗಳನ್ನು ಸಂಶೋಧಿಸುವವರು ಪುರುಷರೇ ಆಗಿರುವುದರಿಂದ ಇಂತಹ ಸಂಶೋಧನೆಗಳ ಬಗ್ಗೆ ಹೆಚ್ಚು ಅಧ್ಯಯನ ಮಾಡುವುದು ಮತ್ತು ತಿಳಿದುಕೊಂಡಿರುವುದು ಪುರುಷರಾಗಿರುವುದರಿಂದ ಈ ಸಾರಾಂಶವನ್ನು ಪುರುಷ ಬರೆದಿದ್ದಾನೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೪**

ಹೆಸರು: ಅನಿತಾ ಹೆಚ್.ಬಿ.

ವಯಸ್ಸು: ೨೧

ಲಿಂಗ: ಮಹಿಳೆ

ಊರು: ಬೂದಗುಂಪ

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಇದನ್ನು ಪುರುಷರು ಅಥವಾ ಮಹಿಳೆ ಬರೆದಿದ್ದಾಳೆ ಎಂದು ಹೇಳುವುದು ಗೊಂದಲವಾಗುತ್ತದೆ.

**ಬರಹ–೪ ಲೇಖಕರು: ಮಹಾಲಕ್ಷ್ಮಿ, ಕಾದಂಬರಿ: ಕ್ಷೀರೋಧಜೆ, ಪ್ರಕಟಣೆ–೧೯೮೪.**

ಮಂಗೇಶಯ್ಯನವರು ಚಿಂತಿಸತೊಡಗಿದರು. ಮಗಳನ್ನು ಕರೆದು ಕೇಳಿದರು. "ಕ್ಷೀರಾ, ಇವನು ಹೀಗಿರುವುದು ಸರಿತೋರುವುದಿಲ್ಲ. ಹೆಂಡತಿ ಮಕ್ಕಳನ್ನು ಸಾಕುವಷ್ಟಾದರೂ ಸಂಪಾದನೆ ಬೇಡವೇ? ನನ್ನ ಕಸುಬಿಗಾದರೂ ಸೇರಿಸೋಣವೆಂದರೆ ಒಂದು ಮಂತ್ರೋಚ್ಚಾರಣೆಯನ್ನೂ ಸಹ ಅವನ ಬಾಯಿಂದ ಕೇಳಿಲ್ಲ. ಆದಾಗ್ಯೂ ನಿಭಾಯಿಸುತ್ತೇನೆ. ನನಗೆ ನೆರವಾಗಲು ಇಷ್ಟಪಟ್ಟಿಲ್ಲ. ಒಂದು ಮಾತು ಕೇಳಿನೋಡು." ಈ ಮಾತುಗಳನ್ನು ಮತ್ತು ಅವರ ಸಂಕುಚಿತ ಅಭಿಪ್ರಾಯವನ್ನು ಕೇಳಿ ಜಿತಾಮಿತ್ರ ಗಾಳಿಗೆ ತೂರಿಬಿಟ್ಟು ನಕ್ಕನಷ್ಟೆ.

'ಕ್ಷೀರಾ, ನಿನಗೆಂದೂ ಅಪರಾಧವೆಸಗುವುದಿಲ್ಲ. ನನ್ನನ್ನು ಬಲವಾಗಿ ನಂಬು. ನಾನೆಲ್ಲಿದ್ದರೂ ನಿನ್ನನ್ನೇ ನೆನೆಯುತ್ತೇನೆ. ಇನ್ನಾರು ತಿಂಗಳು ತಡೆ. ನಿನ್ನ ಅಪ್ಪ ಅಮ್ಮನನ್ನು ಚೆನ್ನಾಗಿ ನೋಡಿಕೋ. ಅವರನ್ನು ನಗಿಸಿ ನೀನೂ ಯಾವಾಗಲೂ ನಗುನಗುತ್ತಲೇ ಇರು' ಎಂದು ಅವಳನ್ನು ತಬ್ಬಿಕೊಂಡನು.

"ಏಕೆ ಕ್ಷೀರಾ, ಈಚೆಗೆ ಆಗ್ಗಾಗ್ಯೆ ಹೋಗುತ್ತಿರುವನಲ್ಲವೇ? ಈ ಸಲವೇಕೆ ನಿನಗೆ ಪಿರುಪೇರು. ಇಂದಲ್ಲ ನಾಳೆ ಬರುತ್ತಾನೆ." ಮಂಗೇಶಯ್ಯನವರು ಮಗಳಿಗೆ ಸಮುಜಾಯಿಸಿದರು. ಇತ್ತ ಒಬ್ಬೊಬ್ಬರಿಗೂ ಯಾವ ಪ್ರಶ್ನೆ ಕೇಳಲೂ ದಾರಿ ಕೊಡದೇ, ಯಾವುದನ್ನೂ ಸ್ಪಷ್ಟವಾಗಿ ತಿಳಿಸದೇ ಹೊರಟ ಜಿತಾಮಿತ್ರನಿಗೆ ಮನಸ್ಸಿನಲ್ಲಿ ಒಂದೇ ತಳಮಳ ಗೊಂದಲಕ್ಕೀಡಾದನು.

"ಒಮ್ಮೆಲೇ ಮಡದಿಯನ್ನೂ, ಎಲ್ಲರನ್ನೂ ಬಿಟ್ಟುಬಂದಿದ್ದು ನನ್ನ ತಪ್ಪು. ನನ್ನನ್ನು ನೋಡಿ ಮೆಚ್ಚಿಕೊಂಡು ಅತ್ತೆ ಅದೆಷ್ಟು ಹಿಗ್ಗುತ್ತಿದ್ದಳು! ಸರ್ವಂ ಭಕ್ಷಯಾಮಿ, ಸಾಗರಂ ಭಕ್ಷಯಾಮಿ ಎಂದು ತಿಂಗಳುಗಟ್ಟಳೆ ಅವರ ಮನೆಯಲ್ಲಿ ಉಂಡಾಡಿಗುಂಡನಂತೆ ಉಂಡು ದಣಿಯುತ್ತಿದ್ದೆ. ಯಾವುದೂ ಸ್ಥಿಮಿತವಿಲ್ಲದೇ ಅವರಿಗೆ ನಾನು ಏನೆಂದು ಹೇಳಲಿ? ಒಂದು ದಿನವೂ ಒಬ್ಬರೂ ನನ್ನನ್ನು ಟೀಕಿಸಲಿಲ್ಲ. ಕ್ಷೀರಳನ್ನು ನಾನೆಂದಿಗೂ ಬಿಡಬಾರದು. ನೋಯಿಸಬಾರದೆಂದು ಗೊತ್ತು. ಬಿಟ್ಟುಬರಲು ಮನಸ್ಸಿಲ್ಲ, ಕಟ್ಟಿಕೊಂಡು ಹೋಗಲೂ ಸಾಧ್ಯವಿಲ್ಲ. ಇನ್ನು ಮಂಗೇಶಯ್ಯನವರು ಅವರ ಪೌರೋಹಿತ್ಯಕ್ಕೆ ನನ್ನನ್ನು ಎಳೆಯಲೆತ್ನಿಸಿದರು. ನನ್ನ ದಾರಿ ಬೇರೆ ಇರುವಲ್ಲಿ ಅದು ಹೇಗೆ ಸಾಧ್ಯ? ನನ್ನ ತಂದೆಯಂತಿರುವ ಅವರಿಗೆ ಪ್ರತಿಹೇಳುವುದು ಎಷ್ಟು ಕಷ್ಟವಾಗಿತ್ತು. ಈಗ ಬಿಡಿಸಿಕೊಂಡು ಬಂದಾಯಿತು. ನಾನು ರೇವುಪಟ್ಟಣ ಸೇರುವ ವೇಳೆಗೆ ಒಂದು ತಂಡ ಹೊರಟು ಬಿಟ್ಟಿರಬೇಕು" ಎಂದು ಯೋಚಿಸುತ್ತಿರುವಲ್ಲಿ ಒಬ್ಬ ಆಳು ಎದುರಾದ. ಆರು ಅಡಿಗೂ ಹೆಚ್ಚು ಎತ್ತರದವ, ಮೈಕೈ ಚೆನ್ನಾಗಿ ತುಂಬಿಕೊಂಡವ, ಮೀಸೆ ಗಡ್ಡ ಚಿಕ್ಕಮಕ್ಕಳು ಹೆದುರುವಂತಿತ್ತು. ಸುಮಾರು ಕಪ್ಪು ಮೈಬಣ್ಣ. ಜಿತಾಮಿತ್ರನೂ ಅವನನ್ನು ನೋಡಿ ಹಿಂದಡಿಯಿಟ್ಟ. ಅವನ ಬಾಯಲ್ಲಿ ಸಿಗರೇಟು, ಕೈಯಲ್ಲಿ ಮಧ್ಯದ ಸೀಸೆ. ಇಷ್ಟು ದಿನ ಪುರೋಹಿತರ ಮನೆಯಲ್ಲಿದ್ದ ಅವನಿಗೆ ಆ ವ್ಯಕ್ತಿಯ ಸಾಮಿಪ್ಯ ಅಸಹ್ಯವಾಯಿತು. ಆದರೆ ಅವನೇ ಯಜಮಾನ. ಅವನು ಹೇಳಿದಂತೆ ನಡೆಯಬೇಕು.

"ನೀವೇ ಜಿತಾಮಿತ್ರರೇ?'

"ಹೌದು, ಹಡಗು ಹೊರಟಿತೇ?'

"ನೀವೊಬ್ಬರೇ ನಿಧಾನ. ನಿಮ್ಮನ್ನು ಆಯ್ಕೆ ಮಾಡಿದವರಿಗೆ ನಿಮ್ಮನ್ನು ಬಿಟ್ಟು ಹೊಗಲು ಇಷ್ಟವಿಲ್ಲದೇ ಕಾಯುತ್ತಿದ್ದೇವೆ. ನೀವು ಬುದ್ಧಿವಂತರೆಂದೂ, ಮತ್ತು ವರ್ಚಸ್ವಿಯೆಂದೂ ಹೇಳಿ ಹೊಗಳಿದರು. "ಅದು ನಿಜ" ಎಂದು ಆ ವ್ಯಕ್ತಿ ವಾತ್ಸಲ್ಯದಿಂದ ಅಪ್ಪಿಕೊಂಡನು.

ಅವನು ಶತ ಒಟರನೆಂದು ಭಾವಿಸಿದ್ದ ಜಿತಾಮಿತ್ರ ಕರಗಿ ನೀರಾದ. ಇಬ್ಬರೂ ಪರಸ್ಪರ ಪರಿಚಯ ಮಾಡಿಕೊಂಡು ಹಡಗು ಹತ್ತಿದರು. ನಾನು ಹೀಗೆ ಹೊರಡುತ್ತೇನೆಂದು ಕ್ಷೀರಳಿಗೆ ಹೇಳಿದ್ದರೆ ಅವಳು ನನ್ನನ್ನು ಬಿಡುತ್ತಿದ್ದಳೇ? ನನ್ನ ಅತ್ತೆಮಾವ ಸಹಿಸುತ್ತಿದ್ದರೇ? ಎಂದೂ ಇಲ್ಲ. ನಾನು ಬಂದಿದ್ದೇ ಸರಿ." ಜಿತಾಮಿತ್ರ ತನ್ನ ಕ್ರಿಯೆ ಸರಿಯಾದ ಮಾರ್ಗವೆಂದು ಖಚಿತಪಡಿಸಿಕೊಂಡನು. ತನ್ನ ಬಾಳಿನ ಪ್ರಗತಿ ತಡೆಯಿಲ್ಲದೇ ಸಾಗಲೆಂದು ಆಶಿಸಿಕೊಂಡನು.

"ನಾವು ಹೊರಡುತ್ತಿರುವುದು ಅರಬ್ಬೀ ದೇಶದ ಒಂದು ಭಾಗ ನನ್ನನ್ನೆಲ್ಲರೂ ಸಹಕರಿಸಬೇಕು. ತುಟಿಪಿಟಕ್ ಎನ್ನಬೇಡ" ಎಂದು ಜಿತಾಮಿತ್ರನಿಗೆ ಜನವಾಸಿ ನಾಯರ್ ಆಜ್ಞಾಪಿಸಿದ ಮತ್ತು ಎಚ್ಚರಿಸಿದ.

ಕೆಲಹೊತ್ತಿಗೆ ಮುಖಂಡ ಮದನ್ ಸಿಂಗ್ ತನ್ನೆಡೆಗೆ ಬರುತ್ತಿದ್ದುದನ್ನು ಕಂಡು ಪೇಚಿಗೆ ಸಿಕ್ಕಂತಾಯಿತು ಜಿತಾಮಿತ್ರನಿಗೆ. ಪಕ್ಕಕ್ಕೆ ಹೊರಳಿ ನಿದ್ರೆ ಬಂದವನಂತೆ ನಟಿಸಿದ. ಮದನ್ ಸಿಂಗ್ ಸಮೀಪಕ್ಕೆ ಬಂದು ಪಕ್ಕದಲ್ಲಿ ಕುಳಿತು ಮಾನಾಡತೊಡಗಿದ. ಜಿತಾಮಿತ್ರನಿಗೆ ಮತ್ತೂ ಗಾಭರಿ. ಬನವಾಸಿ ನಾಯರ್ ಹೇಳಿದ್ದಕ್ಕೆ ಪ್ರತಿಯಾಯಿತು.

"ಜಿತಾಮಿತ್ರ, ಆ ನಿನ್ನ ನಾಯರ್‌ನನ್ನು ನಂಬಬೇಡ. ನಿನ್ನನ್ನು ಅವನಿಗಿಂತ ಹೆಚ್ಚಾಗಿ ನೋಡುತ್ತಿದ್ದೇವೆಂದು ಆತನಿಗೆ ಹೊಟ್ಟೆ ಉರಿ. ನಾನು ಹೇಳಿದಂತೆ ಕೇಳು ನಿನಗೆ ಒಳ್ಳೆಯದಾಗುತ್ತದೆ" ಎಂದು ಹೇಳಿ ಒಂದು ಸಿಗರೇಟನ್ನು ಹಚ್ಚಿ ಅವನ ಬಾಯಲ್ಲಿ ತುರುಕಿ ಸ್ವಲ್ಪ ಮಧ್ಯವನ್ನೂ ಕುಡಿಸಿ ಜಿತಾಮಿತ್ರ ಬಾಯೆತ್ತದಂತೆ ಮಾಡಿದ. ಬೆಳಗ್ಗೆ ಎದ್ದಾಗ ಜಿತಾಮಿತ್ರನಿಗೆ ಹಾಯೆನಿಸಿತು.

ಮಾರನೆಯ ದಿನ ರಾತ್ರಿಯೂ ಹಾಗೆಯೇ ಮಾಡಿದ ಮುಖಂಡ ಮದನ್‌ಸಿಂಗ್. ಜಿತಾಮಿತ್ರನಿಗೆ ಮಲಗಿದ ಪರಿವೆಯೇ ಇಲ್ಲದೇ ಬಹಳ ಹೊತ್ತಿನವರೆಗೂ ನಿದ್ರಿಸಿದ. ಅವನ ಸ್ನೇಹಿತ ನಾಯರ್ ಬಂದು ಎಚ್ಚರಿಸಿದಾಗಲೇ ಎಚ್ಚರ. ಜಿತಾಮಿತ್ರನಿಗೆ ನಾಚಿಕೆಯಾಯಿತು.

"ನಿನ್ನ ಜಾಗದಲ್ಲಿ ಈ ದಿನ ನಾನು ಮಲಗುತ್ತೇನೆ" ಎಂದು ನಾಯರ್ ಹೇಳಿದಾಗ ಅವನಿಗೆಷ್ಟೋ ನಿರಾಳವಾದಂತಾಯಿತು. "ಇವನಿಗೇನು? ಇನ್ನಷ್ಟು ಪಟ್ಟು ಹೆಚ್ಚಾಗಿ ಕುಡಿಸಿದರೂ ಬೇಡವೆನ್ನಲಾರ. ಮದ್ಯದ ಚಟವನ್ನು ಕಲಿಯಬಾರದು" ಎಂದುಕೊಂಡು ಜಿತಾಮಿತ್ರ ಮಲಗತೊಡಗಿದ. ಎಷ್ಟು ಹೊತ್ತಾದರೂ ನಿದ್ರೆಯೇ ಬಾರದು. ಮುಖದ ಮುಸುಕು ತೆಗೆಯಲು ಭಯ. ಮುಖಂಡ ಸಿಂಗ್ ಮತ್ತೆ ತನ್ನ ಬಳಿಗೆಲ್ಲಿ ಧಾವಿಸುವನೋ ಎಂದು. ಅವನು ಹೋದ ನಂತರ ಮತ್ತೆ ಯೋಚಿಸತೊಡಗಿದ.

"ಕ್ಷೀರೋಧಜೆ, ಎಂದೂ ಮಾಡದ ಧೂಮಪಾನ, ಮಧ್ಯಪಾನಗಳ ರುಚಿ ಏರಿಸಿಯಾಯಿತು. ಇದು ನಿನಗೆ ಅಪರಾಧ ಮಾಡಿದಷ್ಟು ತಪ್ಪೆನ್ನಿಸಿದರೂ ಅದರ ಚಟ ನನಗೆಲ್ಲಿ ಬರುವುದೋ ಎನ್ನಿಸಿದೆ. ಎರಡು ದಿನಗಳು ಮೈ ಮರೆಯುವಷ್ಟು ನಿದ್ರೆ ಅದರ ಫಲ. ಆದಷ್ಟು ಆ ಕೋಟಲೆಗಳಿಗೆ ಸಿಕ್ಕಿಕೊಳ್ಳಲಾರೆ. ನಿಮ್ಮನೆ ಊಟ, ನಿನ್ನ ಅಪ್ಪುಗೆ, ಆ ಹಿತವೇ ಬೇರೆ. ಈಗ ನಿನ್ನನ್ನು ಬಿಟ್ಟು ಬಂದಿದ್ದೇನೆ. ನೀನು ನನಗಾಗಿ ಎಷ್ಟು ದಿನಗಳು ಕಾಯಬೇಕೋ! ಮದುವೆಯಾದದ್ದು ನನ್ನ ಕೈಯಲ್ಲಿರಲಿಲ್ಲ. ಅಬ್ಬಾ! ನಿಮ್ಮ ತಂದೆಯವರದು ಅದೇನು ಆಕರ್ಷಣೆಯೋ! ಅವರು ಕರೆದೊಡನೆ ನಾನು ಮಂತ್ರ ಮುಗ್ಧನಂತೆ ಅವರನ್ನು ಹಿಂಬಾಲಿಸಿ ಅವರು ಹೇಳಿದ್ದೆಲ್ಲಾ ಚಾಚೂ ತಪ್ಪದೇ ಮಾಡಿದೆ. ನಿನ್ನನ್ನು ಮದುವೆಯಾದದ್ದು, ಕೈಯಲ್ಲಿ ಮೂರು ಕಾಸಿಗೆ ಗತಿ ಇಲ್ಲದೇ ತಿರುಗಿದ್ದು, ಇನ್ನು ಅವರ ಪೌರೋಹಿತ್ಯಕ್ಕೂ ನನ್ನನ್ನು ಗಂಟು ಹಾಕಿಕೊಳ್ಳುತ್ತಿದ್ದರು. ಕಷ್ಟಪಟ್ಟು ಆ ಬಲೆಯಿಂದ ಬಿಡಿಸಿಕೊಂಡು ಬಂದೆ. ನಿಮ್ಮ ತಾಯಿ ಅದೆಷ್ಟು ಒಳ್ಳೆಯವಳು. ಸೂಕ್ಷ್ಮವನ್ನರಿತು ಅವಳು ತಾನು ಸಂಪಾದಿಸಿದ್ದ ಹಣದಲ್ಲಿ ನಿನಗೆ ಅಷ್ಟೂ ಇಷ್ಟೂ ಕೊಡುತ್ತಿದ್ದಳು. ನೀನಂತೂ ಅಮ್ಮನನ್ನು ಮೀರಿಸಿದೆ. ಆ ಹಣವನ್ನು ಶೇಖರಿಸಿ ನನ್ನ ಕೈಗೆ ಕೊಟ್ಟೆ. ನಿನ್ನಿಂದಲೇ ಈಗ ನನಗೆ ಸಹಾಯವಾಯಿತು. ನನ್ನ ಕ್ಷೀರಾ" ಎಂದು ಕ್ಷೀರಳ ಭ್ರಮೆಯಿಂದ ತಬ್ಬಿಬ್ಬಾದನು.

"ಏ, ಜಿತಾಮಿತ್ರಾ, ಏನು ಒರಲುತ್ತಿರುವೆ. ತೆಪ್ಪಗೆ ಮಲಗು. ನನ್ನ ನಿದ್ರೆಯನ್ನೂ ಕೆಡಿಸಬೇಡ".

ಮದ್ಯದ ಅಮಲಿನಲ್ಲಿ ಆತನ ಸ್ನೇಹಿತ ಬನವಾಸಿ ನಾಯರ್ ಜಿತಾಮಿತ್ರನನ್ನು ಕಾಲಿನಿಂದ ಒದ್ದೇಬಿಟ್ಟ. ಜಿತಾಮಿತ್ರ ಕೆಂಡವಾದ. ಸ್ನೇಹಿತನಿಗೆ ಮಧ್ಯವನ್ನು ಕುಡಿಸಿ ಸುಮ್ಮನಾಗಿಸಿದ.

ಜಿತಾಮಿತ್ರನಿಗೆ ತಪ್ಪಿಸಿಕೊಳ್ಳುವ ಮಾರ್ಗವೇ ಕಾಣಲಿಲ್ಲ. ದೃಢಮನಸ್ಸು ಸಡಿಲವಾಯಿತು. ಒಂದು ಗಡಿ ಸಿಕ್ಕಿದರೆ ತನ್ನಂತೆ ಇರಬಹುದೆಂದುಕೊಂಡ.

ಹಡಗು ಒಂದು ರೇವು ಪಟ್ಟಣ ತಲುಪಿದೊಡನೆ ಯಾರ ಹಂಗಿಗೂ ಒಳಪಡದೇ ಇಳಿದು ಹೊರಟೇಬಿಟ್ಟ. ಕಾಣದ ದೇಶಕ್ಕೆ ಕಾಲಿಟ್ಟಾಯಿತು. ಮಾವನವರಂತೆ ಇಲ್ಲಿಯೂ ಯಾರಾದರೂ ತನ್ನ ಬಗ್ಗೆ ಮರುಕಗೊಂಡರೆ? ಮದುವೆಗಾಗಿ ಅಲ್ಲ. ಇನ್ನು ಮದುವೆ ಮರೆತಂತೆಯೇ. ಜೀವನ ನಡೆಸಲು ಜೀತಕ್ಕಾಗಿ ಸಹಾಯ ಬೇಕು.

ಅವನಂದುಕೊಂಡಂತೆಯೇ ಒಬ್ಬ ದೃಢಕಾಯನಾದ ಅರಬ್ಬಿಯವ ಎದುರಾದ. ಹರಕು ಮುರುಕು ಇಂಗ್ಲೀಷು, ಹಿಂದಿ ಮಾತನಾಡಬಲ್ಲವನು. ಜಿತಾಮಿತ್ರನನ್ನು ಆಧರಿಸಿ ತನ್ನ ಮನೆಗೆ ಕರೆದುಕೊಂಡು ಹೋದನು. ಜಿತಾಮಿತ್ರನ ಮನಸ್ಸಿನಲ್ಲಿ ಆ ಮನೆಯ ವಾತಾವರಣವನ್ನು ಕಂಡು ಕೋಲಾಹಲ ಉಂಟಾಯಿತು.

"ಛೇ! ಎಂಥ ತಪ್ಪು ಮಾಡಿದೆ. ಕ್ಷೀರಳ ಮನೆ ನಿಷ್ಠತೆ, ಆಚಾರವೆಲ್ಲಿ? ಆಹಾರವೆಲ್ಲಿ? ಈತನ ಮನೆ ಮಾಂಸಾಹಾರವೆಲ್ಲಿ? ನಾನು ಶಾಖಾಹಾರಿ ಎಂದು ಹೇಳಿ ಬಿಡಲೇ? ಅದಕ್ಕೆ ಗತಿಯಿಲ್ಲದಿದ್ದರೆ?" ಏನೂ ಹೇಳದೇ ತೆಪ್ಪನೆ ಕುಳಿತು ಉದರಬಾಧೆಗಾಗಿ ಪರಿತಪಿಸುತ್ತಿದ್ದನು.

ಆಜಂರವರು ತಟ್ಟೆಯಲ್ಲಿ ಉಪಾಹಾರಕ್ಕೆ ಕೋಳಿಮೊಟ್ಟೆ ಮತ್ತು ಬ್ರೆಡ್ ತಂದಿಟ್ಟರು. ತಾವು ಅದೇ ತಟ್ಟೆಯಲ್ಲಿ ತಿಂದರು. ಜಿತಾಮಿತ್ರನಿಗೆ ಅಗುಳು ನುಂಗುವುದಕ್ಕೂ ಇಲ್ಲ. ಉಗುಳುವುದಕ್ಕೂ ಇಲ್ಲವಾಯಿತು. ನಿರ್ಗತಿಕನಾಗಿ ತಿಂದೇ ಬಿಟ್ಟ. ಅವರ ಮನೆಯ ಊಟವೂ ಅಭ್ಯಾಸವಾಯಿತು.

"ಎಷ್ಟು ದಿನ ಇವರ ಮನೆ ಋಣ? ಅವರೇನೂ ಹೇಳದಿದ್ದರೂ ನನಗೇ ಸಂಕೋಚ. ಒಂದಷ್ಟು ಸಂಪಾದಿಸಿ ಕೊಟ್ಟುಬಿಟ್ಟರಾಯಿತು. ನಾನಂತೂ ಬೇರೆ ಹೋಗುವುದು ದುರ್ಲಭ. ಇವರ ಮನೆಗೆ ಸರ್ಕಾರದವರು ಬಂದು ವಿಚಾರಿಸುವುದಿಲ್ಲ. ನನಗೆ ಯಾವ ಆಧಾರವೂ ಇಲ್ಲದೇ ಬೇರೆ ಇರಲಾಗದು" ಅಜಂರವರು ಗಟ್ಟಿಗರು. ಜಿತಾಮಿತ್ರನಿಗೆ ಕೆಲಸವನ್ನೂ ಕೊಡಿಸಿದರು.

**ಪ್ರಾಯೋಗಿಕ ಅಧ್ಯಯನದ ಮಾದರಿ – ೧**

| | |
|---|---|
| ಹೆಸರು: | ಸೈಯದ್ ಬಿ. |
| ವಯಸ್ಸು: | ೨೪ |
| ಲಿಂಗ: | ಪುರುಷ |
| ಊರು: | ಕಬ್ಬಿಗೆರೆ |
| ವಿದ್ಯಾಭ್ಯಾಸ: | (ಎಂ.ಎ., ಪಿಎಚ್.ಡಿ.,) |

ಈ ಕಥೆಯು ಒಬ್ಬ ಸ್ತ್ರೀ ಬರೆದದ್ದು. ಈ ಕಥೆಯು ಹೆಣ್ಣು ಬರೆದದ್ದೆಂದು ನನ್ನ ಅನಿಸಿಕೆ. ಏಕೆಂದರೆ, ಈ ಲೇಖನದಲ್ಲಿ ಒಂದು ಹೆಣ್ಣು ನೋವನ್ನು ಪುರುಷನಿಂದ ಉಂಡವಳಾಗಿದ್ದು, ಅವನಿಂದ ದೂರವಾಗಿದ್ದಂತೆ ಕಾಣುತ್ತದೆ. ಅವಳು ತನ್ನ ಪತಿಯು ಮಾಡಿದಂತಹ ಮೋಸವನ್ನು ನೆನೆಯುತ್ತಿರಬಹುದೆಂಬ ಊಹೆಯನ್ನು ಹೆಣ್ಣು ಮಾಡಿದಂತೆ ಇದೆ. ಈ ಕಥೆಯಲ್ಲಿ ಬರುವ ಪುರುಷನ ಸಂಭಾಷಣೆಗಳು ಪುರುಷ ಬರೆದಂತೆ ಕಾಣುವುದಿಲ್ಲ. ಪುರುಷನ ಮನಃಸ್ಥಿತಿಯನ್ನು ತಿಳಿದ ಹೆಣ್ಣು ಬರೆದಂತೆ ನನಗೆ ಗೋಚರಿಸುತ್ತದೆ. ಆದ್ದರಿಂದ ಈ ಕಥೆ ಹೆಣ್ಣು ಬರೆದಿದ್ದು.

**ಪ್ರಾಯೋಗಿಕ ಅಧ್ಯಯನದ ಮಾದರಿ – ೨**

ಹೆಸರು: ಅರ್ಪಿತ ವಿ.

ವಯಸ್ಸು: ೨೩

ಲಿಂಗ: ಮಹಿಳೆ

ಊರು: ಸೂರನಹಳ್ಳಿ

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಈ ಬರಣಿಗೆಯನ್ನು ಪುರುಷ ಬರೆದಿರುವುದಾಗಿ ಹೇಳಬಹುದು. ಕಾರಣ: ಈ ಬರವಣಿಗೆಯಲ್ಲಿ ಬಳಕೆಯಾಗಿರುವ ವೈದಿಕ ಸಂಪ್ರದಾಯ ಧಿಕ್ಕಾರ, ಮಾಂಸಹಾರ ಸೇವನೆ ಈ ತರದ ಪದಗಳ ಬಳಕೆಯಿಂದ ಪುರುಷ ಬರೆದಿರುವುದೆಂದು ಗುರುತಿಸಬಹುದು.

**ಪ್ರಾಯೋಗಿಕ ಅಧ್ಯಯನದ ಮಾದರಿ – ೩**

ಹೆಸರು: ಪುಷ್ಪ.ಕೆ

ವಯಸ್ಸು: ೨೨

ಲಿಂಗ: ಮಹಿಳೆ

ಊರು: ಚಿತ್ರದುರ್ಗ

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಇದನ್ನು ಒಬ್ಬ ಪುರುಷ ಬರೆದಿದ್ದಾರೆ ಎನ್ನಬಹುದು. ಏಕೆಂದರೆ ಇದರಲ್ಲಿ ಪುರುಷನ ಕುರಿತು ವಿವರಿಸಿದ್ದಾರೆ. ಇದರಲ್ಲಿ ಒಬ್ಬ ಗಂಡಸಿನ ಕಷ್ಟ ಮತ್ತು ಮನಸ್ಸಿನ ತಳಮಳದ ಬಗ್ಗೆ ತಿಳಿಸಿದ್ದಾರೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೪**

ಹೆಸರು: ಶರೀಫ್ ಹಸಮಕಲ್

ವಯಸ್ಸು: ೩೦

ಲಿಂಗ: ಪುರುಷ

ಊರು: ಹಸಮಕಲ್

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಈ ಗದ್ಯದ ಬರಹದಲ್ಲಿ ಮಹಿಳೆ ಬರೆದ ಬರಹದ ಭಾಷೆ ಇದೆ. ಕಾರಣ: ಒಂದು ನಿಧಾನಗತಿಯ ವಿವರಣೆ ಇದೆ. ಮಹಿಳೆ ಕಾದಂಬರಿಯ ಸಾಲುಗಳನ್ನು ಬರೆದಿದ್ದಂತೆ ಅನಿಸುತ್ತದೆ. ಹೀಗಾಗಿ ಈ ಬರಹವನ್ನು ಮಹಿಳೆ ಬರೆದ ಬರಹ ಎಂದು ನಿರ್ಧರಿಸಬಹುದಾಗಿದೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೫**

| | |
|---|---|
| ಹೆಸರು: | ಲೋಹಿತೇಶ್ವರಿ ಎಸ್.ಬಿ. |
| ವಯಸ್ಸು: | ೨೩ |
| ಲಿಂಗ: | ಮಹಿಳೆ |
| ಊರು: | ಚಳ್ಳಕೆರೆ |
| ವಿದ್ಯಾಭ್ಯಾಸ: | (ಎಂ.ಎ., ಪಿಎಚ್.ಡಿ.,) |

ಈ ಲೇಖನದಲ್ಲಿ ಪುರುಷ ಮಾತನಾಡಿದ್ದಾನೆ. ವೈದಿಕ ಪರಂಪರೆಯಲ್ಲಿರುವ ಕಟ್ಟುಪಾಡುಗಳನ್ನು ಜಾತಿಯ ಬಗೆಗಿನ ಭಾವನೆಯನ್ನು ಮೀರಿ ಆಧುನಿಕತೆಗೊಡ್ಡಿಕೊಂಡು ಜೀವನ ನಡೆಸುವ ತುಮುಲ ವಿರುವುದು ಕಂಡುಬರುತ್ತದೆ.

**ಬರಹ–೫ ಲೇಖಕರು: ಟಿ.ಆರ್.ಚಂದ್ರಶೇಖರ್, ಕೃತಿ: ಲಿಂಗಸಂಬಂಧಗಳು ಮತ್ತು ಅಭಿವೃದ್ಧಿ, ಪ್ರಕಟಣೆ–೨೦೧೦.**

ನಮ್ಮ ಸಮಾಜದ ಸಂದರ್ಭದಲ್ಲಿ ಕುಟುಂಬವೆಂಬುದು ಆದರ್ಶದ ಸಂಗತಿಯಾಗಿದೆ ಹಾಗೂ ಸಂಸ್ಕೃತಿಯ ಪ್ರತಿನಿಧಿಯಾಗಿದೆ. ಕುಟುಂಬವನ್ನು ಒಂದು ಏಕರೂಪಿ ಸಂಸ್ಥೆಯನ್ನಾಗಿ ಪರಿಭಾವಿಸಿಕೊಂಡು ಬರಲಾಗಿದೆ. ಅಲ್ಲಿನ ಸದಸ್ಯರೆಲ್ಲರೂ 'ಸಮಾನ'ವೆಂದು ಭಾವಿಸಲಾಗಿದೆ. ಮಹಿಳೆಯರ ದೃಷ್ಟಿಯಿಂದ ಅದು ಸಂರಕ್ಷಣೆಯ ಕೋಟೆಯಾಗಿದೆ. ಅದು ಸಾಮಾಜೀಕರಣದ ಸಾಧನವಾಗಿದೆ. ಮಹಿಳಾ ಅಧ್ಯಯನಕ್ಕೆ ಸಂಬಂಧಿಸಿದ ವಿದ್ವಾಂಸರು ಹಾಗೂ ಅವರ ಅಧ್ಯಯನಗಳು ದೃಢಪಡಿಸುವ ಸಂಗತಿಯೆಂದರೆ ಏಕರೂಪದಿಂದ ಕೂಡಿರುವ ಹಾಗೂ ಸಮಾನ ಸ್ಥಾನಮಾನ ಪಡೆದಿರುವ ಸದಸ್ಯರ ಒಂದು ಸಂಸ್ಥೆಯನ್ನಾಗಿ ಕುಟುಂಬವನ್ನು ಪರಿಗಣಿಸುವುದು ಸಾಧ್ಯವಿಲ್ಲ ಎಂಬುದಾಗಿದೆ. ಕುಟುಂಬದ ಸಂಪನ್ಮೂಲ, ಹಕ್ಕುದಾರಿಕೆ ಹಾಗೂ ಅಲ್ಲಿನ ಅವಕಾಶಗಳು ಅದರ ಸದಸ್ಯರೆಲ್ಲರಿಗೂ ಸಮಾನವಾಗಿ ದೊರೆಯುವುದಿಲ್ಲ. ಇಲ್ಲಿ ನಡೆಯುವ ಸಾಮಾಜೀಕರಣವು ಹೆಣ್ಣನ್ನು ಮಹಿಳೆಯನ್ನಾಗಿ ರೂಪಿಸುತ್ತದೆ ಮತ್ತು ಅಲ್ಲಿ ಎರಡನೆಯ ಸ್ಥಾನವನ್ನು ಮಹಿಳೆಯು ಸ್ವ–ಇಚ್ಛೆಯಿಂದ ಒಪ್ಪಿಕೊಳ್ಳುವಂತೆ ಮಾಡುತ್ತದೆ. ಹುಟ್ಟುತ್ತಲೇ ಯಾರೂ ಮಹಿಳೆಯಾಗಿರುವುದಿಲ್ಲ. ಸಾಮಾಜೀಕರಣ ಪ್ರಕ್ರಿಯೆಯ ಮೂಲಕ ಹೆಣ್ಣೊಬ್ಬಳು ಮಹಿಳೆಯಾಗುತ್ತಾಳೆ. ಮಹಿಳೆಯಾಗುವುದರ ಮೂಲಕವೇ ಆಕೆಗೆ ಅಧೀನ ಸ್ಥಿತಿ ಪ್ರಾಪ್ತವಾಗಿ ಬಿಡುತ್ತದೆ.

ಕುಟುಂಬ ಹಾಗೂ ಕೌಟುಂಬಿಕ ವ್ಯವಸ್ಥೆಯು ಮಹಿಳೆಯ ಮೇಲೆ ಅನೇಕ ಬಗೆಯ ನಿಯಂತ್ರಣಗಳನ್ನು ವಿಧಿಸುತ್ತದೆ. ಪುರುಷರಿಗೆ ಇಲ್ಲದಿರುವ ನಿಯಂತ್ರಣವನ್ನು ಮಹಿಳೆಯರ ಲೈಂಗಿಕತೆ ಮೇಲೆ ವಿಧಿಸಲಾಗುತ್ತದೆ. ಕುಟುಂಬದ 'ಮರ್ಯಾದೆ' ಹಾಗೂ 'ಪಾವಿತ್ರ್ಯತೆ'ಯನ್ನು ಕಾಪಾಡುವ ಜವಾಬುದಾರಿ ಮಹಿಳೆಯರದೇ ವಿನಾ ಪುರುಷರದ್ದಲ್ಲ. ಕೌಟುಂಬಿಕ ಹಾಗೂ ದಾಂಪತ್ಯ ಚೌಕಟ್ಟನ್ನು ಮೀರಿ ಪುರುಷರು ಲೈಂಗಿಕ

ಸಂಬಂಧವನ್ನು ಬೆಳೆಸಬಹುದು. ಆದರೆ ಅಂತಹ ಸ್ವಾತಂತ್ರ್ಯ ಮತ್ತು ಅವಕಾಶ ಮಹಿಳೆಯರಿಗಿಲ್ಲ. ಲೈಂಗಿಕತೆಯ ದೃಷ್ಟಿಯಿಂದ ಮಹಿಳೆಯರು ಮಾತ್ರ 'ಅಪವಿತ್ರ'ರಾಗುತ್ತಾರೆ. ಆದರೆ ಅಪವಿತ್ರತೆಯ ಶಾಪ ಪುರುಷರಿಗೆ ಇಲ್ಲ. ನಮ್ಮ ಸಮಾಜದಲ್ಲಿ ವ್ಯಾಪಕವಾಗಿರುವ ಲಿಂಗತಾರತಮ್ಯ ಪ್ರಣಾಳಿಕೆಗೆ ಇದಕ್ಕಿಂತ ಮತ್ತಾವ ಪುರಾವೆ ಬೇಕು?

ಮಹಿಳೆಯರ ಲೈಂಗಿಕತೆಯ ಮೇಲಿನ ನಿಯಂತ್ರಣವೆಂದರೆ ಅವರ ಸಂತಾನೋತ್ಪತ್ತಿಯ ನಿಯಂತ್ರಣವೇ ಆಗಿದೆ. ಸಂತಾನೋತ್ಪತ್ತಿಯೆಂಬುದು ಮಹಿಳೆಯರ ದೃಷ್ಟಿಯಿಂದ ಕುಟುಂಬದ-ದಾಂಪತ್ಯದ ಚೌಕಟ್ಟಿನಲ್ಲಿ ಮಾತ್ರ ನಡೆಯಬೇಕು. ಆಗ ಮಾತ್ರ ಅದಕ್ಕೆ ಮನ್ನಣೆ ದೊರೆಯುತ್ತದೆ. ಇಂತಹ ಗಡಿರೇಖೆಗಳನ್ನು ಮಹಿಳೆಯರು ಮೀರದಂತೆ ಮಾಡಲು ಅನೇಕ ಬಗೆಯ ವಿಧಿ-ನಿಯಮಗಳನ್ನು ರೂಪಿಸಲಾಗಿದೆ.

ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಯರ ಸಂಚಾರ ಹಾಗೂ ಸಂಪರ್ಕದ ಮೇಲೂ ನಿಯಂತ್ರಣ ವಿಧಿಸಲಾಗಿದೆ. ಏಕೆಂದರೆ 'ಸಂಚಾರ-ಸಂಪರ್ಕ'ದ ಅವಕಾಶಗಳು ದೊರೆತರೆ ಮಹಿಳೆಯರು ಲೈಂಗಿಕತೆಯ ಕಟ್ಟುಪಾಡುಗಳನ್ನು ಮೀರಬಹುದು. ಆದ್ದರಿಂದ ಅವರ ಸಂಚಾರದ ಮೇಲೆ ನಿಯಂತ್ರಣ ವಿಧಿಸಲಾಗಿದೆ ಹಾಗೂ ಅವರು ಯಾರ ಜೊತೆ ಮಾತನಾಡಬೇಕು/ಮಾತನಾಡಬಾರದು ಎಂಬ ಕಟ್ಟುಪಾಡುಗಳನ್ನು ವಿಧಿಸಲಾಗಿದೆ. ಇಲ್ಲಿರುವ ವ್ಯಂಗ್ಯವನ್ನು ನಾವು ಅರ್ಥ ಮಾಡಿಕೊಳ್ಳಬೇಕು. ಇಂತಹ ಕಟ್ಟುಪಾಡುಗಳನ್ನು ಹಾಗೂ ಕಟ್ಟಳೆಗಳನ್ನು ಕೆಳಜಾತಿ-ವರ್ಗಗಳ ಮಹಿಳೆಯರು ಮೀರುವುದು ಅನಿವಾರ್ಯವಾಗಿರುತ್ತದೆ. ಏಕೆಂದರೆ ದುಡಿಮೆಯು ಅವರಿಗೆ ಬದುಕು-ಸಾವಿನ ಪ್ರಶ್ನೆಯಾಗಿರುತ್ತದೆ.

ಅಮರ್ತ್ಯಸೇನ್(೧೯೯೦) ತಮ್ಮ ಒಂದು ಪ್ರಸಿದ್ಧ ಪ್ರಬಂಧದಲ್ಲಿ ಕುಟುಂಬವನ್ನು ಎರಡು ಬಗೆಯ ಸಂಗತಿಗಳು ನೆಲೆಗೊಂಡಿರುವ ಸಂಸ್ಥೆಯೆಂದು ಪ್ರತಿಪಾದಿಸಿದ್ದಾರೆ. ಕುಟುಂಬವು ಸಹಕಾರದ, ಸಂರಕ್ಷಣೆಯ, ಸುಭದ್ರತೆಯ ಒಂದು ತಾಣವೂ ಹೌದು ಮತ್ತು ಅದು ಸಂಘರ್ಷದ, ಹಿಂಸೆಯ ಅಭಿವ್ಯಕ್ತಿಯ ಒಂದು ಸಂಸ್ಥೆಯೂ ಹೌದು. ಕುಟುಂಬ ಚೌಕಟ್ಟಿನೊಳಗಣ ಸಂಘರ್ಷದ ಸ್ವರೂಪವು ಇತರೆ ಬಗೆಯ, ಅಂದರೆ ವರ್ಗ ಸಂಘರ್ಷದ ಸ್ವರೂಪಕ್ಕಿಂತ ಭಿನ್ನವಾಗಿರುತ್ತದೆ. ಏಕೆಂದರೆ ಇಂತಹ ಸಂಘರ್ಷದಲ್ಲಿ ನಿರತರಾಗಿರುವ ಮಹಿಳೆ ಮತ್ತು ಪುರುಷ ಒಂದೇ ಸೂರಿನಡಿಯಲ್ಲಿ ವಾಸಿಸುತ್ತಿರುತ್ತಾರೆ. ಆದರೆ ವರ್ಗ ಸಂಘರ್ಷದಲ್ಲಿ ಕಾರ್ಮಿಕ ಮತ್ತು ಮಾಲೀಕ ಒಂದೇ ಸೂರಿನಡಿಯಲ್ಲಿ ಬದುಕುತ್ತಿರುವುದಿಲ್ಲ. ಕುಟುಂಬದ ಚೌಕಟ್ಟಿನಲ್ಲಿ ಮಹಿಳೆ ಮತ್ತು ಪುರುಷ ಸಂಯುಕ್ತವಾಗಿ ಅನೇಕ ಕಾರ್ಯಗಳನ್ನು ನಿಭಾಯಿಸಬೇಕಾಗುತ್ತದೆ. ಈ ಬಗೆಯ ಸೌಹಾರ್ದ ಸಂಬಂಧದಿಂದಾಗಿ ಲಿಂಗಸಂಬಂಧಿ ಘರ್ಷಣೆಗಳು ತುಂಬಾ ವಿಭಿನ್ನವಾಗಿರುತ್ತವೆ.

ಈ ಸಂಘರ್ಷದ ಬಹುಮುಖ್ಯ ಸ್ವರೂಪವೆಂದರೆ ಅವು ಘರ್ಷಣೆಗಳಾಗಿ ಕಂಡು ಬರುವುದಿಲ್ಲ. ಏಕೆಂದರೆ ಕುಟುಂಬವೆಂಬುದು ಸಹಕಾರದ, ಸೌಹಾರ್ದತೆಯ ಹಾಗೂ ಸಂರಕ್ಷಣೆಯ ಒಂದು ಸಂಸ್ಥೆಯೆಂದೆ ಪ್ರತೀತಿ. ಈ ಸಹಕಾರ-ಸೌಹಾರ್ದತೆ-ಸಂರಕ್ಷಣೆಯ ಚೌಕಟ್ಟಿನಲ್ಲಿ ಮಹಿಳೆಯರು ಮತ್ತು ಪುರುಷರ ನಡುವಿನ ಘರ್ಷಣೆಗಳು ಬಹಿರಂಗವಾಗಿ ಗೋಚರಿಸುವುದಿಲ್ಲ. ಕುಟುಂಬದೊಳಗಿನ ಲಿಂಗಸಂಬಂಧಗಳ

ನಡುವೆ ತೀವ್ರ ಘರ್ಷಣೆಯ ಸಂಗತಿಗಳಿದ್ದರೂ ಅವುಗಳು ಬಹಿರಂಗಗೊಳ್ಳುವುದಿಲ್ಲ. ಕುಟುಂಬದ ರಚನೆಯ ಸ್ವರೂಪವೇ ಹೇಗಿರುತ್ತದೆಯೆಂದರ ಅಲ್ಲಿ ಘರ್ಷಣೆಗಳು ಸಹಕಾರದ ಸ್ವರೂಪದಲ್ಲೇ ಇರುತ್ತವೆ. ಘರ್ಷಣೆಯ ಅಂಶಗಳನ್ನು ಕುಟುಂಬದ ಮಹಿಳಾ ಸದಸ್ಯರು ಜೀರ್ಣಿಸಿಕೊಳ್ಳಬೇಕಾಗುತ್ತದೆ. ಒಂದು ವೇಳೆ ಘರ್ಷಣೆಯು ಬಹಿರಂಗಗೊಂಡರೆ ಕುಟುಂಬವು–ದಾಂಪತ್ಯವು ಮುರಿದು ಬೀಳಬಹುದು. ಈ ರೀತಿ ಕುಟುಂಬ–ದಾಂಪತ್ಯ ಮುರಿದು ಬಿದ್ದರೆ ಅದರಿಂದ ಉಂಟಾಗುವ ಹಾನಿ ಹಾಗೂ ದುಷ್ಪರಿಣಾಮ ಮಹಿಳೆಯರಿಗೆ ಹೆಚ್ಚು ಆಘಾತಕಾರಿಯಾಗಿರುತ್ತದೆ. ಆದ್ದರಿಂದ ಮಹಿಳೆಯರು ಸಹಕಾರದ ದಾರಿಯನ್ನು ಅನಿವಾರ್ಯವಾಗಿ ಅನುಸರಿಸಬೇಕಾಗುತ್ತದೆ. ಮಹಿಳೆಯರಿಗೆ ಬದುಕನ್ನು ಕಟ್ಟಿಕೊಳ್ಳಲು ವಿಕಲ್ಪಗಳೇ ಇಲ್ಲದಿರುವಾಗ ಕೌಟುಂಬಿಕ ಹಿಂಸೆಯನ್ನು ಮೌನವಾಗಿ ಅನುಭವಿಸಬೇಕಾಗುತ್ತದೆ. ಕುಟುಂಬವನ್ನು ಮತ್ತು ಅದರೊಳಗೆ ಲಿಂಗಸಂಬಂಧಗಳನ್ನು ಪರಿಭಾವಿಸಿಕೊಳ್ಳುವ ಕ್ರಮ ಕುರಿತಂತೆ ಅಮರ್ತ್ಯಸೇನ್ ಅವರ ಸಿದ್ಧಾಂತವು ತೀವ್ರ ಪರಿವರ್ತನೆ ತಂದಿದೆ. ಮಹಿಳೆಯರ ಹಿತಾಸಕ್ತಿ ದೃಷ್ಟಿಯಿಂದ ಅವರ 'ಸಹಕಾರವಾದಿ ಸಂಘರ್ಷ'ವೆಂಬ ಸಿದ್ಧಾಂತವು ತುಂಬಾ ಮಹತ್ವಪೂರ್ಣವಾದುದಾಗಿದೆ. ಲಾಗಾಯ್ತಿನಿಂದ ಕುಟುಂಬವನ್ನು, ಕುಟುಂಬದೊಳಗಿನ ಲಿಂಗ ಸಂಬಂಧಗಳನ್ನು ಸಹಕಾರದ, ಸುಭದ್ರತೆಯ, ಸೌಹಾರ್ದತೆಯ ಸ್ವರೂಪದಲ್ಲಿ ಪರಿಭಾವಿಸಿಕೊಳ್ಳುವ ಕ್ರಮದ ಇತಿಮಿತಿಗಳನ್ನು ಅಮರ್ತ್ಯಸೇನ್ ವಿವರವಾಗಿ ತೋರಿಸಿಕೊಟ್ಟಿದ್ದಾರೆ.

ಲಿಂಗಸಂಬಂಧಗಳನ್ನು ಕುರಿತ ಅಧ್ಯಯನಗಳಲ್ಲಿ ಗಮನಸೆಳೆಯುವ ಸಂಗತಿಯೆಂದರೆ ಮಹಿಳೆಯರ ದುಡಿಮೆ. ಅನೇಕ ಅಧ್ಯಯನಗಳು ತೋರಿಸಿಕೊಟ್ಟಿರುವಂತೆ ಮಹಿಳೆಯನ್ನು 'ಗೃಹಿಣಿ'ಯನ್ನಾಗಿ ಪರಿಗಣಿಸುವುದು ರೂಢಿಯಲ್ಲಿದೆ ವಿನಾ ಆಕೆಯನ್ನು ದುಡಿಮೆಗಾರಳೆಂದಲ್ಲ. ಮಹಿಳೆಯರನ್ನು ಕೇವಲ 'ಅನುಭೋಗಿ'ಗಳಾಗಿ ಸಮಾಜವು ಪರಿಗಣಿಸುತ್ತಾ ಬಂದಿದೆ ವಿನಾ ಉತ್ಪಾದಕಳಾಗಿ ಅಲ್ಲ. ಗೃಹವಾರ್ತೆಯನ್ನು ಸಮಾಜ ವಿಜ್ಞಾನಗಳು ದುಡಿಮೆಯೆಂದು ಪರಿಗಣಿಸುವುದಿಲ್ಲ. ಅದೇನಿದ್ದರೂ ಮಹಿಳೆಯರು ನಿರ್ವಹಿಸಬೇಕಾದ ಜೈವಿಕ ಕಾರ್ಯ. ಸಂತಾನೋತ್ಪತ್ತಿಯನ್ನು ಜೈವಿಕ ಸಂಗತಿಯನ್ನಾಗಿ ಪರಿಗಣಿಸಿದ್ದರಿಂದ ಕಾರ್ಮಿಕ ಶಕ್ತಿಯನ್ನು ಉತ್ಪಾದಿಸುವ ಮಹಿಳೆಯರ ಫಲವಂತಿಕೆಯನ್ನು ಜೈವಿಕವೆಂದು ಪರಿಗಣಿಸಲಾಯಿತೆ ವಿನಾ ಆರ್ಥಿಕವೆಂದಲ್ಲ. ಈ ಬಗೆಯ ನಂಬಿಕೆಯ ಭಾಗವಾಗಿ ಮಹಿಳೆಯರ ಕಾರ್ಯಕ್ಷೇತ್ರವನ್ನು ಖಾಸಗಿ ಕುಟುಂಬಕ್ಕೆ ಸೀಮಿತಗೊಳಿಸಲಾಯಿತು. ಸಾರ್ವಜನಿಕ ಕ್ಷೇತ್ರದ ಪ್ರವೇಶವು ಮಹಿಳೆಯರಿಗೆ ನಿಷಿದ್ಧವಾದುದರಿಂದ ಅವರು ದುಡಿಮೆಗಾರರಾಗುವುದು ಸೈದ್ಧಾಂತಿಕವಾಗಿ ಸಾಧ್ಯವಿಲ್ಲವಾಯಿತು.

**ಪ್ರಾಯೋಗಿಕ ಅಧ್ಯಯನದ ಮಾದರಿ – ೧**

| | |
|---|---|
| ಹೆಸರು: | ಸಾಗರ್ ಜೆ.ಸಿ. |
| ವಯಸ್ಸು: | ೨೧ |
| ಲಿಂಗ: | ಪುರುಷ |
| ಊರು: | ಚಿತ್ರದುರ್ಗ |
| ವಿದ್ಯಾಭ್ಯಾಸ: | (ಎಂ.ಎ., ಪಿಎಚ್.ಡಿ.,) |

ಈ ಲೇಖನವು ಸ್ತ್ರೀ ಬರವಣಿಗೆಯನ್ನು ಹೊಂದಿದೆ. ಏಕೆಂದರೆ, ಈ ಲೇಖನವನ್ನು ಗಮನಿಸಿದ ನಂತರ ಈ ಲೇಖನವು ಸ್ತ್ರೀಯರ ಶೋಷಣೆ ಮತ್ತು ಸ್ವಾತಂತ್ರ್ಯವನ್ನು ಈ ಪುರುಷ ಸಮಾನತೆಯನ್ನು ವಿರೋಧಿಸುವುದನ್ನೇ ಇಲ್ಲಿ ಚಿತ್ರಿಸಲಾಗಿದೆ. ಆದ್ದರಿಂದ ಈ ಲೇಖನವು ಸ್ತ್ರೀಯರ ಬರವಣಿಗೆಂದು ತಿಳಿಯುತ್ತದೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೨**

ಹೆಸರು: ಅನಿತಾ

ವಯಸ್ಸು: ೨೧

ಲಿಂಗ: ಮಹಿಳೆ

ಊರು: ಬೂದಗುಂಪ

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಈ ಲೇಖನವು ಮಹಿಳೆ ಅಥವಾ ಪುರುಷ ಬರೆದದ್ದು ಎಂದು ಗುರುತಿಸುವುದು ಕಷ್ಟವಾಗಿದೆ. ಕಾರಣ; ಈ ಲೇಖನದಲ್ಲಿನ ಓದು ಪುರುಷನೇ ಒಮ್ಮೆ ಎನಿಸಿದರು, ಇನ್ನೊಮ್ಮೆ ಇದು ಮಹಿಳೆಯದ್ದು ಎನ್ನಿಸುತ್ತದೆ. ಪದಗಳ ಬಳಕೆಯಲ್ಲಿ ಸ್ವಲ್ಪ ಗೊಂದಲ ಉಂಟುಮಾಡುತ್ತದೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೩**

ಹೆಸರು: ಲೋಹಿತೇಶ್ವರಿ ಎಸ್.ಪಿ.

ವಯಸ್ಸು: ೨೩

ಲಿಂಗ: ಮಹಿಳೆ

ಊರು: ಚಳ್ಳಕೆರೆ

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಈ ಲೇಖನವನ್ನು ಮಹಿಳೆ ಬರೆದಿದ್ದಾಳೆ. ಇಲ್ಲಿ ಕುಟುಂಬದಿಂದಲೇ ಹೆಣ್ಣಿನ ಶೋಷಣೆ ಯಾವ ರೀತಿಯಾಗಿ ಆರಂಭವಾಗುತ್ತದೆ ಅದು ಹೆಣ್ಣು ಮಕ್ಕಳೇ ಯಾವ ರೀತಿಯಾಗಿ ಒಪ್ಪಿಕೊಳ್ಳುವಂತೆ ಮಾಡಿದೆ ಎಂದು ಇದ್ದನ್ನೆಲ್ಲ ಅನುಭವಿಸಿದವರು ಇಲ್ಲಿ ಅಭಿವ್ಯಕ್ತಿಗೊಳಿಸಿದ್ದಾರೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೪**

ಹೆಸರು: ನಟರಾಜ್ ಜೆ.ಆರ್.

ವಯಸ್ಸು: ೩೦

ಲಿಂಗ: ಪುರುಷ

ಊರು: ಜೀಗಿಹಳ್ಳಿ

ವಿದ್ಯಾಭ್ಯಾಸ: (ಪಿಎಚ್.ಡಿ.,)

ಈ ಬರವಣಿಗೆಯಲ್ಲಿನ ಅಭಿವ್ಯಕ್ತಿ ಮಹಿಳೆಯದ್ದಾಗಿದೆ. ಏಕೆಂದರೆ ಇತಿಹಾಸದಲ್ಲಿ ಯಾವ ಪುರುಷನೂ ಕೂಡ ತನ್ನ ದೌರ್ಬಲ್ಯವನ್ನು ಒಪ್ಪಿಕೊಳ್ಳದೆ. ಅದೆಲ್ಲವನ್ನು ಮಹಿಳೆಯ ಮೇಲೆ ಹೇರುವುದು ಸರ್ವೇಸಾಮಾನ್ಯ

ಹಾಗಾಗಿ ಈ ಬರವಣಿಗೆಯಲ್ಲಿ ಹೆಣ್ಣಿನ ಶೋಷಣೆಯ ಬಗ್ಗೆ ಹೆಣ್ಣಾದವಳೇ ಹೇಳಿಕೊಳ್ಳಬೇಕೆ ಹೊರತು ಯಾವೊಬ್ಬ ಪುರುಷನು ಹೇಳಲಾರ. ಹಾಗಾಗಿ ಈ ಬರವಣಿಗೆಯನ್ನು ಮಹಿಳೆಯ ಮೇಲಿನ ಶೋಷಣೆಗಳನ್ನು ಹೇಳಿಕೊಂಡಿರುವುದು ಮಹಿಳೆಯೇ ಆಗಿದ್ದಾಳೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೫**

| | |
|---|---|
| ಹೆಸರು: | ನಿರ್ಮಲ ಎಂ. |
| ವಯಸ್ಸು: | ೩೦ |
| ಲಿಂಗ: | ಮಹಿಳೆ |
| ಊರು: | ಜಗಳೂರು |
| ವಿದ್ಯಾಭ್ಯಾಸ: | (ಎಂ.ಎ., ಪಿಎಚ್.ಡಿ.,) |

ಈ ಸಾರಾಂಶ ಬರೆದವರು ಮಹಿಳೆ. ಕಾರಣ: ಇಲ್ಲಿ ಮಹಿಳೆ ಮತ್ತು ಪುರುಷ ನಡುವಿನ ತಾರತಮ್ಯವನ್ನು ಸಮಾಜ ಹೇಗೆ ನೋಡುತ್ತದೆ ಎಂಬ ವಿಡಂಬನೆಯಿದೆ. ಹೆಣ್ಣು ತನ್ನ ಜೀವನದಲ್ಲಿ ನಡೆಯುವ ದುರಂತದ ಬದುಕನ್ನು ತನ್ನ ಮಾತುಗಳ ಮೂಲಕವೇ ಇಲ್ಲಿ ಪ್ರಸ್ತುತ ಪಡಿಸಿದ್ದಾಳೆ. ಉದಾ: ಹುಟ್ಟುತ್ತಲೇ ಯಾರೂ ಮಹಿಳೆಯಾಗುವುದಿಲ್ಲ. ಮರ್ಯಾದೆ, ಪಾವಿತ್ರ್ಯತೆ ಅಪವಿತ್ರ ಎಂಬಂತಹ ಪದಗಳು ನೇರವಾಗಿ ತನಗೆ (ಹೆಣ್ಣಿಗೆ) ಸೇರಿದವುಗಳೆಂಬ ಆತ್ಮ ನಿವೇದನೆಯ ಮಾತುಗಳಿರುವುದರಿಂದ ಇದು ಮಹಿಳೆ ಬರೆದ ಸಾರಾಂಶವಾಗಿದೆ.

**ಬರಹ–೬ ಲೇಖಕರು: ಪ್ರೇಮ ಕಾರಂತ, ಆತ್ಮಕಥೆ–ಸೋಲಿಸಬೇಡ ಗೆಲಿಸಯ್ಯ, ಪ್ರಕಟಣೆ–೨೦೧೦.**

ನಾಟಕವೆನ್ನುವುದು ಮೂಲತಃ ಒಂದು ಜೀವಂತ ಅನುಭವ. ನಾಟಕ ಅನ್ನೋದು ಮಾನವೀಯ ಸಂಬಂಧಗಳ, ವಸ್ತುಸ್ಥಿತಿಗಳ, ಪಾತ್ರಗಳ, ಭಾವನೆಗಳು, ಕಥೆಗಳ ಒಂದು ಪುನರ್ ಸೃಷ್ಟಿ. ಮಕ್ಕಳಲ್ಲಿರುವ ಅದಮ್ಯ ಉತ್ಸಾಹ, ಮಾತಿನ ಸರಣಿ, ಮುಖಭಾವ, ಕಾರ್ಯರೂಪಕ್ಕೆ ಬರಲು ಪ್ರತಿಕ್ಷಣವೂ ಚಡಪಡಿಸುವ ಚೈತನ್ಯ–ಇವುಗಳನ್ನೆಲ್ಲಾ ಉಪಯೋಗಿಸಿಕೊಂಡ ನಾಟಕ ಚೆಂದ. ಮಕ್ಕಳ ಬೆಳವಣಿಗೆಗೆ ಇವೆಲ್ಲದರ ಅವಶ್ಯಕತೆ ಇದೆಯೆಂಬುದನ್ನೂ ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಆದರೆ ಈಗಿನ ಮಕ್ಕಳ ಅಭಿರುಚಿಯನ್ನರಿತು ನಾಟಕ ಬರೆಯುವವರು ಬಹಳ ಕಡಿಮೆ. ಮಕ್ಕಳ ಬುದ್ಧಿಯ ಹಸಿವನ್ನು ಅರಿತುಕೊಂಡರೆ ನಾಟಕ ಮಾಧ್ಯಮದಲ್ಲಿ ಅತ್ಯಾಶ್ಚರ್ಯಗಳನ್ನು ತೋರಿಸಬಹುದು.

ಮಕ್ಕಳಿಗೆ ನಾಟಕ ಬರೆಯೋದು ಒಂದು ದ್ವಂದ್ವವೇ. ನಾನು ಹೇಳಿದಂತೆ ಈಗಿನ ಕಾಲದ ಮಕ್ಕಳಿಗೆ ವಾಸ್ತವಿಕತೆಯುಳ್ಳ ನಾಟಕಗಳು, ಐತಿಹಾಸಿಕ ನಾಟಕಗಳು, ಮಾಯಾಲೋಕದ ನಾಟಕಗಳು, ಸಾಹಸ ನಾಟಕಗಳು ಇಷ್ಟ. ಎಲ್ಲಾ ನಾಟಕಗಳಲ್ಲೂ ಇರುವ ಹಾಗೆ ಮಕ್ಕಳ ನಾಟಕಗಳಲ್ಲೂ ಒಂದು Central Character ಬೇಕಾಗುತ್ತೆ. ಮಕ್ಕಳ ನಾಟಕದ ಮುಖ್ಯ ಅಂಶ ಅಂದರೆ ಅರ್ಥವತ್ತಾದ ಒಂದು ನಮೂನೆ. ಅದಕ್ಕಿಂತ ಹೆಚ್ಚಾಗಿ ಬಲವಾದ ಕಥೆಯಿರಬೇಕು. ಕಥೆ ಬೇರೆ, ಕಥೆಯ Plot ಬೇರೆ. ಅಂದರೆ ಕಥೆಯನ್ನು ಯಾವ ರೀತಿ ನಕ್ಷೆ ಬರೆದ ಹಾಗೆ ಬಳಸಿಕೋತೀವಿ ಅನ್ನೋದು ಮುಖ್ಯ. ಬಹಳಷ್ಟು ಜನ ಕಥೇನ,

ಪ್ಲಾಟ್‌ನ ಎರಡೂ ಒಂದೇ ಅನ್ನುವ ರೀತಿ ಗಲಿಬಿಲಿ ಮಾಡಿಕೊಳ್ಳುತ್ತಾರೆ. ಇನ್ನೂ ವಿಶದವಾಗಿ ಹೇಳಬೇಕೆಂದರೆ ಕಥೆ ಪ್ಲಾಟ್‌ನ ಒಂದು ಭಾಗ ಮಾತ್ರ. ಯಾವ ರೀತಿ ಕಥ ಹೇಳ್ತೀವಿ? ಪಾತ್ರಗಳ ಸಂಬಂಧ ಏನು? ಪಾತ್ರಗಳು ಏನಾಗುತ್ತವೆ? ಇದೆಲ್ಲಾ ಪ್ಲಾಟ್. ಒಂದೇ ಕಥೇನ ಎಷ್ಟು ರೀತಿ ಹೇಳಬಹುದಲ್ಲವೇ? ಅಂದರೆ ರಚನೆಗೆ ಬಂದಾಗ ಪ್ಲಾಟು ಉದ್ದೇಶ ಸಂಭಾಷಣೆ ಎಲ್ಲವೂ ಬರುತ್ತೆ. ಉದಾ: 'ಅಲೀಬಾಬ', 'ನೀಲಿಕುದುರೆ', ಎರಡು ನಾಟಕಗಳು ರಚನೆಯಲ್ಲಿ ಅದ್ಭುತ. ಒಂದು ವೇಳೆ ರಚನೆಯೊಳಗೊಂದು ಸಣ್ಣ ರಚನೆ(SubPlot) ಬಂದಾಗ ಅದು ಯಾವುದೇ ಗೋಜಲುಗಳನ್ನು ಉಂಟುಮಾಡದೇ, ಕಥೆ ಮುಂದುವರೆಯುತ್ತಾ ಹೋಗಬೇಕು. ಈಗಿನ ನಾಟಕಗಳಲ್ಲಂತೂ ಸಿನಿಮಾ ತರಹ fights ಎಲ್ಲಾ ಹಾಕಿ ನಾಟಕ ಬರೆಯುವವರು ಇದ್ದಾರೆ. ಮಕ್ಕಳಿಗೆ ದೈಹಿಕ ಚಲನೆಗಳೇನೋ ತುಂಬಾ ಇಷ್ಟ! ಆದರೆ ನಾಟಕದ ತುಂಬಾ ದೈಹಿಕ ಚಲನೆಗಳೇ ಆಗಿಬಿಟ್ಟರೆ ಮಾನಸಿಕವಾಗಿ ಇರಬೇಕಾದ ಅಂಶಗಳು ಕೈಬಿಟ್ಟು ಹೋಗುತ್ತವೆ.

ಎಲ್ಲಾ ನಾಟಕದಲ್ಲೂ ಕ್ಲೈಮ್ಯಾಕ್ಸ್ ಬೇಕೇ ಬೇಕು, ನಿಜ. ಕೆಲವು ನಾಟಕಗಳಲ್ಲಿ Anticlimax ಕೂಡ ಇರುತ್ತೆ. ಆದರೆ ಮಕ್ಕಳ ನಾಟಕಗಳಲ್ಲಿ ಇರದೇ ಇದ್ದರೆ ಇಳ್ಳೆಯದು. ನೋಡುವ ಮಕ್ಕಳು climax ಆದ ತಕ್ಷಣ ನಾಟಕ ಮುಗಿತೆಂದು ಎದ್ದೇ ಬಿಡುತ್ತಾರೆ. ಅಷ್ಟೊಂದು ಸಹನೆ ಮಕ್ಕಳಲ್ಲಿ ಇರೋಲ್ಲ. ಪ್ರತಿಯೊಂದು ದೃಶ್ಯದಲ್ಲೂ ಒಂದೊಂದು ಪುಟ್ಟ crisisಗಳು. ಅಂದರೆ ಒಂದು ಪ್ರಶ್ನೆನಾ ಉತ್ತರಿಸದೆ ಬಿಟ್ಟುಬಿಡುತ್ತೆ ಅಂತ ಇಟ್ಟುಕೋಳ್ಳೋಣ. ಈ ಸಣ್ಣ ಸಣ್ಣ crisis ಗಳೆಲ್ಲಾ ಸೇರಿ ತುಟ್ಟ ತುದಿಯಲ್ಲೊಂದು climax ಬರುತ್ತೆ. ಅದು ನಡೆದು ಬರುವ ದಾರಿ ಯಾವುದೇ ರೀತಿಯಲ್ಲಿ ಗಲಿಬಿಲಿಯಾಗಬಾರದು.

ಮಕ್ಕಳಿಗೆ ಕಥೆಗಳು ಸ್ವಾರಸ್ಯಪೂರ್ಣವಾಗಿರಬೇಕು. ಕಥೆಯಲ್ಲಿ ಸತ್ವವಿರಬೇಕು. ಸಮಸ್ಯೆಗಳನ್ನೊಡ್ಡಬೇಕು. ಸಮಸ್ಯೆಗಳಿಗೆ ಪರಿಹಾರ ನೀಡುತ್ತಾ ಮುಂದುವರೆಯಬೇಕು. ಹೀರೋ ಇರಲೇಬೇಕು. ಇದ್ದರೆ ಮಕ್ಕಳು ತಮ್ಮನ್ನು ತಾವು ಕಥೆಯ ಹೀರೋಗೆ ಹೋಲಿಸಿಕೊಳ್ಳುತ್ತಾರೆ. ಈಗೆಲ್ಲಾ ಹೀರೋ ಹಾಗಿರಬೇಕು, ಹೀಗಿರಬೇಕು ಎನ್ನೋ ಸಮಸ್ಯೆ ಇಲ್ಲ. ನೋಡೋಕೆ ಚೆನ್ನಾಗಿಲ್ಲದಿದ್ದರೂ ಅವನು ಹೀರೋನೇ. ಹೀರೋನ ಪಾತ್ರ ಮಾತ್ರ ನಾಟಕದುದ್ದಕ್ಕೂ ಬೆಳೆಯುತ್ತಾ ಹೋಗಬೇಕು.

ಮಕ್ಕಳ ನಾಟಕಗಳು ನನಗಂತೂ ಚಮತ್ಕಾರ, ತಮಾಷೆ, ಹಾಡು, ಕುಣಿತಗಳನ್ನೊಳಗೊಂಡಿರಬೇಕು. ಆದರೆ ಅವಾಸ್ತವಿಕತೆಯಾಗಲಿ, ಕೆಟ್ಟ ಅಪರಾಧದ ಕ್ರೂರವಾದ ದೃಶ್ಯಗಳಾಗಲಿ ಮಕ್ಕಳ ನಾಟಕದಲ್ಲಿ ಇರಲೇ ಕೂಡದು ಅವಾಸ್ತವಿಕತೆಯ ಬಗ್ಗೆ ಮಕ್ಕಳು ಪ್ರಶ್ನೆಗಳ ಸುರಿಮಳೆಗಳನ್ನೇ ಹೇರುತ್ತಾರೆ. ನಾಟಕಕಾರರು ನಾಟಕವನ್ನು ದುರ್ಬಲ ಮಾಡಿಬಿಡುತ್ತದೆಂದು ಅಂಥಾ ದೃಶ್ಯಗಳನ್ನು ತೆಗೆಯಲು ಇಷ್ಟ ಪಡುವುದಿಲ್ಲ.

ಈಗಿನ ಕಾಲದ ಮಕ್ಕಳಿಗೆ ಯಾವುದೇ ರೀತಿಯ ನೀತಿಪಾಠಗಳನ್ನು ಹೇಳುವುದೇ ನಾಟಕದಲ್ಲಿ ಒಂದು ಅಡ್ಡಿಯಾಗುತ್ತೆ. ನಾಟಕವನ್ನು ಆಚರಿಸಬೇಕೇ? ಹೊರತು ಹೇಳಿಕೆಗಳಿಂದ ನಾಟಕಗಳಾಗೋಲ್ಲ. ದೇವರಲ್ಲಿ ಭಕ್ತಿಯಿಡು. ಗುರು-ಹಿರಿಯರಿಗೆ ನಮಿಸು. ತರಕಾರಿ ಹೆಚ್ಚಾಗಿ ತಿನ್ನು, ಚೆನ್ನಾಗಿ ನಿದ್ದೆ ಮಾಡು, ಬೆಳಿಗ್ಗೆ ಬೇಗ ಏಳು-ಇವನ್ನೆಲ್ಲಾ ಹೇಳೋಕೆ ಹೊರಟರೆ ನಾಟಕದ ಮುಖ್ಯ ಉದ್ದೇಶದಿಂದ ಎಳೆದುಕೊಂಡು

ದೂರ ಹೋಗುತ್ತೆ. ಸಂಭಾಷಣೆಗಳು ಕೂಡ ಮಕ್ಕಳಿಗೆ ಕಷ್ಟವಾಗಿರಬಾರದು. ತುಂಬಾ ಉದ್ದುದ್ದ ಸಂಭಾಷಣೆಗಳು ಮಕ್ಕಳಿಗೆ ಕಷ್ಟವಾಗಬಹುದು. ನಾಟಕಗಳಲ್ಲಿ ಸಾಧಾರಣವಾಗಿ ನಾವೆಲ್ಲಾ ಹೇಳುವುದು ಮೊದಲು, ಮಧ್ಯ ಮತ್ತು ಅಂತ್ಯ. ಹಾಗೇ ನಾಟಕದ ಮೊದಲನೇ ಭಾಗ ಹೇಗೆ ಮುಖ್ಯವೋ ಹಾಗೆ ಅಂತ್ಯ ಕೂಡ. ಇವೆರಡೂ ನಾಟಕೀಯವಾಗಿಲ್ಲದಿದ್ದರೆ ಮಕ್ಕಳಿಗೆ ಬೋರಾಗಬಹುದು.

ಹೀಗೆ ಒಂದು ಒಳ್ಳೆಯ ನಾಟಕ ಹುಡುಕುತ್ತಾ ಹೋದಾಗ ನನಗೆ ದೊರಕಿದ್ದು Oscar Wilde Selfish Giantನ ಕನ್ನಡ ಭಾವಾನುವಾದ 'ಜಾಯಿಂಟ್ ಮಾಮಾ'. ಸುಬ್ಬಣ್ಣನವರು ಈ ಭಾವಾನುವಾದವನ್ನು ತುಂಬಾ ಚೆನ್ನಾಗಿ ಮಾಡಿದ್ದರು. ಯಕ್ಷಗಾನದಲ್ಲಿ ಬರುವ ಎರಡು ಪಾತ್ರಗಳ ಮೂಲಕ ಕಥೆ ಮುಂದುವರೆಯುತ್ತಾ ಹೋಗುತ್ತದೆ. ಮಕ್ಕಳು ಆಟವಾಡುವುದಕ್ಕೇ ಜಾಗವಿಲ್ಲದಂತೆ ಕಟ್ಟಡಗಳು ಬರುತ್ತವೆ. ಅವರಿಗೆ ಜಾಗವೇ ಇಲ್ಲ ಎನ್ನುವುದು ಮುಖ್ಯ ಕಥಾವಸ್ತು. ಚಮತ್ಕಾರಗಳೂ ತುಂಬ ಇವೆ. ಈ ನಾಟಕವನ್ನು ಎನ್.ಎಸ್.ವಿ.ಕೆ. ಮಕ್ಕಳಿಗಾಗಿ ಮಾಡಿಸಿದೆ. 'ಅಲಿಬಾಬಾ'ದಂತೆ ಹೆಚ್ಚು ಖರ್ಚಿಲ್ಲದ ನಾಟಕ. ಆದರೆ ಇದರಲ್ಲಿ ಅಭಿನಯಕ್ಕೇ ಪ್ರಾಧಾನ್ಯ.

ನನಗೆ ಮಕ್ಕಳ ಜೊತೆ ಕೆಲಸ ಮಾಡುವುದೆಂದರೆ ಬಹಳ ಇಷ್ಟ. ಮಕ್ಕಳು ರೂಢಿಬದ್ಧರೂ, ಪೂರ್ವಾಗ್ರಹಿಗಳೂ ಆಗಿರುವುದಿಲ್ಲ. ಅವರಲ್ಲಿ ಅಭಿನಯಕಲೆ ಅನ್ನೋದು ಒಳಗೇ ಹುದುಗಿಕೊಂಡಿರುತ್ತೆ. ಚಿಕ್ಕವರಾದಾಗ ಅವರು ಆಡುವ ಆಟಗಳನ್ನು ನೋಡಿದರೆ ಅರ್ಥವಾಗುತ್ತೆ. ನೀನು ಕುದುರೆ ಆಗು, ನಾನು ಸವಾರನಾಗುತ್ತೇನೆ. ನೀನು ಡಾಕ್ಟರಾಗು, ನಾನು ರೋಗಿಯಾಗುತ್ತೇನೆ. ನೀನು ಅಮ್ಮ ಆಗು, ನಾನು ಮಗು ಆಗುತ್ತೇನೆ. ಈ ತರಹದ ಆಟಗಳನ್ನು ಒಮ್ಮೊಮ್ಮೆ ಸಂಭಾಷಣೆಯೂ ಇಲ್ಲದೆ ಎಷ್ಟೊಂದು ಚೆನ್ನಾಗಿ ಆಡುತ್ತಿರುತ್ತಾರೆ. ಆದರೆ ಅವರ ಆ ಮುದ್ದಾದ ಆಟಗಳನ್ನು ಯಾರೂ ಗಮನಿಸುವುದೇ ಇಲ್ಲ. ಏನೋ ಮಕ್ಕಳು ಆಡಿಕೊಂಡಿದ್ದಾರೆಂದು ಅಸಡ್ಡೆ ಮಾಡಿ ಬಿಡುತ್ತಾರೆ. ಎಲ್ಲರೂ ಎಲ್ಲವನ್ನೂ ಅನುಭವದಿಂದಲೇ ಹೆಚ್ಚು ಕಲಿಯುತ್ತಾರೆ. ಅನುಭವದಿಂದ ನಾವು ಕಲಿಯೋ ಅಷ್ಟು ಬೇರ್‍ಯಾವುದರಿಂದಲೂ ಕಲಿಯುವುದಿಲ್ಲ. ಮಗುವನ್ನೇ ತೆಗೆದುಕೊಳ್ಳಿ, ಕಾಲು ಬಡಿಯುವದರಿಂದ ಹಿಡಿದು ತೆವಳೋದರಿಂದ ನಡೆಯೋವರೆಗೂ ಅನುಕರಣೆಯಿಂದಲೇ ಕಲಿತು, ಅವನ್ನು ಅನುಭವಿಸಿ ಅನುಭವಿಸಿ ತನ್ನದಾಗಿಸಿಕೊಳ್ಳುತ್ತದೆ. ಕಲಿತದ್ದನ್ನು ಮಗು ಅನುಭವಿಸುತ್ತದೆಯಲ್ಲಾ! ಅದು ನೋಡಲು ಎರಡು ಕಣ್ಣು ಸಾಲದು. ಮಕ್ಕಳಿಗೆ ನಾಟಕವೆನ್ನುವುದು ಒಂದು ಜೀವಂತ ಅನುಭವ, ಒಂದು ಸಮಗ್ರ ಭೋಜನವಿದ್ದಂತೆ ಅಂದರೆ ನಾಟಕದಲ್ಲಿ ಇತರ ಕಲೆಗಳಾದ ಸಂಗೀತ, ನೃತ್ಯ, ಚಿತ್ರಕಲೆ, ಕರಕುಶಲಕಲೆ, ತರಹ ತರಹದ ಆಟಗಳು, ವಸ್ತ್ರವಿನ್ಯಾಸ, ಪ್ರಸಾಧನ, ಮುಖವಾಡ ತಯಾರಿಕೆ ಪರಿಕರಗಳನ್ನು ಮಾಡುವುದು, ಎಲ್ಲಾ ಹಾಸುಹೊಕ್ಕಾಗಿ ಸೇರಿಕೊಂಡುಬಿಟ್ಟಿರುತ್ತೆ. ಅದಕ್ಕೇ ನಾಟಕವನ್ನು ಜೀವಂತ ಅನುಭವ ಎನ್ನುವುದು.

ಅಭಿನಯಕಲೆಯೆನ್ನುವುದು ಬಹಳ ಶಕ್ತಿಯುತವಾದ ಮಾಧ್ಯಮ. ಆದರೆ ಮಕ್ಕಳಿಗೆ ಅಭಿನಯವನ್ನು ತಮ್ಮ ಕಲ್ಪನಾಶಕ್ತಿಯಿಂದ ಕಾರ್ಯರೂಪಕ್ಕೆ ತಂದು ಮಾಡಿ ತೋರಿಸುವ ಶಕ್ತಿ ಇರಬೇಕು. ಮಕ್ಕಳು ತಮ್ಮ ಈ ಶಕ್ತಿಯನ್ನೆಲ್ಲಾ ಉಪಯೋಗಿಸಿಕೊಳ್ಳುವಂತೆ ಅವರಿಗೆ ಸಹಾಯ ಮಾಡಿದಲ್ಲಿ, ಅವರಲ್ಲಿ ಒಂದು ಜವಾಬ್ದಾರಿ, ಸ್ವತಂತ್ರವಾಗಿ ಯೋಚಿಸೋ ಶಕ್ತಿಯನ್ನು ಕೂಡ ಬೆಳೆಸುತ್ತೆ.

ಮಕ್ಕಳಲ್ಲಿರುವ ಅಭಿನಯಕಲೆಯನ್ನು ಬೆಳೆಸಲು ನಾಟಕ ಶಿಬಿರಗಳ ಅಗತ್ಯ ಬಹಳ ಇದೆ. ಶಿಬಿರದಲ್ಲಿ ಒಂದು ನಾಟಕವನ್ನು ಆರಿಸಿಕೊಂಡು, ಅದರ ಪ್ರದರ್ಶನದ ಸಿದ್ಧತೆಯಲ್ಲಿ ತೊಡಗಿದಾಗ, ಅಭ್ಯಾಸ ಮಾಡಲಾರಂಭಿಸಿದಾಗ, ಇತರ ಕಲೆಗಳಾದ ಮುಖದ ಭಾವನೆಗಳು, ಅಂದರೆ ನವರಸಗಳು, ಸಂಭಾಷಣೆಯನ್ನು ಸ್ಫುಟವಾಗಿ ಹೇಳುವ ರೀತಿ, ಧ್ವನಿಯ ಮೇಲೆ, ಹಾಗೇ ದೇಹದ ಮೇಲೆ ಹಿಡಿತ ಸಾಧಿಸಲು ಅನುಕೂಲವಾಗುವಂಥಹ ದೈಹಿಕ ಶಿಕ್ಷಣವನ್ನು ಪಡೆಯುತ್ತಾರೆ. ಮಕ್ಕಳಲ್ಲಿ ಆತ್ಮವಿಶ್ವಾಸ ಬೆಳೆಯುತ್ತದೆ. ಒಂಟಿಯಾಗಿರಬೇಕೆನ್ನುವ ಸಂಕೋಚ ಮನೋಭಾವ ಹೋಗಿ ಇತರರ ಜೊತೆ ಸೇರಿ ಕಲಿಯುವ ಅಭ್ಯಾಸವಾಗುತ್ತದೆ. ತರಹ ತರಹದ ನಡಿಗೆ ಕಲಿಯುವುದರಿಂದ, ನಡಿಗೆಯಲ್ಲಿ ತನ್ನದೇ ಆದ ಒಂದು ವೈಶಿಷ್ಟ್ಯ ಕಾಣಲು ಸಿಗುತ್ತದೆ. ಸಮಯಪ್ರಜ್ಞೆ ಮೂಡಿಬರುತ್ತದೆ. ಅಂದರೆ ಯಾವ ಕಾಲಕ್ಕೆ ಯಾವ ಮುಖಭಾವ ತೋರಿಸಬೇಕು? ಕೊಂಚ ತಡವಾದರೆ ಹೇಗೆ ಅಭಾಸವಾಗುತ್ತದೆ? ಪಾತ್ರದ ಸುಖ-ದುಃಖಗಳ ಬಗ್ಗೆ ಅರಿವುಂಟಾಗಿ ಅನುಭವಿಸುವುದರ ಅನುಭವವುಂಟಾಗುತ್ತದೆ. ಸ್ವಂತ ಭಾವನೆಗಳನ್ನು ತೋರಲು ಒಂದು ಒಳ್ಳೆಯ ಅವಕಾಶ ಸಿಕ್ಕುತ್ತದೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೧**

ಹೆಸರು: ಸೈಯದ್ ಬಿ.

ವಯಸ್ಸು: ೨೪

ಲಿಂಗ: ಪುರುಷ

ಊರು: ಕಬ್ಬಿಗೆರೆ

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಈ ಲೇಖನವು ಯಾರು ಬರೆದಿರುವುದು ಎಂಬುದರ ಬಗ್ಗೆ ಅನುಮಾನವಿದೆ. ಈ ಲೇಖನ ಬರೆದಿರುವುದೋ ಹೆಣ್ಣೋ ಗಂಡೋ ಎಂದು. ಏಕೆಂದರೆ, ಈ ಲೇಖನದಲ್ಲಿ ಚಿಂತನೆಗಳು ಅಭಿಪ್ರಾಯಗಳು ಪುರುಷ ಮತ್ತು ಸ್ತ್ರೀ ಇಬ್ಬರೂ ಬಳಸುವ ರೀತಿಯ ಅಭಿಪ್ರಾಯಗಳು ಇವೆ. ಆದ್ದರಿಂದ ನನಗೆ ಈ ಲೇಖನ ಯಾರು ಬರೆದಿದ್ದಾರೆಂಬ ಅನುಮಾನದಲ್ಲಿ ಇದ್ದೀನಿ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೨**

ಹೆಸರು: ---

ವಯಸ್ಸು: ೨೮

ಲಿಂಗ: ---

ಊರು: ಚಿಕ್ಕನಾಯಕನಹಳ್ಳಿ

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಈ ಬರವಣಿಗೆಯನ್ನು ಹೆಣ್ಣು ಬರೆದಿದ್ದಾರೆಂದು ನನಗೆ ಅನಿಸುತ್ತಿದೆ. ಏಕೆಂದರೆ ಇಲ್ಲಿ ಬಂದಿರುವಂತಹ ಅಂಶಗಳು ಕೂಡ ಸ್ತ್ರೀಯನ್ನು ಕುರಿತ ಅಂಶಗಳಾಗಿವೆ. ಹಾಗೆಯೇ ಮಕ್ಕಳ ಜೊತೆ ಕೆಲಸ ಮಾಡುವುದೆಂದರೆ ನನಗೆ ಬಹಳ ಇಷ್ಟ ಎಂಬ ಮಾತನ್ನು ಕೇಳಿದಾಗ ಸ್ತ್ರೀ ಬರೆದಿರುತ್ತಾರೆ ಎಂದು ನನಗೆ ಅನಿಸುತ್ತದೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೩**

ಹೆಸರು: ನಿರ್ಮಲ ಎಂ.

ವಯಸ್ಸು: ೩೦

ಲಿಂಗ: ಮಹಿಳೆ

ಊರು: ಜಗಳೂರು

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಈ ಸಾರಾಂಶ ಬರೆದವರು ಮಹಿಳೆ. ಕಾರಣ: ಲೇಖಕರು ಹೇಳುವಂತೆ ನಾಟಕವೆನ್ನುವುದು ಮೂಲತಃ ಒಂದು ಜೀವಂತ ಅನುಭವ. ಅದರಲ್ಲೂ ಮಕ್ಕಳ ನಾಟಕಗಳು ವಿಶಿಷ್ಟ ಕಲೆಯನ್ನು ಅನಾವರಣಗೊಳಿಸುವಂತದು. ಹೊಸಹೊಸ ಪ್ರಯೋಗಗಳನ್ನು ಹುಟ್ಟುಹಾಕುವಂತವುಗಳಾಗಿರುತ್ತವೆ. ಈ ಸಾರಾಂಶದಲ್ಲಿ ಮಕ್ಕಳ ಪ್ರತಿಭೆ ಮತ್ತು ಅವರ ಕಲಿಕೆಯ ಸೂಕ್ಷ್ಮ ಅಂಶಗಳಿರುವುದರಿಂದ ಅವುಗಳನ್ನು ಹತ್ತಿರದಿಂದ ಗಮನಿಸುವ ತಾಯಿಗೆ ಅವು ಹೆಚ್ಚು ಅರ್ಥವಾಗಿರುತ್ತವೆ. ಅಂತಹ ಅನುಭವಗಳನ್ನು ಒಂದು ತಾಯಿ ಮನಸ್ಸು ಇಲ್ಲಿ ಅಕ್ಷರ ರೂಪಕ್ಕಿಳಿಸಿದೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೪**

ಹೆಸರು: ನಾಗರಾಜ್

ವಯಸ್ಸು: ೨೨

ಲಿಂಗ: ಪುರುಷ

ಊರು: ಹಾವೇರಿ

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಈ ಒಂದು ಬರಹ ಗಂಡಿನದ್ದು. ಇಲ್ಲಿಯ ಬರವಣಿಗೆಯ ಶೈಲಿಯ ಗಂಡಿನದ್ದಾಗಿದೆ. ಭಾವನೆಗಳು ಸಹ ಗಂಡಿನ ಧ್ವನಿಯಲ್ಲಿ ಕಂಡುಬರುತ್ತಿವೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೫**

ಹೆಸರು: ಲೋಹಿತೇಶ್ವರಿ ಎಸ್.ಪಿ.

ವಯಸ್ಸು: ೨೩

ಲಿಂಗ: ಮಹಿಳೆ

ಊರು: ಚಳ್ಳಕೆರೆ

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಇಲ್ಲಿ ಮಹಿಳೆ ಮಾತಾಡಿರುವುದು ಕಂಡುಬರುತ್ತದೆ. ಮಕ್ಕಳ ಮನಸ್ಸು ತಾಯಿಗೆ ಮಾತ್ರ ತಿಳಿದಿರುತ್ತದೆ. ಆದ್ದರಿಂದ ನಾವು ಇಲ್ಲಿ ಮಾತಾಡಿರುವವರು ಮಕ್ಕಳ ಮನಸ್ಸಿನ ಮೇಲೆ ಬೀರಬಹುದಾದ ಪರಿಣಾಮ ಮತ್ತು ಅವರ ಭವಿಷ್ಯ ರೂಪಿಸುವ ಮಾದರಿಯನ್ನು ಗಮನದಲ್ಲಿರಿಸಿಕೊಂಡಿರುವುದು ಕಂಡು ಬರುವುದರಿಂದ ನಮಗೆ ಮಹಿಳೆ ಮಾತಾಡಿದ್ದಾಳೆಂದು ತೋರುತ್ತದೆ.

**ಬರಹ-೭ ಲೇಖಕರು: ಅರ್ಚನ ಎಂ.ಎಸ್, ಕೃತಿ: ಪ್ರಾಚೀನ ಭಾರತದ ಇತಿಹಾಸ, ಪ್ರಕಟಣೆ-೨೦೧೦.**

ಮೌರ್ಯ ಸಾಮ್ರಾಜ್ಯದ ಸ್ಥಾಪಕ ಚಂದ್ರಗುಪ್ತ ಮೌರ್ಯ. ತಂದೆಯನ್ನು ಕಳೆದುಕೊಂಡಿದ್ದ ಚಂದ್ರಗುಪ್ತ ಮೌರ್ಯನನ್ನು ತಕ್ಷಶಿಲೆಯ ಬ್ರಾಹ್ಮಣನಾದ ಚಾಣಕ್ಯನು ಕರೆದೊಯ್ದು ಅಗತ್ಯ ಶಿಕ್ಷಣವನ್ನು ನೀಡಿದನು. ಇವನು ತನ್ನ ಗುರುವಾದ ಚಾಣಕ್ಯನ ನೆರವಿನಿಂದ ಈ ಸಾಮ್ರಾಜ್ಯವನ್ನು ಸ್ಥಾಪಿಸಿದನು.

ಚಂದ್ರಗುಪ್ತ ಮೌರ್ಯನು ಚಾಣಕ್ಯನ ಸಹಾಯದಿಂದ ನಂದ ಸಂತತಿಯ ಕೊನೆಯ ದೊರೆಯಾದ ಧನನಂದನನ್ನು ಕ್ರಿಪೂ ೩೨೧ರಲ್ಲಿ ಕೊಂದು, ಆತನ ಕ್ರೂರ ಆಡಳಿತವನ್ನು ಕೊನೆಗೊಳಿಸಿ ಮಗಧವನ್ನು ಆಕ್ರಮಿಸುವ ಮೂಲಕ ಮೌರ್ಯ ಸಾಮ್ರಾಜ್ಯಕ್ಕೆ ಅಡಿಪಾಯ ಹಾಕಿದ್ದು ವಿಶಾಖದತ್ತನ ಮುದ್ರಾರಾಕ್ಷಸದಲ್ಲಿ ಉಲ್ಲೇಖವಿದೆ. ಬೌದ್ಧ ಮೂಲಗಳ ಪ್ರಕಾರ ಈ ಹಿಂದೆ ಚಾಣಕ್ಯನು ನಂದರು ಆಳುತ್ತಿದ್ದ ಪಾಟಲೀಪುತ್ರಕ್ಕೆ ಭೇಟಿ ನೀಡಿದ್ದು, ಆ ಸಂದರ್ಭದಲ್ಲಿ ನಂದರಿಂದ ಅಪಮಾನಿತನಾಗಿದ್ದನು. ಈ ಮಧ್ಯೆ ಚಂದ್ರಗುಪ್ತನ ತಾಯಿ ಮೋರಿಯಾನಗರದ ರಾಜನ ಪತ್ನಿಯಾಗಿದ್ದು, ರಾಜನು ಕೊಲೆಯಾದ ನಂತರ ಆಕೆಯನ್ನು ಪಾಟಲಿಪುತ್ರಕ್ಕೆ ಕರೆತರಲಾಯಿತು. ಆಕೆ 'ಚಂದ್ರಗುಪ್ತ'ನೆಂಬ ಮಗುವಿಗೆ ಜನ್ಮವಿತ್ತಳು. ಚಂದ್ರಗುಪ್ತನು ಯುವಕನಿರುವಾಗಲೇ ಪಂಜಾಬಿನಲ್ಲಿ ಅಲೆಗ್ಸಾಂಡರ್‌ನನ್ನು ಸಂಧಿಸಿದ್ದನು. ಇದರ ಬಗ್ಗೆ ಪ್ಲುಟಾರ್ಕ್‌ನ ಬರವಣಿಗೆಯಲ್ಲಿ ಕಾಣಬಹುದಾಗಿದೆ. ಅಲೆಗ್ಸಾಂಡರ್‌ನನ್ನು ಅಪಮಾನಗೊಳಿಸಿದ ಕಾರಣ ಚಂದ್ರಗುಪ್ತನನ್ನು ಕೊಲೆಗೈಯಲು ಆಜ್ಞೆ ಮಾಡಲಾಗಿತ್ತು. ಆತನು ತಪ್ಪಿಸಿಕೊಂಡು ಅಡವಿಯಲ್ಲಿ ರಕ್ಷಣೆ ಪಡೆಯುತ್ತಿದ್ದ ವೇಳೆ ಚಾಣಕ್ಯನನ್ನು ಅನಿರೀಕ್ಷಿತವಾಗಿ ಸಂಧಿಸಿದನು. ಬಾಲಕನಲ್ಲಿದ್ದ ವಿಶೇಷ ನಾಯಕತ್ವದ ಗುಣಗಳನ್ನು ಗುರುತಿಸಿದ ಚಾಣಕ್ಯ ಅವನೊಬ್ಬ ರಾಜನಾಗುವಂತೆ ತಕ್ಷಶಿಲೆಯಲ್ಲಿ ೮ ವರ್ಷಗಳ ತರಬೇತಿ ನೀಡಿದನು. ಪ್ಲುಟಾರ್ಕ್‌ನ ಬರವಣಿಗೆಗಳಲ್ಲಿ ಚಂದ್ರಗುಪ್ತ ಮೌರ್ಯನು ತಕ್ಷಶಿಲೆಯಲ್ಲಿದ್ದುದನ್ನು ಉಲೇಖಿಸುತ್ತವೆ.

**ವಾಯುವ್ಯ ಭಾರತದ ದಿಗ್ವಿಜಯ**

ಚಂದ್ರಗುಪ್ತನು ಚಾಣಕ್ಯನ ಮಾರ್ಗದರ್ಶನದಡಿಯಲ್ಲಿ ಒಂದು ಬಲಿಷ್ಠ ಸೈನ್ಯವನ್ನು ಕಟ್ಟಿದನು. ಗ್ರೀಕ್ ಮತ್ತು ಜೈನ ಸಾಹಿತ್ಯಾಧಾರಗಳ ಪ್ರಕಾರ ಚಂದ್ರಗುಪ್ತನು. ಕ್ರಿಪೂ. ೩೨೩ರಲ್ಲಿ ಅಲೆಗ್ಸಾಂಡರ್‌ನ ಮರಣಾನಂತರ ವಾಯುವ್ಯ ಭಾರತದ ಗ್ರೀಕ್ ಪ್ರದೇಶಗಳನ್ನು ಸ್ವತಂತ್ರಗೊಳಿಸಿದನು. ಆ ಮೂಲಕ ವಾಯುವ್ಯ ಭಾರತದ ಮೇಲೆ ಹತೋಟಿ ಸಾಧಿಸಿದನು. ಜಸ್ಟಿನ್‌ನ ಪ್ರಕಾರ 'ಅಲೆಗ್ಸಾಂಡರ್‌ನ ಸಾವಿನ ನಂತರ ಭಾರತವು ದಾಸ್ಯದ ಶೃಂಖಲೆಯನ್ನು ಕಿತ್ತೊಗೆಯಲು ಗವರ್ನರುಗಳನ್ನು ಕೊಂದಿತು' ಎಂದಿದ್ದಾನೆ.

ಮಗಧದ ಆಕ್ರಮಣ: ವಾಯುವ್ಯ ಭಾರತವನ್ನು, ವಶಪಡಿಸಿಕೊಂಡ ನಂದರ ಮಗಧ ಸಾಮ್ರಾಜ್ಯದ ಮೇಲೆ ಚಾಣಕ್ಯನ ಸಹಾಯದಿಂದ ದಾಳಿ ಮಾಡಿ ಕ್ರಿಪೂ. ೩೨೧ರಲ್ಲಿ ನಂದರ ಕೊನೆಯ ದೊರೆ ಧನನಂದನನ್ನು ಕೊಂದು ಮೌರ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದನು.

ಸೆಲ್ಯೂಕಸ್‌ನೊಂದಿಗೆ ಯುದ್ಧ: ಅಲೆಗ್ಸಾಂಡರನು ಭಾರತದ ವಾಯುವ್ಯ ಭಾಗಗಳ ಮೇಲೆ ತನ್ನ ಅಧಿಪತ್ಯವನ್ನು ಸ್ಥಾಪಿಸಿ ಅವುಗಳನ್ನು ಆಳಲು ತನ್ನ ಪ್ರತಿನಿಧಿಗಳನ್ನು ನೇಮಿಸಿದ್ದನು. ಚಂದ್ರಗುಪ್ತನು ಅವರನ್ನು ಸೋಲಿಸಿ. ಅವರ ಪ್ರದೇಶಗಳನ್ನು ತನ್ನ ಸಾಮ್ರಾಜ್ಯದಲ್ಲಿ ವಿಲೀನಗೊಳಿಸಿದನು. ಅಲೆಗ್ಸಾಂಡರ್‌ನ

ಮರಣಾನಂತರ ಮಧ್ಯ ಏಷ್ಯಾದಲ್ಲಿಯ ಗ್ರೀಕ್ ಸಾಮ್ರಾಜ್ಯಕ್ಕೆ ಸೆಲ್ಯೂಕಸ್ ಅಧಿಪತಿಯಾದನು. ಕ್ರಿ.ಪೂ. ೩೦೫ರಲ್ಲಿ ಅಲೆಗ್ಸಾಂಡರ್ ಹೊಂದಿದ್ದ ಭಾರತೀಯ ಪ್ರದೇಶಗಳನ್ನು ಪುನಃ ವಶಪಡಿಸಿಕೊಳ್ಳಲು ಸಿಂಧೂ ನದಿಯನ್ನು ದಾಟಿ ಬಂದನು. ಚಂದ್ರಗುಪ್ತ ಮೌರ್ಯನು ಅವನನ್ನು ಸೋಲಿಸಿದನು. ಆದ್ದರಿಂದ ಸೆಲ್ಯೂಕಸ್ ಚಂದ್ರಗುಪ್ತನೊಂದಿಗೆ ಒಂದು ಒಪ್ಪಂದ ಮಾಡಿಕೊಳ್ಳಬೇಕಾಯಿತು. ಅದರಂತೆ ಅವನು ಕಾಬೂಲ್, ಆಫ್ಘಾನಿಸ್ತಾನ, ಕಂದಹಾರ್, ಹೀರತ್, ಗಾಂಧಾರ ಮತ್ತು ಬಲೂಚಿಸ್ಥಾನಗಳನ್ನೊಳಗೊಂಡ ವಿಸ್ತಾರವಾದ ದೇಶವನ್ನು ಚಂದ್ರಗುಪ್ತ ಮೌರ್ಯನಿಗೆ ನೀಡಿದನು. ಚಂದ್ರಗುಪ್ತ ಮೌರ್ಯನಿಗೆ ತನ್ನ ಮಗಳನ್ನು ಮದುವೆ ಮಾಡಿಕೊಟ್ಟನು. (ಅಫೈನ್ ಉಲ್ಲೇಖಿಸಿದ್ದಾನೆ). ಇದಕ್ಕೆ ಪ್ರತಿಯಾಗಿ ಚಂದ್ರಗುಪ್ತ ಮೌರ್ಯನು ಯುದ್ಧ ತರಬೇತಿ ಹೊಂದಿದ್ದ ೫೦೦ ಆನೆಗಳನ್ನು ಆತನಿಗೆ ಬಳುವಳಿಯಾಗಿ ನೀಡಿದನು. ಹಾಗೂ ಮೆಗಾಸ್ತನೀಸ್ ಎಂಬ ರಾಯಭಾರಿಯನ್ನು ಚಂದ್ರಗುಪ್ತ ಮೌರ್ಯನ ಆಸ್ಥಾನಕ್ಕೆ ಕಳುಹಿಸಿದನು. ಅವನು ಗ್ರೀಕ್‌ಭಾಷೆಯಲ್ಲಿ 'ಇಂಡಿಕಾ' ಎಂಬ ಕೃತಿ ರಚಿಸಿದ್ದಾನೆ. ಈ ಯುದ್ಧದಿಂದಾಗಿ ಮೌರ್ಯ ಸಾಮ್ರಾಜ್ಯವು ಪರ್ಷಿಯಾದವರೆಗೂ ಹಬ್ಬಿತು.

**ಪ್ರಾಯೋಗಿಕ ಅಧ್ಯಯನದ ಮಾದರಿ – ೧**

| | |
|---|---|
| ಹೆಸರು: | ಅನಿತಾ ಹೆಚ್.ವಿ. |
| ವಯಸ್ಸು: | ೨೧ |
| ಲಿಂಗ: | ಮಹಿಳೆ |
| ಊರು: | ಬೂದಗುಂಪ |
| ವಿದ್ಯಾಭ್ಯಾಸ: | (ಎಂ.ಎ., ಪಿಎಚ್.ಡಿ.,) |

ಇತಿಹಾಸವನ್ನು ಓದಿದರೆ ನೂರಕ್ಕೆ ನೂರು ಇದು ಪುರುಷ ಬರಹವಾಗಿದೆ. ಕಾರಣ: ಹೆಚ್ಚಾಗಿ ಪುರುಷರು ಇತಿಹಾಸವನ್ನು ಬಲ್ಲವರು ಅನೇಕರು ಪುರುಷರೇ ಇತಿಹಾಸತಜ್ಞರಾಗಿದ್ದಾರೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೨**

| | |
|---|---|
| ಹೆಸರು: | ಮಂಜಣ್ಣ ಪಿ. |
| ವಯಸ್ಸು: | ೩೨ |
| ಲಿಂಗ: | ಪುರುಷ |
| ಊರು: | ಮಾರಮ್ಮನಹಳ್ಳಿ |
| ವಿದ್ಯಾಭ್ಯಾಸ: | (ಎಂ.ಎ.,) |

ಈ ಗದ್ಯ ಬರೆದವರು ಪುರುಷ. ಕಾರಣ: ಭಾರತ ಮತ್ತು ಕರ್ನಾಟಕ ಚರಿತ್ರೆಗೆ ಸಂಬಂಧಿಸಿದಂತೆ ಹೆಚ್ಚು ಸಂಶೋಧನೆಗಳು ಮತ್ತು ಅಧ್ಯಯನಗಳನ್ನು ನಡೆಸಿದವರಲ್ಲಿ ಪುರುಷರೇ ಹೆಚ್ಚು. ಅದರಲ್ಲೂ ಪ್ರಾಚೀನ ಭಾರತದ ಪಠ್ಯ ಪುಸ್ತಕಗಳನ್ನು ಪುರುಷರೇ ಹೆಚ್ಚು ಬರೆದಿದ್ದಾರೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೩**

ಹೆಸರು: ಅರ್ಪಿತ ವಿ.

ವಯಸ್ಸು: ೨೩

ಲಿಂಗ: ಮಹಿಳೆ

ಊರು: ಸೂರನಹಳ್ಳಿ

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಈ ಬರವಣಿಗೆಯನ್ನು ಪುರುಷ ಬರೆದಿರುವುದೆಂದು ಹೇಳಬಹುದು. ಕಾರಣ: ಈ ಬರವಣಿಗೆಯು ಇತಿಹಾಸ ವಸ್ತುವಾಗಿರುವುದರಿಂದ ಮತ್ತು ಪಠ್ಯಪುಸ್ತಕಕ್ಕೆ ಸಂಬಂಧಿಸಿದ್ದಂತೆ ಹೆಚ್ಚು ಪುರುಷರ ಬರೆದಿರುವುದನ್ನು ಗಮನಿಸಬಹುದಾಗಿದೆ.

**ಪ್ರಾಯೋಗಿಕ ಅಧ್ಯಯನದ ಮಾದರಿ – ೪**

ಹೆಸರು: ನಟರಾಜು ಜೆ. ಆರ್.,

ವಯಸ್ಸು: ೩೦

ಲಿಂಗ: ಪುರುಷ

ಊರು: ಜೋಗಿಹಳ್ಳಿ

ವಿದ್ಯಾಭ್ಯಾಸ: (ಎಂ.ಎ., ಪಿಎಚ್.ಡಿ.,)

ಈ ಬರವಣಿಗೆ ಪುರುಷ ಕೇಂದ್ರಿತವಾದದ್ದು. ಏಕೆಂದರೆ ಇತಿಹಾಸದಲ್ಲಿ ಅಧಿಕಾರ ಪುರುಷ ಕೇಂದ್ರಿತವಾದದ್ದು. ಅದರಂತೆಯೇ ಇಲ್ಲಿಯೂ ಕೂಡ ಪುರುಷರೇ ಅಧಿಕಾರ ನಡೆಸಿದ್ದಾರೆ. ಮತ್ತು ದಕ್ಷತೆ, ಕಾರ್ಯ, ಸಾಹಸ, ಚಾಣಾಕ್ಷತೆಗಳೆಲ್ಲವೂ ಕೂಡ ಪುರುಷನಿಗೆ ಸೀಮಿತವಾದುದು. ಈ ಹಿನ್ನೆಲೆಯಲ್ಲಿ ಇಲ್ಲಿ ಪುರುಷ ಪ್ರಾಧಾನ್ಯತೆ ಕಂಡುಬಂದಿದೆ.

## ೨. ಪ್ರಶ್ನಾವಳಿ

೧. ಹೆಸರು:

೨. ವಯಸ್ಸು:

೩. ಲಿಂಗ:

೪. ಜಾತಿ:

೫. ವೃತ್ತಿ:

೬. ವಿದ್ಯಾಭ್ಯಾಸ:

೭. ಸ್ಥಳ: ಜಿಲ್ಲೆ: ಊರು:

## ೦೧. ಸಂಬೋಧನಾ ರೂಪಗಳು

**ಸಂಬೋಧಿಸುವ ಬಗೆ**

೧. ತಂದೆಯನ್ನು ಸಂಬೋಧಿಸುವ ಬಗೆ

೨. ತಾಯಿಯನ್ನು ಸಂಬೋಧಿಸುವ ಬಗೆ

೩. ತಂದೆಯ ಹಿರಿಯ ಸಹೋದರ

೪. ತಂದೆಯ ಹಿರಿಯ ಸಹೋದರನ ಹೆಂಡತಿ

೫. ತಂದೆಯ ಕಿರಿಯ ಸಹೋದರ

೬. ತಂದೆಯ ಕಿರಿಯ ಸಹೋದರನ ಹೆಂಡತಿ

೭. ತಂದೆಯ ಸಹೋದರಿಯ ಹಿರಿಯ ಗಂಡು ಮಗ

೮. ತಂದೆಯ ಸಹೋರಿಯ ಹಿರಿಯ ಹೆಣ್ಣು ಮಗಳು

೯. ತಂದೆಯ ಸಹೋದರನ ಕಿರಿಯ ಹೆಣ್ಣು ಮಗಳು

೧೦. ತಂದೆಯ ಹಿರಿಯ ಸಹೋದರಿ

೧೧. ತಂದೆಯ ಕಿರಿಯ ಸಹೋದರಿ

೧೨. ತಂದೆಯ ಹಿರಿಯ ಸಹೋದರಿಯ ಗಂಡ

೧೩. ತಂದೆಯ ಕಿರಿಯ ಸಹೋದರಿಯ ಗಂಡ

೧೪. ತಂದೆಯ ಸಹೋದರಿಯ ಹಿರಿಯ ಗಂಡು ಮಗ

೧೫. ತಂದೆಯ ಸಹೋದರಿಯ ಕಿರಿಯ ಗಂಡು ಮಗ

೧೬. ತಂದೆಯ ಸಹೋದರಿಯ ಹಿರಿಯ ಹೆಣ್ಣು ಮಗಳು

೧೭. ತಾಯಿಯ ಹಿರಿಯ ಸಹೋದರ

೧೮. ತಾಯಿಯ ಕಿರಿಯ ಸಹೋದರ

೧೯. ತಾಯಿಯ ಹಿರಿಯ ಸಹೋದರನ ಹೆಂಡತಿ

೨೦. ತಾಯಿಯ ಕಿರಿಯ ಸಹೋದರನ ಹೆಂಡತಿ

೨೧. ತಂದೆಯ ಹಿರಿಯ ಸಹೋದರಿಯ ಗಂಡ

೨೨. ತಂದೆಯ ಕಿರಿಯ ಸಹೋದರಿಯ ಗಂಡ

೨೩. ತಂದೆಯ ಸಹೋದರಿಯ ಹಿರಿಯ ಮಗ

೨೪. ತಂದೆಯ ಸಹೋದರಿಯ ಕಿರಿಯ ಮಗ

೨೫. ತಂದೆಯ ಸಹೋದರಿಯ ಹಿರಿಯ ಮಗಳು

೨೬. ತಂದೆಯ ಸಹೋದರಿಯ ಕಿರಿಯ ಮಗಳು

೨೭. ತಾಯಿಯ ಹಿರಿಯ ಸಹೋದರ

೨೮. ತಾಯಿಯ ಕಿರಿಯ ಸಹೋದರ

೨೯. ತಾಯಿಯ ಹಿರಿಯ ಸಹೋದರನ ಹೆಂಡತಿ

೩೦. ತಾಯಿಯ ಕಿರಿಯ ಸಹೋದರನ ಹೆಂಡತಿ

೩೧. ತಾಯಿಯ ಸಹೋದರನ ಹಿರಿಯ ಮಗ

೩೨. ತಾಯಿಯ ಸಹೋದರನ ಕಿರಿಯ ಮಗ

೩೩. ತಾಯಿಯ ಸಹೋದರನ ಹಿರಿಯ ಮಗಳು

೩೪. ತಾಯಿಯ ಸಹೋದರನ ಕಿರಿಯ ಮಗಳು

೩೫. ತಂದೆಯ ತಂದೆ

೩೬. ತಂದೆಯ ತಾಯಿ

೩೭. ತಾಯಿಯ ತಂದೆ

೩೮. ತಾಯಿಯ ತಾಯಿ

೩೯. ತಂದೆಯ ತಂದೆಯ ತಂದೆ

೪೦. ತಂದೆಯ ತಾಯಿಯ ತಾಯಿ

೪೧. ತಾಯಿಯ ತಂದೆಯ ತಂದೆ

೪೨. ತಾಯಿಯ ತಾಯಿಯ ತಾಯಿ

## ವೈವಾಹಿಕ ಸಂಬಂಧಗಳ ಸಂಬೋಧನಾ ರೂಪಗಳು

೧. ಹೆಂಡತಿಯ ತಂದೆ

೨. ಹೆಂಡತಿಯ ತಾಯಿ

೩. ಗಂಡನ ತಂದೆ

೪. ಗಂಡನ ತಾಯಿ

೫. ಹೆಂಡತಿಯ ತಮ್ಮ

೬. ಹೆಂಡತಿಯ ತಂಗಿ

೭. ಹೆಂಡತಿಯ ಅಣ್ಣ

೮. ಹೆಂಡತಿಯ ಅಕ್ಕ

೯. ಗಂಡನ ತಮ್ಮ

೧೦. ಗಂಡನ ತಂಗಿ

೧೧. ಗಂಡನ ಅಣ್ಣ

೧೨. ಗಂಡನ ಅಕ್ಕ

೧೩. ಹೆಂಡತಿಯ ಸಹೋದರಿಯ ಗಂಡ

೧೪. ಗಂಡನ ಸಹೋದರನ ಹೆಂಡತಿ

೧೫. ಹೆಂಡತಿಯ ಸಹೋದರನ ಹೆಂಡತಿ

೧೬. ಗಂಡನ ಸಹೋದರಿಯ ಗಂಡ

## ರಕ್ತ ಸಂಬಂಧಿಗಳಲ್ಲದವರ ನಡುವೆ ಸಂಬೋಧನೆ

**೧. ಸ್ತ್ರೀಯರು ಸಂಬೋಧಿಸುವ ಬಗೆ**

೧. ಪರಿಚಿತ ಹಿರಿಯ ಗಂಡಸರಿಗೆ

೨. ಪರಿಚಿತ ಹಿರಿಯ ಹೆಂಗಸರಿಗೆ

೩. ಅಪರಿಚಿತ ಹಿರಿಯ ಗಂಡಸರಿಗೆ

೪. ಅಪರಿಚಿತ ಹಿರಿಯ ಹೆಂಗಸರಿಗೆ

೫. ಪರಿಚಿತ ಕಿರಿಯ ಗಂಡಸರಿಗೆ

೬. ಪರಿಚಿತ ಕಿರಿಯ ಹೆಂಗಸರಿಗೆ

೭. ಅಪರಿಚಿತ ಕಿರಿಯ ಗಂಡಸರಿಗೆ

೮. ಅಪರಿಚಿತ ಕಿರಿಯ ಹೆಂಗಸರಿಗೆ

೯. ಅಪರಿಚಿತ ಸಮವಯಸ್ಸಿನ ಗಂಡಸು

೧೦. ಅಪರಿಚಿತ ಸಮವಯಸ್ಸಿನ ಹೆಂಗಸು

**೨. ಪುರುಷರು ಸಂಬೋಧಿಸುವ ಬಗೆ**

೧. ಅಪರಿಚಿತ ಕಿರಿಯ ಹೆಂಗಸರಿಗೆ

೨. ಅಪರಿಚಿತ ಹಿರಿಯ ಹೆಂಗಸರಿಗೆ

೩. ಅಪರಿಚಿತ ಸಮವಯಸ್ಸಿನ ಗಂಡಸು

೪. ಅಪರಿಚಿತ ಸಮವಯಸ್ಸಿನ ಹೆಂಗಸು

೫. ಪರಿಚಿತ ಕಿರಿಯ ಹೆಂಗಸರಿಗೆ

೬. ಪರಿಚಿತ ಹಿರಿಯ ಹೆಂಗಸರಿಗೆ

೭. ಪರಿಚಿತ ಸಮವಯಸ್ಸಿನ ಗಂಡಸು

೮. ಪರಿಚಿತ ಸಮವಯಸ್ಸಿನ ಹೆಂಗಸು

**ಒಡಪುಗಳ ಸಂಗ್ರಹ**

೧. ಯಾವ ಯಾವ ಸಂದರ್ಭಗಳಲ್ಲಿ ಒಡಪುಗಳನ್ನು ಕಟ್ಟುತ್ತೀರ

೨. ಹೆಂಗಸರು ಗಂಡಸರಿಗೆ ಕಟ್ಟುವ ಒಡಪುಗಳು

೩. ಗಂಡಸರು ಹೆಂಗಸರಿಗೆ ಕಟ್ಟುವ ಒಡಪುಗಳು

## ೩. ವಕ್ತೃ ವಿವರ

| ಕ್ರಸಂ | ಹೆಸರು | ವಯಸ್ಸು | ಲಿಂಗ | ಜಾತಿ | ವಿದ್ಯಾಭ್ಯಾಸ | ಜಿಲ್ಲೆ | ಊರು |
|---|---|---|---|---|---|---|---|
| ೧. | ಶಾಂತಮ್ಮ | ೭೫ | ಹೆಣ್ಣು | ಲಿಂಗಾಯಿತ | ಇಲ್ಲ | ದಾವಣಗೆರೆ | ಬಸವಾಪಟ್ಟಣ |
| ೨. | ಜಾನಕಮ್ಮ | ೫೨ | ಹೆಣ್ಣು | ಕುರುಬರು | ಇಲ್ಲ | ದಾವಣಗೆರೆ | ಬಸವಾಪಟ್ಟಣ |
| ೩. | ಹಾಲಪ್ಪ | ೪೮ | ಗಂಡು | ಮಾದಿಗರು | ೧೦ನೇ ತರಗತಿ | ದಾವಣಗೆರೆ | ಬಸವಾಪಟ್ಟಣ |
| ೪. | ಕವಿತ | ೨೬ | ಹೆಣ್ಣು | ಕುರುಬರು | ಬಿ.ಎ | ದಾವಣಗೆರೆ | ಬಸವಾಪಟ್ಟಣ |
| ೫. | ಸುಷ್ಮ | ೩೨ | ಹೆಣ್ಣು | ಬ್ರಾಹ್ಮಣರು | ಬಿ.ಎ | ದಾವಣಗೆರೆ | ಬಸವಾಪಟ್ಟಣ |
| ೬. | ವರಲಕ್ಷ್ಮೀ | ೨೯ | ಹೆಣ್ಣು | ಲಿಂಗಾಯಿತರು | ೧೦ನೇ ತರಗತಿ | ದಾವಣಗೆರೆ | ಬಸವಾಪಟ್ಟಣ |
| ೭. | ದೊಡ್ಡಪ್ಪ | ೭೦ | ಗಂಡು | ಆದಿಕರ್ನಾಟಕ | ಇಲ್ಲ | ದಾವಣಗೆರೆ | ಬೆಳಲಗೆರೆ |
| ೮. | ಮಾರಮ್ಮ | ೧೦೦+ | ಹೆಣ್ಣು | ಆದಿಕರ್ನಾಟಕ | ಇಲ್ಲ | ದಾವಣಗೆರೆ | ಬೆಳಲಗೆರೆ |
| ೯. | ಅನುಷ | ೧೮ | ಹೆಣ್ಣು | ಮಾದಿಗರು | ೯ನೇ ತರಗತಿ | ದಾವಣಗೆರೆ | ಕುಂಬಳೂರು |
| ೧೦. | ಬಸಪ್ಪ | ೫೮ | ಗಂಡು | ಮಾದಿಗರು | ಇಲ್ಲ | ದಾವಣಗೆರೆ | ಕುಂಬಳೂರು |
| ೧೧. | ಶೀಲ | ೩೦ | ಹೆಣ್ಣು | ಆದಿಕರ್ನಾಟಕ | ೧೦ನೇ ತರಗತಿ | ದಾವಣಗೆರೆ | ಕುಂಬಳೂರು |
| ೧೨. | ರಾಮಾಂಜನೇಯ | ೩೧ | ಗಂಡು | ವಾಲ್ಮೀಕಿ | ಪಿ.ಯು.ಸಿ | ಬಳ್ಳಾರಿ | ಸುಗ್ಗೇನಹಳ್ಳಿ |

| | | | | | | | |
|---|---|---|---|---|---|---|---|
| ೧೩. | ನರಸಿಂಹಪ್ಪ ಎನ್. | ೭೦ | ಗಂಡು | ನಾಯಕರು | ಇಲ್ಲ | ಬಳ್ಳಾರಿ | ಸುಗ್ಗೇನಹಳ್ಳಿ |
| ೧೪. | ಹುಲಿಗೆಮ್ಮ | ೭೦ | ಹೆಣ್ಣು | ಭೋವಿ | ಇಲ್ಲ | ಬಳ್ಳಾರಿ | ಸುಗ್ಗೇನಹಳ್ಳಿ |
| ೧೫. | ಮಹದೇವಮ್ಮ | ೬೦ | ಹೆಣ್ಣು | ರೆಡ್ಡಿ | ೬ನೇ ತರಗತಿ | ಬಳ್ಳಾರಿ | ಸುಗ್ಗೇನಹಳ್ಳಿ |
| ೧೬. | ಈರಪ್ಪ | ೭೫ | ಗಂಡು | ಕುರುಬರು | ಇಲ್ಲ | ಬಳ್ಳಾರಿ | ಗೋನಾಳು |
| ೧೭. | ಕೆ.ದೊಡ್ಡಮಲ್ಲೇಶಪ್ಪ | ೭೮ | ಗಂಡು | ಕುರುಬರು | ಇಲ್ಲ | ಬಳ್ಳಾರಿ | ಗೋನಾಳು |
| ೧೮. | ಲೀಲಾವತಿ | ೧೯ | ಹೆಣ್ಣು | ಲಿಂಗಾಯಿತ | ೧೦ನೇ ತರಗತಿ | ಬಳ್ಳಾರಿ | ಗೋನಾಳು |
| ೧೯. | ಏಕಾಕ್ಷಮ್ಮ | ೬೫ | ಹೆಣ್ಣು | ಲಿಂಗಾಯಿತ | ಇಲ್ಲ | ಬಳ್ಳಾರಿ | ಜವುಕು |
| ೨೦. | ಯಲ್ಲಮ್ಮ | ೪೫ | ಹೆಣ್ಣು | ಚೆಲುವಾದಿ | ಇಲ್ಲ | ಬಳ್ಳಾರಿ | ಜವುಕು |
| ೨೧. | ರಂಗಯ್ಯ | ೭೫ | ಗಂಡು | ಒಕ್ಕಲಿಗ | ಇಲ್ಲ | ತುಮಕೂರು | ಕ್ಯಾತಸಂದ್ರ |
| ೨೨. | ರತ್ನ | ೩೫ | ಹೆಣ್ಣು | ಒಕ್ಕಲಿಗ | ೧೦ನೇ ತರಗತಿ | ತುಮಕೂರು | ಕ್ಯಾತಸಂದ್ರ |
| ೨೩. | ಸುಬ್ಬಮ್ಮ | ೬೦ | ಹೆಣ್ಣು | ರಾಯರು | ಇಲ್ಲ | ಬೆಂಗಳೂರು ಗ್ರಾಮಾಂತರ | ಕರೇನಹಳ್ಳಿ |
| ೨೪. | ಆರೋಗ್ಯ ಮೇರಿ | ೨೯ | ಹೆಣ್ಣು | ತಿಗುಳರು | ೧೦ನೇ ತರಗತಿ | ಬೆಂಗಳೂರು ಗ್ರಾಮಾಂತರ | ಸೋಮನಹಳ್ಳಿ |
| ೨೫. | ಜಯಲಕ್ಷ್ಮಿ | ೪೫ | ಹೆಣ್ಣು | ಹೊಲೆಯರು | ಬಿ.ಎ | ಬೆಂಗಳೂರು ಗ್ರಾಮಾಂತರ | ಗಾಂಧಿನಗರ |

## ೪. ಪರಾಮರ್ಶನ ಗ್ರಂಥಗಳು


೦೧. ಅಂಗಡಿ ಎಸ್.ಎಸ್., ೨೦೦೨, **ಸಂಬಂಧವಾಚಕಗಳು ಮತ್ತು ಸಂಬೋಧನೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

೦೨. ಅನುಪಮಾ ಎಚ್.ಎಸ್., ೨೦೧೨, **ಮಹಿಳೆ ದಲಿತತ್ವ ಮತ್ತು ರಾಜಕೀಯ ಪ್ರಜ್ಞೆ**, ಲಡಾಯಿ ಪ್ರಕಾಶನ, ಗದಗ.

೦೩. ಇಂದಿರಾ ಜೈಪ್ರಕಾಶ್, ೨೦೦೯, **ಸ್ತ್ರೀವಾದಿ ಮನೋವಿಜ್ಞಾನ**, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೪. **ಕನ್ನಡ ಉಪಭಾಷಾ ಪದಕೋಶ**, ಕನ್ನಡ ಭಾಷಾಧ್ಯಾಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೫. ಕಲಬುರ್ಗಿ ಎಂ.ಎಂ., ೧೯೮೯, **ಕನ್ನಡ ನಾಮ ವಿಜ್ಞಾನ**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.

೦೬. ಕವಿತಾ ರೈ, ೨೦೦೯, **ಮಹಿಳೆ: ಅಸ್ತಿತ್ವದ ಸಂಕಥನ**, ಪ್ರಗತಿ ಗ್ರಾಫಿಕ್ಸ್ ಬೆಂಗಳೂರು.

೦೭. ಕೃಷ್ಣ ಪರಮೇಶ್ವರ ಭಟ್ಟ್, ೨೦೧೩, **ಭಾಷೆ ಮತ್ತು ಸಾಮಾಜಿಕ ಸಂದರ್ಭ**, ಅಭಿನವ ಪ್ರಕಾಶನ, ಬೆಂಗಳೂರು.

೦೮. ಕೃಷ್ಣ ಪರಮೇಶ್ವರ ಭಟ್ಟ್, ನಾಗಭೂಷಣ ಸಿ., ೨೦೦೨, **ಕನ್ನಡ ರಚನೆ ಮತ್ತು ಬಳಕೆ**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು.

೦೯. ಕೆಂಪೆಗೌಡ ಕೆ., ೧೯೯೬, **ತೌಲನಿಕ ದ್ರಾವಿಡ ಭಾಷಾ ವಿಜ್ಞಾನ**, ಭಾರತೀ ಪ್ರಕಾಶನ, ಮೈಸೂರು.

೧೦. ಗಣಪತಿಭಟ್ಟ ಕೆ., ೧೯೯೬, **ಸಿರಿಗನ್ನಡ ಭಾಷಾ ಬೋಧಿನಿ**, ಗೌರಿಶಂಕರ್ ಬುಕ್ ಡಿಪೋ, ಬೆಂಗಳೂರು.

೧೧. ಚಂದ್ರಶೇಖರ ನಂಗಲಿ ವಿ., ೧೯೯೫, **ಮಾರ್ಕ್ಸ್‌ವಾದಿ ವಿಮರ್ಶೆ**, ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು,

೧೨. ತಮಿಳ್ ಸೆಲ್ವಿ(ಅನು), ೨೦೧೨, **ನಾನು ಅವನಲ್ಲ.... ಅವಳು.....!**, ಮೂಲ: ಲೀವಿಂಗ್ ಸ್ಮೈಲ್ ವಿದ್ಯಾ, ಪ್ರಗತಿ ಪುಸ್ತಕ ಮಾಲೆ.

೧೩. ಧಾರವಾಡಕರ ರಾ.ಯ., ೧೯೯೮, **ಕನ್ನಡ ಭಾಷಾಶಾಸ್ತ್ರ**, ಗೀತಾ ಬುಕ್ ಹೌಸ್, ಮೈಸೂರು.

೧೪. ನರಸಿಂಹಾಚಾರ್ ಡಿ.ಎಲ್(ಸಂ)., ೨೦೦೧, **ಕೇಶಿರಾಜ ವಿರಚಿತ ಶಬ್ದಮಣಿದರ್ಪಣಂ**, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೧೫. ನಾಗಭೂಷಣಸ್ವಾಮಿ ಓ.ಎಲ್., ೧೯೯೮, **ವಿಮರ್ಶೆಯ ಪರಿಭಾಷೆ**, ಅಂಕಿತ ಪ್ರಕಾಶನ, ಬೆಂಗಳೂರು.

೧೬. ನಾಗಭೂಷಣಸ್ವಾಮಿ ಓ.ಎಲ್., ೨೦೧೩, **ನುಡಿಯೊಳಗಾಗಿ**, ಲಕ್ಷ್ಮೀ ಮುದ್ರಣಾಲಯ, ಬೆಂಗಳೂರು.

೧೭. ನಾಗರಾಜಯ್ಯ ಹಂ.ಪ., ೧೯೬೬, **ದ್ರಾವಿಡ ಭಾಷಾ ವಿಜ್ಞಾನ**, ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು.

